ತ್ರಿಕ್ಕಿಕ್ಕಿಟಾಕಾರಂ ಜುಹೋತಿ ಕಿಕ್ಕಿಟಾಕಾರೇಣ ವೈ ಗ್ರಾಮ್ಯಾಃ

ಪಶವೋ ರಮಂತೇ ಪ್ರಾರಣ್ಯಾಃ ಪತಂತಿ ಯತ್ಕಿಕ್ಕಿಟಾಕಾರಂ

ಜುಹೋತಿ ಗ್ರಾಮ್ಯಾಣಾಂ ಪಶೂನಾಂ ಧೃತ್ಯೈ೮

---

ಕಿಕ್ಕಿಟಾಕಾರಮಿತಿ ಕಿಕ್ಕಿಟಾ-ಕಾರಮ್ । ಜುಹೋತಿ । ಕಿಕ್ಕಿಟಾಕಾರೇಣೇತಿ ಕಿಕ್ಕಿಟಾ-ಕಾರೇಣ । ವೈ । ಗ್ರಾಮ್ಯಾಃ । ಪಶವಃ । ರಮಂತೇ । ಪ್ರೇತಿ । ಆರಣ್ಯಾಃ । ಪತಂತಿ । ಯತ್ । ಕಿಕ್ಕಿಟಾಕಾರಮಿತಿ ಕಿಕ್ಕಿಟಾ-ಕಾರಮ್ । ಜುಹೋತಿ । ಗ್ರಾಮ್ಯಾಣಾಮ್ । ಪಶೂನಾಮ್ । ಧೃತ್ಯೈ೮ ।

---

### ಪಶುಗಳಿಗೆ ಪ್ರಿಯವಾದ ಕಿಕ್ಕಿಟಾಕಾರವಿಧಿ; ಬ್ರಾಹ್ಮಣ

| | |
|---|---|
| *ಕಿಕ್ಕಿಟಾಕಾರಮ್ ಜುಹೋತಿ | ಪಶುಗಳಿಗೆ ಪ್ರಿಯವಾದ ಧ್ವನಿಯನ್ನು ಅನುಕರಣೆ ಮಾಡಿ ಹೋಮ ಮಾಡಬೇಕು. |
| ಗ್ರಾಮ್ಯಾಃ ಪಶವಃ<br>ಕಿಕ್ಕಿಟಾಕಾರೇಣ ರಮಂತೇ ವೈ | ಈ ಧ್ವನಿಯಿಂದ ಹಸು ಮೇಕೆ ಮೊದಲಾದ ಗ್ರಾಮ್ಯಪಶುಗಳು ಸಂತೋಷಿಸುತ್ತವೆ. |
| ಆರಣ್ಯಾಃ ಪ್ರ ಪತಂತಿ | ಕಾಡಿನ ಪ್ರಾಣಿಗಳು ದೂರಕ್ಕೆ ಓಡಿ ಹೋಗುತ್ತವೆ. |
| ಕಿಕ್ಕಿಟಾಕಾರಮ್ ಜುಹೋತಿ<br>[ಇತಿ]ಯತ್ | ಹೋಮಕಾಲದಲ್ಲಿ ಕಿಕ್ಕಿಟಾಕಾರವನ್ನು ಮಾಡುವು ದೆಂಬುದು |
| ಗ್ರಾಮ್ಯಾಣಾಮ್ ಪಶೂನಾಮ್<br>ಧೃತ್ಯೈ೮ | ಹಳ್ಳಿಯಲ್ಲಿರುವ ಹಸುವೇ ಮುಂತಾದ ಪ್ರಾಣಿಗಳ ಧಾರಣೆಗೆ ಕಾರಣವಾಗುತ್ತದೆ. |

---

*ಸಾಧುಪಶುಗಳನ್ನು ಸಂತೋಷಪಡಿಸುವುದಕ್ಕಾಗಿ ಹಳ್ಳಿಗರು ನಾನಾವಿಧವಾದ ಧ್ವನಿಗಳನ್ನು ಮಾಡುತ್ತಾರೆ. ಇದಕ್ಕೆ ಹೊಂದಿಕೊಂಡ ಗ್ರಾಮ್ಯಪಶುಗಳು ಆ ಶಬ್ದವನ್ನು ಕೇಳಿ ಪ್ರೀತಿಯಿಂದ ಸಮೀಪಕ್ಕೆ ಬರುತ್ತವೆ. ಆರಣ್ಯಪಶುಗಳು ಓಡಿಹೋಗುತ್ತವೆ. ಆ ಧ್ವನಿಗಳ ಅನುಕರಣೆಯೇ ಕಿಕ್ಕಿಟಾಕಾರ.

ಪರ್ಯಗ್ನೌ ಕ್ರಿಯಮಾಣೇ ಜುಹೋತಿ

ಜೀವಂತೀಮೇವೈನಾಗ್ಂ ಸುವರ್ಗಂ ಲೋಕಂ ಗಮಯತಿ

ತ್ವಂ ತುರೀಯಾ ವಶಿನೀ ವಶಾಽಸೀತ್ಯಾಹ

---

ಪರ್ಯಗ್ನಾವಿತಿ ಪರಿ–ಅಗ್ನೌ । ಕ್ರಿಯಮಾಣೇ । ಜುಹೋತಿ । ಜೀವಂತೀಮ್ । ಏವ । ಏನಾಮ್ । ಸುವರ್ಗಮಿತಿ ಸುವಃ–ಗಮ್ । ಲೋಕಮ್ । ಗಮಯತಿ । ತ್ವಮ್ । ತುರೀಯಾ । ವಶಿನೀ । ವಶಾ । ಅಸಿ । ಇತಿ । ಆಹ ।

---

## ಹೋಮಕಾಲವಿಧಿ; ಬ್ರಾಹ್ಮಣ

| | |
|---|---|
| ಪರ್ಯಗ್ನೌ ಕ್ರಿಯಮಾಣೇ [ಸತಿ]ಜುಹೋತಿ | ಪಶುವಿನ ಪರ್ಯಗ್ನಿಕರಣವಾಗುತ್ತಿರುವಾಗ ಈ ಹೋಮಗಳನ್ನು ಮಾಡಬೇಕು. |
| ಜೀವಂತೀಮ್ ಏವ ಏನಾಮ್ | [ಇದರಿಂದ] ಈ ವಶಾಪಶುವನ್ನು ಪ್ರಾಣಸಹಿತವಾಗಿಯೇ |
| ಸುವರ್ಗಮ್ ಲೋಕಮ್ ಗಮಯತಿ | ಸ್ವರ್ಗಲೋಕವನ್ನು ಹೊಂದಿಸಿದವನಾಗುತ್ತಾನೆ. |

## ಅನುಮಂತ್ರಣಮಂತ್ರದ ಅಭಿಪ್ರಾಯ

| | |
|---|---|
| ತ್ವಮ್ ತುರೀಯಾ ವಶಿನೀ ವಶಾ ಅಸಿ ಇತಿ ಆಹ | ಅನುಮಂತ್ರಣಮಂತ್ರವು 'ನೀನು ಜಿತೇಂದ್ರಿಯಳಾದ ವಶೆ' ಮುಂತಾಗಿ ಹೇಳುತ್ತದೆ. |

---

ಪುರೋಡಾಶಚರುಯಾಗಾದಿಗಳಲ್ಲಿ 'ಪುರೋಡಾಶಂ ನಿರ್ವಪೇತ್' 'ಚರುಂ ನಿರ್ವಪೇತ್' ಎಂದು ಇದ್ದರೂ 'ನಿರ್ವಪೇತ್' ಎಂಬ ಪದವು ಯಾಗವನ್ನು ಮಾಡಬೇಕು ಎಂಬ ಅರ್ಥವನ್ನೇ ತಿಳಿಸುತ್ತದೆ ಎಂಬುದು ಶಾಸ್ತ್ರಸಿದ್ಧಾಂತ.

ದೇವತ್ರೈವೈನಾಂ ಗಮಯತಿ ಸತ್ಯಾಸ್ಸಂತು ಯಜಮಾನಸ್ಯ

ಕಾಮಾ ಇತ್ಯಾಹೈಷ ವೈ ಕಾಮೋ[ಕಾಮಃ(೧೧)]

ಯಜಮಾನಸ್ಯ ಯದನಾರ್ತ ಉದೃಚಂ ಗಚ್ಛತಿ

---

ದೇವತ್ರೇತಿ ದೇವ-ತ್ರಾ । ಏವ । ಏನಾಮ್ । ಗಮಯತಿ । ಸತ್ಯಾಃ । ಸಂತು ।

ಯಜಮಾನಸ್ಯ । ಕಾಮಾಃ । ಇತಿ । ಆಹ । ಏಷಃ । ವೈ । ಕಾಮಃ ।(೧೧)।

ಯಜಮಾನಸ್ಯ । ಯತ್ । ಅನಾರ್ತಃ । ಉದೃಚಮಿತ್ಯುತ್-ಋಚಮ್ । ಗಚ್ಛತಿ ।

---

| | |
|---|---|
| ಏನಾಮ್ ದೇವತ್ರಾ ಏವ ಗಮಯತಿ | [ಇದರಲ್ಲಿ 'ಗಚ್ಛ ದೇವಾನ್' ಎಂದಿರುವುದರಿಂದ] ಪಶುಗಳನ್ನು ದೇವತೆಗಳಿಗೆ ಒಪ್ಪಿಸಿದಂತೆಯೇ ಆಗುತ್ತದೆ. |

**ಮಂತ್ರದ ಕೊನೆಯ ಭಾಗದ ವಿವರಣೆ**

| | |
|---|---|
| ಸತ್ಯಾಃ ಸಂತು ಯಜಮಾನಸ್ಯ ಕಾಮಾಃ ಇತಿ ಆಹ | 'ಯಜಮಾನನ ಕಾಮನೆಗಳು ಸಿದ್ಧಿಸಲಿ' ಎಂದು ಈ ಮಂತ್ರದ ಕೊನೆಯ ಭಾಗವು ಹೇಳುತ್ತದೆ/ ಅಧ್ವರ್ಯುವು ಹೇಳುತ್ತಾನೆ. |
| ಅನಾರ್ತಃ ಉದೃಚಮ್ ಗಚ್ಛತಿ [ಇತಿ] ಯತ್ | ಈ ಯಜ್ಞವು ವಿಘ್ನಗಳಿಲ್ಲದೆ ಸಮಾಪ್ತಿಯನ್ನು ಹೊಂದಲಿ ಎಂಬುದು ಯಾವುದಿದೆಯೋ |
| ಏಷಃ ವೈ ಯಜಮಾನಸ್ಯ ಕಾಮಃ | ಇದೇ ಯಜಮಾನನ ಮುಖ್ಯವಾದ ಕಾಮನೆಯಷ್ಟೆ. |

---

ವಾಯುದೇವತಾಕವಾದ ಋಕ್ಕಿನಿಂದ ಪಶುವಿನ ದೇವತಾನಿರ್ದೇಶವನ್ನು ಮಾಡಬೇಕು. ಸಂಕಲ್ಪ ಇಷ್ಟಾರ್ಥಗಳ ಸಿದ್ಧಿಗಾಗಿ ಈ ಹೋಮವನ್ನು ಮಾಡುತ್ತೇನೆಂದು ಹೇಳಿ ಮಂತ್ರವನ್ನು ಹೇಳಿದ ಬಳಿಕ ಕಿಕ್ಕಿಟಾಕಾರಧ್ವನಿಯನ್ನು ಮಾಡಿ ಹೋಮವನ್ನು ಅನುಷ್ಠಿಸಬೇಕು.

ತಸ್ಮಾದೇವಮಾಹಾಜಾಽಸಿ ರಯಿಷ್ಠೇತ್ಯಾಹೈಷ್ವೇವೈನಾಂ
ಲೋಕೇಷು ಪ್ರತಿಷ್ಠಾಪಯತಿ

---

ತಸ್ಮಾತ್ । ಏವಮ್ । ಆಹ । ಅಜಾ । ಅಸಿ । ರಯಿಷ್ಠೇತಿ ರಯಿ-ಸ್ಥಾ । ಇತಿ । ಆಹ ।
ಏಷು । ಏವ । ಏನಾಮ್ । ಲೋಕೇಷು । ಪ್ರತೀತಿ । ಸ್ಥಾಪಯತಿ ।

---

| | |
|---|---|
| ತಸ್ಮಾತ್ ಏವಮ್ ಆಹ | ಆದುದರಿಂದ ಮಂತ್ರವು ಹೀಗೆ ಹೇಳುತ್ತದೆ/ ಅಧ್ವರ್ಯುವು ಹೀಗೆ ಹೇಳುತ್ತಾನೆ. |

ಅನುಮಂತ್ರಣಮಂತ್ರದ ಮೊದಲ ಭಾಗದ ತಾತ್ಪರ್ಯ

| | |
|---|---|
| ಅಜಾ ಅಸಿ ರಯಿಷ್ಠಾ ಇತಿ ಆಹ | ನೀನು ಜಾತಿಯಿಂದ ಅಜೆಯಾಗಿರುವೆಯೆಂದು ಈ ಮಂತ್ರದ ಆದಿಭಾಗವು ಹೇಳುತ್ತದೆ. |
| ಏನಾಮ್ ಏಷು ಲೋಕೇಷು ಏವ ಪ್ರತಿಷ್ಠಾಪಯತಿ | ಅಧ್ವರ್ಯುವು ಈ ಮಂತ್ರದಿಂದ ಈ ಪಶುವನ್ನು ಮೂರು ಲೋಕಗಳಲ್ಲಿಯೂ ಪ್ರತಿಷ್ಠಿತವಾಗಿರುವಂತೆ ಮಾಡುತ್ತಾನೆ. |

---

ಇದರಿಂದ ಗ್ರಾಮ್ಯಪಶುಗಳ ಧಾರಣೆಯಾಗುತ್ತದೆ.

ಪರ್ಯಗ್ನಿಕರಣವಾಗುವಾಗಲೇ ಹೋಮಗಳನ್ನು ಮಾಡುವುದರಿಂದ ಪಶುವು ಬದುಕಿರುವಾಗಲೇ ಅದನ್ನು ಸ್ವರ್ಗಲೋಕಕ್ಕೆ ಕಳಿಸಿದಂತಾಗುತ್ತದೆ.

ಪಶುವನ್ನು *ಶಾಮಿತ್ರಸ್ಥಾನಕ್ಕೆ ಒಯ್ಯುವಾಗ ಹೇಳುವ ಮಂತ್ರದಲ್ಲಿ 'ಗಚ್ಛ ದೇವಾನ್' ಎಂದಿರುವುದರಿಂದ ಪಶುವನ್ನು ದೇವತೆಗಳಿಗೆ ಒಪ್ಪಿಸಿದಂತೆಯೇ ಆಗುತ್ತದೆ.

ಯಾಗವು ನಿರ್ವಿಘ್ನವಾಗಿ ಸಮಾಪ್ತಿ ಹೊಂದಿ ಇಷ್ಟಾರ್ಥವು ಸಿದ್ಧಿಸಲಿ ಎಂಬುದು ತಾನೇ ಯಜಮಾನನ ಮುಖ್ಯವಾದ ಕಾಮನೆ! ಅದು ಈ ಮಂತ್ರಪಾಠದಿಂದ ಸಿದ್ಧಿಸುತ್ತದೆ.

---

*ಪಶುವಿನ ವಧಸ್ಥಾನ.

ದಿವಿ ತೇ ಬೃಹದ್ಭಾ ಇತ್ಯಾಹ ಸುವರ್ಗ ಏವಾಸ್ಮೈ ಲೋಕೇ ಜ್ಯೋತಿರ್ದಧಾತಿ ತಂತುಂ ತನ್ವನ್ರಜಸೋ ಭಾನುಮನ್ವಿಹೀ ತ್ಯಾಹೇಮಾನೇವಾಸ್ಮೈ ಲೋಕಾಞ್ಜ್ಯೋತಿಷ್ಮತಃ ಕರೋ–

---

ದಿವಿ । ತೇ । ಬೃಹತ್ । ಭಾಃ । ಇತಿ । ಆಹ । ಸುವರ್ಗ ಇತಿ ಸುವಃ–ಗೇ । ಏವ । ಅಸ್ಮೈ । ಲೋಕೇ । ಜ್ಯೋತಿಃ । ದಧಾತಿ । ತಂತುಮ್ । ತನ್ವನ್ । ರಜಸಃ । ಭಾನುಮ್ । ಅನ್ವಿತಿ । ಇಹಿ । ಇತಿ । ಆಹ । ಇಮಾನ್ । ಏವ । ಅಸ್ಮೈ । ಲೋಕಾನ್ । ಜ್ಯೋತಿಷ್ಮತಃ । ಕರೋತಿ ।

---

### ಈ ಮಂತ್ರದ ಕೊನೆಯ ಭಾಗದ ವಿವರಣೆ

| | |
|---|---|
| ದಿವಿ ತೇ ಬೃಹತ್ ಭಾಃ ಇತಿ ಆಹ | ಈ ಮಂತ್ರದ ಕೊನೆಯ ಭಾಗವು 'ಸ್ವರ್ಗದಲ್ಲಿ ಯಜಮಾನನಿಗೆ ಪ್ರೌಢಪ್ರಕಾಶವನ್ನು ನೀಡು' ಎಂದು ಹೇಳುತ್ತದೆ. |
| ಅಸ್ಮೈ ಸುವರ್ಗೇ ಲೋಕೇ ಏವ ಜ್ಯೋತಿಃ ದಧಾತಿ | ಈ ಮಂತ್ರಪಾಠದಿಂದ ಅಧ್ವರ್ಯುವು ಈ ಯಜಮಾನನಿಗೆ ಸ್ವರ್ಗಲೋಕದಲ್ಲಿ ಉತ್ತಮ ಪ್ರಕಾಶವನ್ನು ಉಂಟುಮಾಡುತ್ತಾನೆ. |

### ವಪಾಹೋಮಮಂತ್ರದ ವಿವರಣೆ

| | |
|---|---|
| ತಂತುಮ್ ತನ್ವನ್ ರಜಸಃ ಭಾನುಮ್ ಅನು ಇಹಿ ಇತಿ ಆಹ | ಈ ವಪಾಹೋಮಮಂತ್ರಭಾಗವು 'ತಂತುಂ ತನ್ವನ್' ಮೊದಲಾಗಿ ಹೇಳುತ್ತದೆ. |
| ಅಸ್ಮೈ ಇಮಾನ್ ಲೋಕಾನ್ ಜ್ಯೋತಿಷ್ಮತಃ ಏವ ಕರೋತಿ | ಈ ಮಂತ್ರಪಾಠದಿಂದ ಅಧ್ವರ್ಯುವು ಈ ಯಜಮಾನನಿಗೆ ಈ ಮೂರು ಲೋಕಗಳನ್ನೂ ಪ್ರಕಾಶಮಾನವಾದವುಗಳನ್ನಾಗಿ ಮಾಡುತ್ತಾನೆ. |

–ತ್ಯನುಲ್ಬಣಂ ವಯತ ಜೋಗುವಾಮಪ

ಇತ್ಯಾ[ಇತಿ(೧೨)ಆಹ]ಹ ಯದೇವ ಯಜ್ಞ ಉಲ್ಬಣಂ

ಕ್ರಿಯತೇ ತಸ್ಯೈವೈಷಾ ಶಾಂತಿ–

---

ಅನುಲ್ಬಣಮ್ । ವಯತ । ಜೋಗುವಾಮ್ । ಅಪಃ । ಇತಿ ।(೧೨)। ಆಹ । ಯತ್ ।

ಏವ । ಯಜ್ಞೇ । ಉಲ್ಬಣಮ್ । ಕ್ರಿಯತೇ । ತಸ್ಯ । ಏವ । ಏಷಾ । ಶಾಂತಿಃ ।

---

**ಹವಿರ್ಹೋಮಮಂತ್ರದ 'ಅನುಲ್ಬಣಂ' ಎಂಬುದರ ವಿವರಣೆ**

| | |
|---|---|
| **ಅನುಲ್ಬಣಮ್ ವಯತ ಜೋಗುವಾಮ್ ಅಪಃ ಇತಿ ಆಹ** | ಈ ಮಂತ್ರಭಾಗವು 'ಅತಿರೇಕವಾಗದಂತೆ ಕರ್ಮವನ್ನು ಸಮಾಪ್ತಿಗೊಳಿಸಿ' ಎಂದು ಹೇಳುತ್ತದೆ. |
| **ಯಜ್ಞೇ ಯತ್ ಉಲ್ಬಣಮ್ ಏವ ಕ್ರಿಯತೇ** | ಯಾಗದಲ್ಲಿ ಯಾವುದು ಅತಿರಿಕ್ತವಾಗಿ ಅನುಷ್ಠಿಸಲ್ಪಟ್ಟಿತೋ |
| **ತಸ್ಯ ಏವ ಏಷಾ ಶಾಂತಿಃ** | ಆ ಅತಿರೇಕಕ್ಕೆ ಇದೇ ಶಾಂತಿಯಾಗಿದೆ. |

---

ಪಶುವನ್ನು ಆಲಂಭನ ಮಾಡುವಾಗ ಅನುಮಂತ್ರಣಮಂತ್ರದ ಮೊದಲ ಭಾಗದ ತಾತ್ಪರ್ಯ ಹೀಗಿದೆ; ಈ ಮಂತ್ರದಲ್ಲಿ 'ಪೃಥಿವೀಮ್' 'ಊರ್ಧ್ವಾ ಅಂತರಿಕ್ಷಮ್' 'ದಿವಿ' ಎಂದಿರುವುದರಿಂದ ಅಧ್ವರ್ಯುವು ಪಶುವನ್ನು ತ್ರಿಲೋಕಗಳಲ್ಲಿಯೂ ಪ್ರತಿಷ್ಠಿತವಾಗಿರುವಂತೆ ಮಾಡುತ್ತಾನೆ.

'ಅಜಾಸಿ' ಎಂಬ ಮಂತ್ರದ ಕೊನೆಯ ಭಾಗದಲ್ಲಿ 'ದಿವಿ ತೇ ಬೃಹದ್ಭಾಃ' ಎಂದಿರುವುದರಿಂದ ಯಜಮಾನನಿಗೆ ಅಧ್ವರ್ಯುವು ಸ್ವರ್ಗಲೋಕದಲ್ಲಿ ಪ್ರಕಾಶವನ್ನುಂಟುಮಾಡುತ್ತಾನೆ.

ವಪಾಹೋಮಮಂತ್ರದಲ್ಲಿ 'ಜ್ಯೋತಿಷ್ಮತಃ ಪಥಃ ರಕ್ಷ' ಎಂದಿರುವುದರಿಂದ ಯಜಮಾನನಿಗೆ ಮೂರು ಲೋಕಗಳನ್ನೂ ಪ್ರಕಾಶಿತವಾದವುಗಳನ್ನಾಗಿ ಈ ಮಂತ್ರಪಾಠ

–ರ್ಮನುರ್ಭವ ಜನಯಾ ದೈವ್ಯಂ ಜನಮಿತ್ಯಾಹ

ಮಾನವ್ಯೋ ವೈ ಪ್ರಜಾಸ್ತಾ ಏವಾದ್ಯಾಃ ಕುರುತೇ

ಮನಸೋ ಹವಿರಸೀತ್ಯಾಹ ಸ್ವಗಾಕೃತ್ಯೈ೪

---

ಮನುಃ । ಭವ । ಜನಯ । ದೈವ್ಯಮ್ । ಜನಮ್ । ಇತಿ । ಆಹ । ಮಾನವ್ಯಃ । ವೈ ।

ಪ್ರಜಾ ಇತಿ ಪ್ರ–ಜಾಃ । ತಾಃ । ಏವ । ಆದ್ಯಾಃ । ಕುರುತೇ । ಮನಸಃ । ಹವಿಃ । ಅಸಿ ।

ಇತಿ । ಆಹ । ಸ್ವಗಾಕೃತ್ಯಾ ಇತಿ ಸ್ವಗಾ–ಕೃತ್ಯೈ೪ ।

---

ಈ ಮಂತ್ರದ ಉತ್ತರಭಾಗದಲ್ಲಿರುವ ಮನುಶಬ್ದದ ವಿವರಣೆ

| | |
|---|---|
| ಮನುಃ ಭವ ದೈವ್ಯಮ್ ಜನಮ್ ಜನಯ ಇತಿ ಆಹ | ಈ ಮಂತ್ರದಲ್ಲಿ 'ಎಲೈ! ವಶೆಯೇ! ನೀನು ಪ್ರಜಾಪತಿರೂಪನಾಗಿ ಸೃಷ್ಟಿಕರ್ತನಾಗಿರುವೆ. ಒಳ್ಳೆಯ ದೈವ್ಯಜನವನ್ನು ಯಜಮಾನನಿಗೆ ಕೊಡು' ಎಂದು 'ಮನುರ್ಭವ...' ಎಂಬ ಭಾಗವು ಹೇಳುತ್ತದೆ. |
| ಮಾನವ್ಯಃ ವೈ ಪ್ರಜಾಃ | ಪ್ರಜೆಗಳೂ ಮನುವಿನಿಂದ ಸೃಷ್ಟರಾದುದರಿಂದ ಮಾನವಿಗಳು. |
| ತಾಃ ಏವ ಆದ್ಯಾಃ ಕುರುತೇ | ಈ ಮಂತ್ರಭಾಗಪಾಠವು ಆ ಪ್ರಜೆಗಳನ್ನೇ ಈ ಯಜಮಾನನಿಗೆ ವಿಧೇಯರನ್ನಾಗಿ ಮಾಡುತ್ತದೆ. |

ಹವಿಃಶೇಷಭಕ್ಷಣಮಂತ್ರದ 'ಮನಸಃ' ಮೊದಲಾದ ಮಂತ್ರಭಾಗದ ವಿವರಣೆ

| | |
|---|---|
| ಮನಸಃ ಹವಿಃ ಅಸಿ ಇತಿ ಆಹ ಸ್ವಗಾಕೃತ್ಯೈ೪ | ಈ ಮಂತ್ರಭಾಗವು 'ಎಲೈ! ವಶೆಯೇ! ನೀನು ಪ್ರಜಾಪತಿ ಮೊದಲಾದ ದೇವತೆಗಳ ಹವಿಸ್ಸಾಗಿರುವೆ' ಎಂದು ಹೇಳುತ್ತದೆ. ಇದು ದೇವತೆಗಳ ಹವಿಃಸ್ವೀಕಾರಕ್ಕೆ ಕಾರಣವಾಗುತ್ತದೆ. |

---

ದಿಂದ ಅಧ್ವರ್ಯುವು ಮಾಡುತ್ತಾನೆ.

ಗಾತ್ರಾಣಾಂ ತೇ ಗಾತ್ರಭಾಜೋ ಭೂಯಾಸ್ಮೇತ್ಯಾಹಾಶಿಷ

ಮೇವೈತಾಮಾಶಾಸ್ತೇ ತಸ್ಯೈ ವಾ ಏತಸ್ಯಾ

ಏಕಮೇವಾದೇವಯಜನಂ

---

ಗಾತ್ರಾಣಾಮ್ । ತೇ । ಗಾತ್ರಭಾಜ ಇತಿ ಗಾತ್ರ-ಭಾಜಃ । ಭೂಯಾಸ್ಮ । ಇತಿ । ಆಹ ।

ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ತಸ್ಯೈ । ವೈ । ಏತಸ್ಯಾಃ ।

ಏಕಮ್ । ಏವ । ಅದೇವಯಜನಮಿತ್ಯದೇವ-ಯಜನಮ್ ।

---

### ಕೊನೆಯ ಭಾಗದ ವಿವರಣೆ

**ಗಾತ್ರಾಣಾಮ್ ತೇ ಗಾತ್ರಭಾಜಃ ಭೂಯಾಸ್ಮ ಇತಿ ಆಹ ಏತಾಮ್ ಆಶಿಷಮ್ ಏವ ಆಶಾಸ್ತೇ** 'ಓ! ವಶೆಯೇ! ನಿನ್ನ ಗಾತ್ರಗಳ ಭಕ್ಷಣದಿಂದ ನಾವು ಪ್ರಶಸ್ತವಾದ ಅವಯವಗಳುಳ್ಳವರಾಗಿ ಆಗೋಣ' ಎಂದು ಈ ಮಂತ್ರಭಾಗವು ಹೇಳುತ್ತದೆ. ಇದು ಯಜಮಾನನ ಮನಸ್ಸಿನಲ್ಲಿರುವ ಶುಭಾಶಂಸನೆಯನ್ನೇ ಹೇಳುತ್ತದೆ.

#### ವಶಾಲಂಭನಕ್ಕೆ ನಿಷಿದ್ಧ ದಿನ; ಚರ್ಚೆ; ಪರಿಹಾರ

**ತಸ್ಯೈ ಏವ ವೈ ಏತಸ್ಯಾಃ ಏಕಮ್ ಏವ ಅದೇವಯಜನಮ್** ಈ ವಶೆಯ ಆಲಂಭನದ ವಿಷಯದಲ್ಲಿ ಒಂದೇ ಒಂದು ದಿನ ಯಾಗಕ್ಕೆ ಅನರ್ಹವಾದ ದಿನವಾಗಿದೆ. [ಅದು ಯಾವುದೆಂದರೆ]

---

ಹವಿರ್ಹೋಮಮಂತ್ರದಲ್ಲಿ **ಅನುಲ್ಬಣಮ್** ಎಂದಿರುವುದರಿಂದ ಯಾಗದಲ್ಲಿ ಅತಿರಿಕ್ತವಾದ ಇದು ಅನುಷ್ಠಾನಕ್ಕೆ ಶಾಂತಿಯಾಗಿ ನ್ಯೂನಾತಿರೇಕದೋಷಗಳನ್ನು ಹೋಗಲಾಡಿಸುತ್ತದೆ. ಸ್ವಾಯಂಭುವಮನುವು ಪ್ರಜಾಸೃಷ್ಟಿಗೆ ಕಾರಣನಾಗಿದ್ದಾನೆ. ಆ ಪ್ರಜೆಗಳು ಮಾನವಿಗಳು. ಈ ಮಂತ್ರಪಾಠದಿಂದ ಆ ದೈವ್ಯಜನಾದಿಪ್ರಜೆಗಳು ಯಜಮಾನನಿಗೆ ವಶರಾಗಿರುತ್ತಾರೆ.

ಯದಾಲಬ್ಧಾಯಾಮಭ್ರೋ[..ಯಾಮಭ್ರಃ(೧೩)]ಭವತಿ

ಯದಾಲಬ್ಧಾಯಾಮಭ್ರಸ್ಸ್ಯಾದಪ್ಸು ವಾ

ಪ್ರವೇಶಯೇಥ್ಸರ್ವಾಂ ವಾ ಪ್ರಾಶ್ನೀಯಾ–

---

ಯತ್ । ಆಲಬ್ಧಾಯಾಮಿತ್ಯಾ–ಲಬ್ಧಾಯಾಮ್ । ಅಭ್ರಃ ।(೧೩)। ಭವತಿ । ಯತ್ ।

ಆಲಬ್ಧಾಯಾಮಿತ್ಯಾ–ಲಬ್ಧಾಯಾಮ್ । ಅಭ್ರಃ । ಸ್ಯಾತ್ । ಅಪ್ಸ್ವಿತ್ಯಪ್–ಸು । ವಾ ।

ಪ್ರವೇಶಯೇದಿತಿ ಪ್ರ–ವೇಶಯೇತ್ । ಸರ್ವಾಮ್ । ವಾ । ಪ್ರೇತಿ । ಅಶ್ನೀಯಾತ್ ।

---

| | |
|---|---|
| **ಯತ್ ಆಲಬ್ಧಾಯಾಮ್ ಅಭ್ರಃ ಭವತಿ** | ವಶಾಲಂಭನವನ್ನು ಮಾಡಲಾಗಿ ಅಂತರಿಕ್ಷದಲ್ಲಿ ಮೋಡವು ತುಂಬಿಕೊಂಡು ದುರ್ದಿನವಾದರೆ [ಅದು ಯಾಗಾನರ್ಹದಿನ] |
| **ಯತ್ ಆಲಬ್ಧಾಯಾಮ್ ಅಭ್ರಃ ಸ್ಯಾತ್** | [ಗಮನಿಸಿ ಯಾಗಾರಂಭವನ್ನು ಮಾಡಿದರೂ] ಆಕಸ್ಮಿಕವಾಗಿ ಮೋಡಗಳು ಕಾಣಿಸಿಕೊಂಡರೆ |
| **ಅಪ್ಸು ವಾ ಪ್ರವೇಶಯೇತ್** | [ಆಲಂಭನ ಮಾಡಿದ ಪಶುವನ್ನು] ನೀರಿನಲ್ಲಿಯಾದರೂ ಹಾಕಬೇಕು. |
| **ಸರ್ವಾಮ್ ಪ್ರ ಅಶ್ನೀಯಾತ್ ವಾ** | ಸಂಪೂರ್ಣವಾಗಿ ಭಕ್ಷಣವನ್ನಾದರೂ ಮಾಡಬೇಕು. |

---

ಹವಿಸ್ಸಿನ ಶೇಷಭಕ್ಷಣಮಂತ್ರದಲ್ಲಿ 'ಮನಸೋ ಹವಿರಸಿ' ಎಂದಿದೆ. 'ಮನೋ ವೈ ಪ್ರಜಾಪತಿಃ' ಎಂಬ ಶ್ರುತಿವಚನದಂತೆ ಆ ಶಬ್ದವು ಪ್ರಜಾಪತಿಯೇ ಮೊದಲಾದ ದೇವತೆಗಳನ್ನು ಹೇಳುತ್ತದೆ. ಈ ಮಂತ್ರವನ್ನು ಹೇಳುವುದರಿಂದ ದೇವತೆಗಳು ಹವಿಸ್ಸನ್ನು ತಮ್ಮದನ್ನಾಗಿ ಮಾಡಿಕೊಳ್ಳುವುದಕ್ಕೆ ಕಾರಣವಾಗುತ್ತದೆ.

ದ್ಯದಪ್ಸು ಪ್ರವೇಶಯೇದ್ಯಜ್ಞವೇಶಸಂ

ಕುರ್ಯಾಥ್ಸರ್ವಾಮೇವ ಪ್ರಾಶ್ಞೀಯಾದಿಂದ್ರಿಯ

ಮೇವಾತ್ಮನ್ಧತ್ತೇ ಸಾ ವಾ ಏಷಾ

---

ಯತ್ । ಅಫ್ಸ್ವಿತ್ಯಪ್-ಸು । ಪ್ರವೇಶಯೇದಿತಿ ಪ್ರ-ವೇಶಯೇತ್ । ಯಜ್ಞವೇಶಸ ಮಿತಿ ಯಜ್ಞ-ವೇಶಸಮ್ । ಕುರ್ಯಾತ್ । ಸರ್ವಾಮ್ । ಏವ । ಪ್ರೇತಿ । ಅಶ್ನೀಯಾತ್ । ಇಂದ್ರಿಯಮ್ । ಏವ । ಆತ್ಮನ್ । ಧತ್ತೇ । ಸಾ । ವೈ । ಏಷಾ ।

---

| | |
|---|---|
| ಯತ್ ಅಪ್ಸು ಪ್ರವೇಶಯೇತ್ ಯಜ್ಞವೇಶಸಮ್ ಕುರ್ಯಾತ್ | ನೀರಿನಲ್ಲಿ ಹಾಕಿದ ಪಕ್ಷದಲ್ಲಿ ಯಜ್ಞವಿಘಾತವನ್ನು ಮಾಡಿದಂತೆ ಆಗುತ್ತದೆ. [ಈ ಪಕ್ಷವು ಸರಿಯಲ್ಲ] |
| ಸರ್ವಾಮ್ ಏವ ಪ್ರ ಅಶ್ನೀಯಾತ್ | [ಆದ್ದರಿಂದ] ಯಜಮಾನನು ಎಲ್ಲವನ್ನೂ ಭಕ್ಷಣ ಮಾಡಬೇಕು. [ಸಿದ್ಧಾಂತ] |
| ಆತ್ಮನ್ ಇಂದ್ರಿಯಮ್ ಏವ ಧತ್ತೇ | ಇದರಿಂದ ಯಜಮಾನನು ತನ್ನಲ್ಲಿ ಇಂದ್ರಿಯ ಶಕ್ತಿಯನ್ನೇ ನೆಲೆಗೊಳಿಸುತ್ತಾನೆ. |

ಈ ಯಾಗದ ಅಧಿಕಾರಿಗಳು

| | |
|---|---|
| ಸಾ ವೈ ಏಷಾ | ಈ ಪ್ರಸಿದ್ಧವಾದ ವಶಾಯಾಗವು |

---

ಹವಿಃಶೇಷಭಕ್ಷಣದ ಮಂತ್ರದಲ್ಲಿ ವಶೆಯ ಗಾತ್ರಗಳ ಭಕ್ಷಣದಿಂದ ಅವಯವಗಳೂ ಪುಷ್ಟವಾಗುತ್ತವೆ ಎಂದು ಹೇಳಿದೆ. ಇದು ಯಜಮಾನನ ಮನಸ್ಸಿನಲ್ಲಿರುವ ಶುಭಾಶಂಸನೆಯೇ ಆಗಿದೆ.

ತ್ರಯಾಣಾಮೇವಾವರುದ್ಧಾ ಸಂವಥ್ಸರಸದ

ಸ್ಸಹಸ್ರಯಾಜಿನೋ ಗೃಹಮೇಧಿನ ಸ್ತ ಏವೈತಯಾ

---

ತ್ರಯಾಣಾಮ್ । ಏವ । ಅವರುದ್ಧೇತ್ಯವ–ರುದ್ಧಾ । ಸಂವಥ್ಸರಸದ ಇತಿ ಸಂವಥ್ಸರ–ಸದಃ । ಸಹಸ್ರಯಾಜಿನ ಇತಿ ಸಹಸ್ರ–ಯಾಜಿನಃ । ಗೃಹಮೇಧಿನ ಇತಿ ಗೃಹ–ಮೇಧಿನಃ । ತೇ । ಏವ । ಏತಯಾ ।

---

| | |
|---|---|
| ತ್ರಯಾಣಾಮ್ ಏವ ಅವರುದ್ಧಾ | ಮೂವರು ಅಧಿಕಾರಿಗಳಿಗೇ ಅಧೀನವಾಗಿರುತ್ತದೆ./ಅವರೇ ಈ ಯಾಗದ ಅಧಿಕಾರಿಗಳು. |
| ಸಂವಥ್ಸರಸದಃ | ಸಂವತ್ಸರಸಾಧ್ಯವಾದ ಗವಾಮಯನಾದಿಗಳನ್ನು ಮಾಡುವವನಿಗೆ |
| ಸಹಸ್ರಯಾಜಿನಃ | 'ಸಹಸ್ರಂ ದಕ್ಷಿಣಾಃ' ಎಂದು ಸಹಸ್ರಸಂಖ್ಯೆಯ ದಕ್ಷಿಣೆಯುಳ್ಳ ಯಾಗವನ್ನು ಅನುಷ್ಠಿಸುವವನಿಗೆ |
| ಗೃಹಮೇಧಿನಃ [ಅವರುದ್ಧಾ] | ಸತ್ರಯಾಗದಲ್ಲಿ ಗೃಹಪತಿಯಾದವನಿಗೆ [ಈ ಮೂವರಿಗೇ ಅಧೀನ] |
| ತೇ ಏವ ಏತಯಾ | ಅವರೇ ಈ ಯಾಗವನ್ನು |

---

ಈ ವಶಾಲಂಭನವನ್ನು ಮಾಡಬೇಕಾದ ದಿನದ ವಿಷಯದಲ್ಲಿ ಮೊದಲು ಯಜ್ಞಕ್ಕೆ ಮೋಡ ತುಂಬಿದ ದಿನವನ್ನು ಅನರ್ಹವನ್ನಾಗಿ ಹೇಳಿದೆ. ಆಕಸ್ಮಿಕವಾಗಿ ಮೋಡಗಳು ಕಂಡರೆ ಎರಡು ಪಕ್ಷಗಳನ್ನು ಪ್ರಸ್ತಾವ ಮಾಡಿ ಮೊದಲ ಪಕ್ಷವನ್ನು ಸರಿಯಲ್ಲವೆಂದು ಹೇಳಿ ಸಿದ್ಧಾಂತವಾಗಿ ಎರಡನೆಯ ಪಕ್ಷವನ್ನು ಎತ್ತಿ ಹಿಡಿದಿರುತ್ತಾರೆ. ಅದರ ಫಲವನ್ನೂ ಶ್ರುತಿಯು ಪ್ರಶಂಸಿಸಿದೆ.

ಯಜೇರನ್ತೇಷಾಮೇವೈಷಾಽಽಪ್ತಾ ||೧೪-3||

[ಯಥ್ಸ್ವೇನ ಸಾರಸ್ವತೀಮಾಲಭೇತ ಯಃ ಕಾಮಾಯ ತ್ವಾ ಕಾಮೋಪ

ಇತ್ಯಬ್ರ್ಯೋ ದ್ವಿಚತ್ವಾರಿಗ್ಂಶಚ್ಚ ||]

---

ಯಜೇರನ್ನ್ । ತೇಷಾಮ್ । ಏವ । ಏಷಾ । ಆಪ್ತಾ ||೧೪||

---

ಯಜೇರನ್ — ಅನುಷ್ಠಿಸಬೇಕು.

ತೇಷಾಮ್ ಏವ ಏಷಾ ಆಪ್ತಾ — ಅವರಿಗೇ ಈ ವಶೆಯು ಯುಕ್ತವಾಗಿದೆ/ ಅವರಿಗೇ ಈ ಫಲಪ್ರಾಪ್ತಿ.

---

ಈ ವಶಾಲಂಭನಯಾಗವನ್ನು ಗವಾಮಯನಾದಿಸತ್ರಯಾಗವನ್ನು ಮಾಡುವವರೂ, ಸಹಸ್ರದಕ್ಷಿಣರೂ, ಗೃಹಮೇಧಿಗಳೂ ಅನುಷ್ಠಿಸಬೇಕೆಂದು ಹೇಳಿದೆ. ಅವರಿಗೇ ಅದು ಫಲಪ್ರದವೆಂದು ಮಿಶ್ರರು ವಿವರಿಸಿರುತ್ತಾರೆ.

## ॥ ಚತುರ್ಥೋಽನುವಾಕಃ ॥

ಚಿತ್ತಂ ಚ ಚಿತ್ತಿಶ್ಚಾಕೂತಂ ಚಾಕೂತಿಶ್ಚ ವಿಜ್ಞಾತಂ ಚ

ವಿಜ್ಞಾನಂ ಚ

---

ಚಿತ್ತಮ್ । ಚ । ಚಿತ್ತಿಃ । ಚ । ಆಕೂತಮಿತ್ಯಾ-ಕೂತಮ್ । ಚ । ಆಕೂತಿರಿತ್ಯಾ-ಕೂತಿಃ । ಚ । ವಿಜ್ಞಾತಮಿತಿ ವಿ-ಜ್ಞಾತಮ್ । ಚ । ವಿಜ್ಞಾನಮಿತಿ ವಿ-ಜ್ಞಾನಮ್ । ಚ ।

---

ಮೂರನೆಯ ಅನುವಾಕದಲ್ಲಿ ವಶಾವಿಧಿ-ಅದರ ಕಾಮ್ಯವಿಧಿಗಳೂ ಹೇಳಲ್ಪಟ್ಟವು. ಈ ನಾಲ್ಕನೆಯ ಅನುವಾಕದಲ್ಲಿ ಜಯಸಂಜ್ಞಕಹೋಮಮಂತ್ರಗಳೂ ಅವುಗಳ ವಿಧಿಗಳೂ ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಚಿತ್ತಂ ಚ...ಬಭೂವ ॥ (೧೩ ಮಂತ್ರಗಳು) | ಸ್ಪರ್ಧಿಸುವವನಿಗೆ ವಿಹಿತವಾದ ಜಯ ಹೋಮಗಳನ್ನು ಅನುಷ್ಠಿಸಲು |

---

+ಚಿತ್ತಮ್ ಚ=ಸಾಮಾನ್ಯಾಕಾರದಿಂದ ನಿರ್ವಿಕಲ್ಪಕಜ್ಞಾನದಿಂದ ತಿಳಿದ ವಸ್ತುವೂ; [ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ]+ಚಿತ್ತಿಃ ಚ=ನಿರ್ವಿಕಲ್ಪಕ ಜ್ಞಾನವೂ; [ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ]+ಆಕೂತಮ್ ಚ= ಸಂಕಲ್ಪಿತವಾದ ವಸ್ತು;[ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ]+ಆಕೂತಿಃ ಚ=ಸಂಕಲ್ಪವೂ;[ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ] +ವಿಜ್ಞಾತಮ್ ಚ=ವಿಶೇಷಾಕಾರದಿಂದ ತಿಳಿದ ವಸ್ತುವೂ; [ಮಮ ಅಸ್ತು=ನನಗೆ ಉಂಟಾಗಲಿ/ ನನ್ನಲ್ಲಿರಲಿ] +ವಿಜ್ಞಾನಮ್ ಚ=ವಿಶೇಷಜ್ಞಾನವೂ [ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ]

ಮನಶ್ಚ ಶಕ್ವರೀಶ್ಚ ದರ್ಶಶ್ಚ ಪೂರ್ಣಮಾಸಶ್ಚ ಬೃಹಚ್ಚ

ರಥಂತರಂ ಚ ಪ್ರಜಾಪತಿರ್ಜಯಾನಿಂದ್ರಾಯ ವೃಷ್ಣೇ

ಪ್ರಾಯಚ್ಛದುಗ್ರಃ ಪೃತನಾಜ್ಯೇಷು

---

ಮನಃ । ಚ । ಶಕ್ವರೀಃ । ಚ । ದರ್ಶಃ । ಚ । ಪೂರ್ಣಮಾಸ ಇತಿ ಪೂರ್ಣ-ಮಾಸಃ ।

ಚ । ಬೃಹತ್ । ಚ । ರಥಂತರಮಿತಿ ರಥಂ-ತರಮ್ । ಚ । ಪ್ರಜಾಪತಿರಿತಿ ಪ್ರಜಾ-ಪತಿಃ ।

ಜಯಾನ್ । ಇಂದ್ರಾಯ । ವೃಷ್ಣೇ । ಪ್ರೇತಿ । ಆಯಚ್ಛತ್ । ಉಗ್ರಃ । ಪೃತನಾಜ್ಯೇಷು ।

---

✦ಮನಃ ಚ=ಜ್ಞಾನಸಾಧನವಾದ ಅಂತಃಕರಣವೂ; [ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ] ✦ಶಕ್ವರೀಃ ಚ=ಚಕ್ಷುರಾದಿಬಾಹ್ಯೇಂದ್ರಿಯಶಕ್ತಿಗಳೂ [ಮಮ ಸಂತು=ನನಗೆ ಉಂಟಾಗಲಿ/ನನ್ನಲ್ಲಿರಲಿ] ✦ದರ್ಶಃ ಚ=ದರ್ಶಯಾಗವೂ [ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ] ✦ಪೂರ್ಣಮಾಸಃ ಚ=ಪೂರ್ಣ ಮಾಸಯಾಗವೂ [ಮಮ ಅಸ್ತು=ನನಗೆ ಉಂಟಾಗಲಿ/ನನ್ನಲ್ಲಿರಲಿ] ✦ಬೃಹತ್ ಚ ✦ರಥಂತರಮ್ ಚ=[ಸೋಮಯಾಗಸಾಧನವಾದ] ಬೃಹತ್ಸಾಮವೂ, ರಥಂತರ ಸಾಮವೂ [ಮಮ ಸ್ತಾಮ್=ನನಗೆ ಉಂಟಾಗಲಿ/ನನ್ನಲ್ಲಿರಲಿ] ✦ಪೃತನಾಜ್ಯೇಷು= ಯುದ್ಧಗಳಿಗೆ ಮುಂದೆ ಹೋಗುವುದರಲ್ಲಿ; ಉಗ್ರಃ=ದುಷ್ಟನಿಗ್ರಹದಲ್ಲಿ ಭಯಂಕರವಾಗಿ ವರ್ತಿಸುವ; ಪ್ರಜಾಪತಿಃ=ಪ್ರಜಾಪತಿದೇವನು; ವೃಷ್ಣೇ=ಮಳೆ ಯನ್ನು ಸುರಿಸುವ; ಇಂದ್ರಾಯ=ಇಂದ್ರನಿಗೆ; ಜಯಾನ್=ಜಯವೆಂಬ ಹೆಸರಿನಿಂದ ಕೂಡಿದ ಮಂತ್ರಗಳನ್ನು; ಪ್ರಾಯಚ್ಛತ್=ಕೊಟ್ಟನು.

---

ಜಯಹೋಮದಿಂದ ಯಜಮಾನನು ಬಯಸುವುದನ್ನು ಶ್ರುತಿಯು ತಿಳಿಸುತ್ತಿದೆ. ಇಲ್ಲಿ ಹೇಳಿರುವ ದರ್ಶ-ಪೂರ್ಣಮಾಸಶಬ್ದಗಳಿಂದ ಉಳಿದ ಯಾಗಗಳೂ, ಬೃಹತ್-ರಥಂತರಗಳಿಂದ ಸೋಮಯಾಗಗಳೂ ಲಕ್ಷಣಾವೃತ್ತಿಯಿಂದ ಹೇಳಲ್ಪಡುತ್ತವೆ ಯೆಂದೂ ಇಟ್ಟುಕೊಳ್ಳಬಹುದು.

ತಸ್ಮೈ ವಿಶಸ್ಸಮನಮಂತ ಸರ್ವಾಸ್ಸ ಉಗ್ರಸ್ಸ ಹಿ ಹವ್ಯೋ ಬಭೂವ ದೇವಾಸುರಾಸ್ಸಂಯತ್ತಾ ಆಸನ್ತ್ಸ ಇಂದ್ರಃ ಪ್ರಜಾಪತಿಮುಪಾಧಾವ-

---

ತಸ್ಮೈ । ವಿಶಃ । ಸಮಿತಿ । ಅನಮಂತ । ಸರ್ವಾಃ । ಸಃ । ಉಗ್ರಃ । ಸಃ । ಹಿ । ಹವ್ಯಃ । ಬಭೂವ । ದೇವಾಸುರಾ ಇತಿ ದೇವ-ಅಸುರಾಃ । ಸಂಯತ್ತಾ ಇತಿ ಸಂ-ಯತ್ತಾಃ । ಆಸನ್ । ಸಃ । ಇಂದ್ರಃ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಉಪೇತಿ । ಅಧಾವತ್ ।

---

ತಸ್ಮೈ=ಆ ಇಂದ್ರನಿಗೆ [ಈ ಮಂತ್ರಗಳ ಪ್ರಭಾವದಿಂದ] ಸರ್ವಾಃ ವಿಶಃ= ಪ್ರಜೆಗಳೆಲ್ಲರೂ; ಸಮನಮಂತ=ವಶವರ್ತಿಗಳಾದರು; ಸಃ ಉಗ್ರಃ=ಆ ಇಂದ್ರನು [ಶತ್ರುಗಳಿಗೆ] ಉಗ್ರನಾಗಿಯೂ; ಹವ್ಯಃ=ಯಜಮಾನರು ಹವ್ಯಗಳನ್ನು ಅರ್ಪಿಸಲು ಯೋಗ್ಯನೂ; ಬಭೂವ ಹಿ=ಆಗಿರುವನಷ್ಟೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಜಯವಿಧಿಗಾಗಿ ಉಪಾಖ್ಯಾನ**

| | |
|---|---|
| ದೇವಾಸುರಾಃ ಸಂಯತ್ತಾಃ ಆಸನ್ | [ಒಂದು ಕಾಲದಲ್ಲಿ] ಸುರರೂ, ಅಸುರರೂ ಯುದ್ಧಸನ್ನದ್ಧರಾದರು. |
| ಸಃ ಇಂದ್ರಃ ಪ್ರಜಾಪತಿಮ್ ಉಪಾಧಾವತ್ | ಆಗ ಇಂದ್ರನು [ಗೆಲ್ಲುವುದಕ್ಕಾಗಿ ಉಪಾಯವನ್ನು ತಿಳಿಯಲು] ಪ್ರಜಾಪತಿಯನ್ನು ಆಶ್ರಯಿಸಿದನು. |

---

ದೇವಾಸುರಸಂಗ್ರಾಮದಲ್ಲಿ ಪ್ರಜಾಪತಿಯಿಂದ ಈ ಮಂತ್ರಗಳನ್ನು ಪಡೆದು ಇಂದ್ರನು ಹೋಮಗಳನ್ನು ಅನುಷ್ಠಿಸಿದಾಗ ದೇವತೆಗಳು ಅಸುರರನ್ನು ಜಯಿಸಿದರು.

ತ್ತಸ್ಮಾ ಏತಾಞ್ಜಯಾನ್ಪ್ರಾಯಚ್ಛತ್ತಾನಜುಹೋತ್ತತೋ ವೈ

ದೇವಾ ಅಸುರಾನಜಯನ್ ಯದಜಯನ್ತಜ್ಜಯಾನಾಂ

ಜಯತ್ತ್ವಗ್ಂ

---

ತಸ್ಮೈ । ಏತಾನ್ । ಜಯಾನ್ । ಪ್ರೇತಿ । ಅಯಚ್ಛತ್ । ತಾನ್ । ಅಜುಹೋತ್ ।

ತತಃ । ವೈ । ದೇವಾಃ । ಅಸುರಾನ್ । ಅಜಯನ್ನ್ । ಯತ್ । ಅಜಯನ್ನ್ । ತತ್ ।

ಜಯಾನಾಮ್ । ಜಯತ್ವಮಿತಿ ಜಯ-ತ್ವಮ್ ।

---

| | |
|---|---|
| ತಸ್ಮೈ ಏತಾನ್ ಜಯಾನ್ ಪ್ರಾಯಚ್ಛತ್ | [ಪ್ರಜಾಪತಿಯು] ಇಂದ್ರನಿಗೆ ಜಯಹೋಮ ಮಂತ್ರಗಳನ್ನು ಕೊಟ್ಟನು. |
| ತಾನ್ ಅಜುಹೋತ್ | ಇಂದ್ರನು ಆ ಹೋಮಗಳನ್ನು ಅನುಷ್ಠಿಸಿದನು. |
| ತತಃ ವೈ ದೇವಾಃ ಅಸುರಾನ್ ಅಜಯನ್ | ಅನಂತರ [ಈ ಹೋಮಗಳ ಪ್ರಭಾವದಿಂದ] ದೇವತೆಗಳು ಅಸುರರನ್ನು ಜಯಿಸಿದರು. |
| ಯತ್ ಅಜಯನ್ | ಹೀಗೆ ದೇವತೆಗಳು ಜಯಿಸಿದರೆಂಬುದು ಯಾವುದೋ |
| ತತ್ ಜಯಾನಾಮ್ ಜಯತ್ವಮ್ | ಅದು ಜಯಮಂತ್ರಗಳ ಅನ್ವರ್ಥವಾದ ಜಯ ಸಂಜ್ಞೆಯಾಗಿದೆ.* |

---

ಹೀಗೆ ಜಯವೆಂಬ ಹೆಸರು ಈ ಮಂತ್ರಗಳಿಗೆ ಅನ್ವರ್ಥವಾಗಿದೆ.

---

*ಜಯತಿ ಪರಸೇನಾಮೇತ್ಯೈರಿತಿ ಜಯಾಃ-ಭ.ಭಾ.ಭಾ

ಸ್ಪರ್ಧಮಾನೇನೈತೇ ಹೋತವ್ಯಾ ಜಯತ್ಯೇವ ತಾಂ

ಪೃತನಾಮ್ ||೧೫-4||

[ಉಪ ಪಂಚವಿಗ್ಂಶತಿಶ್ಚ ||]

---

ಸ್ಪರ್ಧಮಾನೇನ । ಏತೇ । ಹೋತವ್ಯಾಃ । ಜಯತಿ । ಏವ । ತಾಮ್ ।

ಪೃತನಾಮ್ ||೧೫||

---

ಜಯಹೋಮವಿಧಿ; ಫಲಪ್ರಶಂಸೆ

| | |
|---|---|
| ಸ್ಪರ್ಧಮಾನೇನ ಏತೇ ಹೋತವ್ಯಾಃ | ವೈರಿಗಳ ಮೇಲೆ ಸ್ಪರ್ಧಿಸುವವನಿಂದ ಈ ಜಯಹೋಮಗಳು ಮಾಡಲ್ಪಡಬೇಕು. |
| ತಾಮ್ ಪೃತನಾಮ್ ಜಯತಿ ಏವ | ಅವನು ಆ ಶತ್ರುಸೈನ್ಯವನ್ನು ಗೆದ್ದೇ ಗೆಲ್ಲುತ್ತಾನೆ. |

---

ವೈರಿಗಳ ಮೇಲೆ ಸ್ಪರ್ಧಿಸುವವನು ಈ ಜಯಹೋಮಗಳನ್ನು ಅನುಷ್ಠಿಸಬೇಕು. ಈ ಜಯಹೋಮಗಳನ್ನು ಅನುಷ್ಠಿಸುವವನು ಶತ್ರುಸೈನ್ಯವನ್ನು ಜಯಿಸಿಯೇ ಜಯಿಸುವನು.

ಈ ಪ್ರಕರಣದಲ್ಲಿಯೇ ಮುಂದೆ ಬ್ರಾಹ್ಮಣದಲ್ಲಿ 'ಯೇನ ಕರ್ಮಣಾ ಈರ್ತ್ಸೇತ್ ತತ್ರ ಹೋತವ್ಯಾಃ' ಎಂದು ಈ ಮಂತ್ರಗಳ ವಿನಿಯೋಗವನ್ನು ಹೇಳಿದೆ.

ಯಾವ ಕರ್ಮವನ್ನು ಅನುಷ್ಠಿಸುವನೋ ಆ ಕರ್ಮದಿಂದ ಸಮೃದ್ಧಿಯನ್ನು ಬಯಸುವವನಾಗಿ ಈ ಜಯಮಂತ್ರಗಳಿಂದ ಹೋಮಗಳನ್ನು ಅನುಷ್ಠಿಸಬೇಕು. ಅಲ್ಲಿ ಅಭ್ಯಾತಾನಗಳು, ರಾಷ್ಟ್ರಭೃತಗಳು ಹಾಗೂ ಜಯಮಂತ್ರಗಳಿಂದ ಹೋಮವನ್ನು ಅನುಷ್ಠಿಸಬೇಕೆಂದು ಮಿಶ್ರರು ವಿವರಿಸಿದ್ದಾರೆ.

## ॥ ಪಂಚಮೋಽನುವಾಕಃ ॥

ಅಗ್ನಿರ್ಭೂತಾನಾಮಧಿಪತಿಸ್ಸ ಮಾಽವ-

ಅಗ್ನಿಃ। ಭೂತಾನಾಮ್। ಅಧಿಪತಿರಿತ್ಯಧಿ-ಪತಿಃ। ಸಃ। ಮಾ। ಅವತು।

| ಮಂತ್ರ | ವಿನಿಯೋಗ |
|---|---|
| ಅಗ್ನಿರ್ಭೂತಾನಾಂ...ದೇವಹೂತ್ಯಾಮ್ ॥ | ಅಭ್ಯಾತಾನಹೋಮಗಳನ್ನು ಅನುಷ್ಠಿಸಲು |

ಮಂತ್ರಪಾಠ:- ಅಗ್ನಿರ್ಭೂತಾನಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

+ಅಗ್ನಿಃ ಭೂತಾನಾಮ್ ಅಧಿಪತಿಃ=ಅಗ್ನಿದೇವನು ಪ್ರಾಣಿಗಳಿಗೆ ಒಡೆಯನಾಗಿದ್ದಾನೆ; ಸಃ =ಆ ಅಗ್ನಿದೇವನು; ಮಾ=ನನ್ನನ್ನು; ಅಸ್ಮಿನ್ ಬ್ರಹ್ಮನ್=ಈ ಬ್ರಾಹ್ಮಣಜಾತಿಗೆ ಸಂಬಂಧಿಸಿದ ವಿಷಯದಲ್ಲಿಯೂ; ಅಸ್ಮಿನ್ ಕ್ಷತ್ರೇ=ಈ ಕ್ಷತ್ರಿಯಜಾತಿಗೆ ಸಂಬಂಧಿಸಿದ ವಿಚಾರಗಳಲ್ಲಿಯೂ; ಅಸ್ಯಾಮ್ ಆಶಿಷಿ=[ಯಜಮಾನನು]ಆಶಿಸುವ ಪುತ್ರ-ಪಶ್ವಾದಿಗಳಲ್ಲಿಯೂ; ಅಸ್ಯಾಮ್ ಪುರೋಧಾಯಾಮ್=ಎಲ್ಲರಿಗೂ ಅಗ್ರಗಣ್ಯನಾಗಿರುವ ಈ ಪ್ರಾಧಾನ್ಯದಲ್ಲಿಯೂ; ಅಸ್ಮಿನ್ ಕರ್ಮನ್=ಅನುಷ್ಠಿಸುತ್ತಿರುವ ಈ ಯಾಗಾದಿಕರ್ಮಗಳಲ್ಲಿಯೂ;

*ಈ ಅಭ್ಯಾತಾನಮಂತ್ರಗಳು ಹದಿನೆಂಟು ಇವೆ. ಇವುಗಳಲ್ಲಿ ಪ್ರಥಮಮಂತ್ರವಾದ 'ಅಗ್ನಿ ರ್ಭೂತಾನಾಂ' ಎಂಬಲ್ಲಿನ 'ಸ ಮಾವತು' ಎಂಬ ಅಂಶವು ಮುಂದಿನ 14 ಮಂತ್ರಗಳಲ್ಲಿ ಅನುಷಂಗವಾಗಿ ಸೇರುತ್ತದೆ. 'ಅನ್ನಗ್‌ಂ...'ಎಂಬ 11ನೆಯ ಮಂತ್ರದಲ್ಲಿ 'ತನ್ಮಾವತು' ಎಂದು ಶ್ರುತಿಯಲ್ಲಿಯೇ ಪಠಿತವಾಗಿದೆ. 'ಮರುತೋ....'ಎಂಬ 17ನೆಯ ಮಂತ್ರದಲ್ಲಿ 'ತೇ ಮಾಽವಂತು' ಎಂಬುದಾಗಿಯೇ ಪಠಿತವಾಗಿದೆ. 'ಪಿತರಃ....ಎಂಬಲ್ಲಿ 'ಮಾಽವತ' ಎಂದಿದೆ. ಅಲ್ಲಿಯೇ ಉತ್ತರಾರ್ಧವಾದ 'ಅಸ್ಮಿನ್ಬ್ರಹ್ಮನ್... ದೇವಹೂತ್ಯಾಮ್' ಎಂಬ ಅಂಶವು ಹಿಂದಿನ 17 ಮಂತ್ರಗಳಲ್ಲಿಯೂ ಸೇರುತ್ತದೆ. ಈ ಮಂತ್ರಗಳನ್ನು [1+9+1+5+1+1=18] ಹೀಗೆ ಬಿಡಿಸಿ ತಿಳಿಯಬಹುದು.

# ತ್ರಿಂದ್ರೋ ಜ್ಯೇಷ್ಠಾನಾಂ ಯಮಃ ಪೃಥಿವ್ಯಾ ವಾಯುರಂತರಿಕ್ಷಸ್ಯ

---

ಇಂದ್ರಃ। ಜ್ಯೇಷ್ಠಾನಾಮ್। ಯಮಃ। ಪೃಥಿವ್ಯಾಃ। ವಾಯುಃ। ಅಂತರಿಕ್ಷಸ್ಯ।

---

ಇಂದ್ರೋ ಜ್ಯೇಷ್ಠಾನಾಮಧಿಪತಿಸ್ಸ ಮಾऽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇऽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

ಯಮಃ ಪೃಥಿವ್ಯಾ ಅಧಿಪತಿಸ್ಸ ಮಾऽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇऽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

ವಾಯುರಂತರಿಕ್ಷಸ್ಯಾಧಿಪತಿಸ್ಸ ಮಾऽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇऽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

---

ಅಸ್ಯಾಮ್ ದೇವಹೂತ್ಯಾಮ್=ಈ ದೇವತಾಹ್ವಾನಗಳ ವಿಷಯದಲ್ಲಿಯೂ; ಅವತು=ರಕ್ಷಿಸಲಿ; ✦ಇಂದ್ರಃ ಜ್ಯೇಷ್ಠಾನಾಮ್ ಅಧಿಪತಿಃ=ವೃದ್ಧರೂ ಶ್ರೇಷ್ಠರೂ ಆದ ದಿಕ್ಪಾಲಕರಿಗೆ ಅಧಿಪತಿಯಾಗಿರುವ ಇಂದ್ರನು; [ಸಃ...ದೇವಹೂತ್ಯಾಮ್ ಅವತು =ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ ಯಮಃ ಪೃಥಿವ್ಯಾಃ ಅಧಿಪತಿಃ=ಭೂಮಿಗೆ ಅಧಿಪತಿಯಾಗಿರುವ ಅಗ್ನಿವಿಶೇಷರೂಪನಾದ ಯಮನು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ ವಾಯುಃ ಅಂತರಿಕ್ಷಸ್ಯ ಅಧಿಪತಿಃ=ಅಂತರಿಕ್ಷಕ್ಕೆ ಸ್ವಾಮಿಯಾದ ವಾಯುದೇವನು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.]

# ಸೂರ್ಯೋ॑ ದಿವಶ್ಚಂದ್ರಮಾ ನಕ್ಷತ್ರಾಣಾಂ ಬೃಹಸ್ಪತಿ ರ್ಬ್ರಹ್ಮಣೋ

---

ಸೂರ್ಯಃ। ದಿವಃ। ಚಂದ್ರಮಾಃ। ನಕ್ಷತ್ರಾಣಾಮ್। ಬೃಹಸ್ಪತಿಃ। ಬ್ರಹ್ಮಣಃ।

---

ಸೂರ್ಯೋ॑ ದಿವೋಽಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

ಚಂದ್ರಮಾ ನಕ್ಷತ್ರಾಣಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

ಬೃಹಸ್ಪತಿರ್ಬ್ರಹ್ಮಣೋಽಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

---

✦ಸೂರ್ಯಃ ದಿವಃ ಅಧಿಪತಿಃ=ದ್ಯುಲೋಕಕ್ಕೆ ಒಡೆಯನಾದ ಸೂರ್ಯನು; [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ಚಂದ್ರಮಾಃ ನಕ್ಷತ್ರಾಣಾಮ್ ಅಧಿಪತಿಃ=ತಾರೆಗಳಿಗೆ ಒಡೆಯನಾದ ಚಂದ್ರನು; [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ಬೃಹಸ್ಪತಿಃ ಬ್ರಹ್ಮಣಃ ಅಧಿಪತಿಃ=ಬ್ರಾಹ್ಮಣ್ಯಜಾತಿಗೆ/ಋತ್ವಿಜರಿಗೆ ಒಡೆಯನಾದ ಬೃಹಸ್ಪತಿಯು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.]

## ಮಿತ್ರಸ್ಸತ್ಯಾನಾಂ ವರುಣೋಽಪಾಗ್ಂ

## ಸಮುದ್ರಸ್ರೋತ್ಯಾನಾ-

---

ಮಿತ್ರಃ । ಸತ್ಯಾನಾಮ್ । ವರುಣಃ । ಅಪಾಮ್ । ಸಮುದ್ರಃ । ಸ್ರೋತ್ಯಾನಾಮ್ ।

---

ಮಿತ್ರಸ್ಸತ್ಯಾನಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ॥

ವರುಣೋಽಪಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ॥

ಸಮುದ್ರಸ್ರೋತ್ಯಾನಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ॥

---

✦ಮಿತ್ರಃ ಸತ್ಯಾನಾಮ್ ಅಧಿಪತಿಃ=ಸತ್ಯವಚನಕ್ಕೆ ಅಧಿಪತಿಯಾದ ಮಿತ್ರನು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ ವರುಣಃ ಅಪಾಮ್ ಅಧಿಪತಿಃ=ಬಾವಿ ಮೊದಲಾದವುಗಳಲ್ಲಿರುವ ಸ್ಥಿರವಾದ ನೀರಿಗೆ ಒಡೆಯನಾದ ವರುಣನು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿ ವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ ಸಮುದ್ರಃ ಸ್ರೋತ್ಯಾನಾಮ್ ಅಧಿಪತಿಃ= ಹರಿಯುತ್ತಿರುವ ನದಿಗಳೇ ಮೊದಲಾದವುಗಳ ನೀರಿಗೆ ಒಡೆಯನಾದ ಸಮುದ್ರನು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.]

# ಮನ್ನಗ್ಂ ಸಾಮ್ರಾಜ್ಯಾನಾಮಧಿಪತಿ ತನ್ಮಾಽವತು

# ಸೋಮ ಓಷಧೀನಾಗ್ಂ ಸವಿತಾ ಪ್ರಸವಾನಾಗ್ಂ

---

ಅನ್ನಮ್ । ಸಾಮ್ರಾಜ್ಯಾನಾಮಿತಿ ಸಾಂ-ರಾಜ್ಯಾನಾಮ್ । ಅಧಿಪತೀತ್ಯಧಿ-ಪತಿ । ತತ್ । ಮಾ । ಅವತು । ಸೋಮಃ । ಓಷಧೀನಾಮ್ । ಸವಿತಾ । ಪ್ರಸವಾನಾಮಿತಿ ಪ್ರ-ಸವಾನಾಮ್ ।

---

ಅನ್ನಗ್ಂ ಸಾಮ್ರಾಜ್ಯಾನಾಮಧಿಪತಿ ತನ್ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ॥

ಸೋಮ ಓಷಧೀನಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ॥

ಸವಿತಾ ಪ್ರಸವಾನಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ॥

---

✦ಅನ್ನಮ್ ಸಾಮ್ರಾಜ್ಯಾನಾಮ್ ಅಧಿಪತಿ=ಸಾಮ್ರಾಜ್ಯವುಳ್ಳವರು ಭೋಗಿಸುವ ದ್ರವ್ಯಗಳಿಗೆ ಅನ್ನವು ಅಧಿಪತಿಯಾಗಿದೆ. ತತ್=ಆ ಅನ್ನವು ಮಾ=ನನ್ನನ್ನು; [ಅಸ್ಮಿನ್... ದೇವಹೂತ್ಯಾಮ್=ಈ ಬ್ರಾಹ್ಮಣ್ಯಾದಿವಿಷಯಗಳಲ್ಲಿ] ಅವತು=ರಕ್ಷಿಸಲಿ. ✦ಸೋಮಃ ಓಷಧೀನಾಮ್ ಅಧಿಪತಿಃ=ಸಸ್ಯವರ್ಗಕ್ಕೆ ಒಡೆಯನಾಗಿರುವ ಸೋಮದೇವನು [ಸಃ...ದೇವ ಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ಸವಿತಾ ಪ್ರಸವಾನಾಮ್ ಅಧಿಪತಿಃ=ಅನುಜ್ಞೆ ಕೊಡುವವರಿಗೆ ಒಡೆಯನಾದ ಸವಿತೃದೇವನು [ಸಃ..ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.]

# ರುದ್ರಃ ಪಶೂನಾಂ ತ್ವಷ್ಟಾ ರೂಪಾಣಾಂ ವಿಷ್ಣುಃ ಪರ್ವತಾನಾಂ

---

ರುದ್ರಃ। ಪಶೂನಾಮ್। ತ್ವಷ್ಟಾ। ರೂಪಾಣಾಮ್। ವಿಷ್ಣುಃ। ಪರ್ವತಾನಾಮ್।

---

ರುದ್ರಃ ಪಶೂನಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

ತ್ವಷ್ಟಾ ರೂಪಾಣಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

ವಿಷ್ಣುಃ ಪರ್ವತಾನಾಮಧಿಪತಿಸ್ಸ ಮಾಽವತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್।

---

✦ ರುದ್ರಃ ಪಶೂನಾಮ್ ಅಧಿಪತಿಃ=ಪಶುಗಳಿಗೆ ಒಡೆಯನಾದ ರುದ್ರದೇವನು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ ತ್ವಷ್ಟಾ ರೂಪಾಣಾಮ್ ಅಧಿಪತಿಃ=ರೂಪಗಳಿಗೆ ಅಧಿಪತಿಯಾದ ತ್ವಷ್ಟನು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.] ✦ ವಿಷ್ಣುಃ ಪರ್ವತಾನಾಮ್ ಅಧಿಪತಿಃ=ಪರ್ವತಗಳಿಗೆ ಒಡೆಯನಾದ ಸರ್ವ ವ್ಯಾಪಕನಾದ ಮಹಾವಿಷ್ಣುವು [ಸಃ...ದೇವಹೂತ್ಯಾಮ್ ಅವತು=ಬ್ರಾಹ್ಮಣ್ಯಾದಿ ವಿಷಯಗಳಲ್ಲಿ ನನ್ನನ್ನು ರಕ್ಷಿಸಲಿ.]

ಮರುತೋ ಗಣಾನಾಮಧಿಪತಯಸ್ತೇ ಮಾऽವಂತು ಪಿತರಃ

ಪಿತಾಮಹಾಃ ಪರೇऽವರೇ ತತಾಸ್ತತಾಮಹಾ ಇಹ

---

ಮರುತಃ । ಗಣಾನಾಮ್ । ಅಧಿಪತಯ ಇತ್ಯಧಿ-ಪತಯಃ । ತೇ । ಮಾ । ಅವಂತು ।

ಪಿತರಃ । ಪಿತಾಮಹಾಃ । ಪರೇ । ಅವರೇ । ತತಾಃ । ತತಾಮಹಾಃ । ಇಹ ।

---

ಮರುತೋ ಗಣಾನಾಮಧಿಪತಯಸ್ತೇ ಮಾऽವಂತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇऽಸ್ಯಾ

ಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ।

ಪಿತರಃ ಪಿತಾಮಹಾಃ ಪರೇऽವರೇ ತತಾಸ್ತತಾಮಹಾ ಇಹ

---

+ಮರುತಃ ಗಣಾನಾಮ್ ಅಧಿಪತಯಃ=ಮರುದ್ದೇವತೆಗಳು ಅದಿತ್ಯ-ವಸ್ವಾದಿಗಣಗಳಿಗೆ ಒಡೆಯರಾಗಿದ್ದಾರೆ; ತೇ=ಆ ಮರುದ್ದೇವತೆಗಳು; ಮಾ=ನನ್ನನ್ನು; [ಅಸ್ಮಿನ್...ದೇವಹೂತ್ಯಾಮ್=ಬ್ರಾಹ್ಮಣ್ಯಾದಿವಿಷಯಗಳಲ್ಲಿ ] ಅವಂತು= ರಕ್ಷಿಸಲಿ; ಪಿತರಃ ಪಿತಾಮಹಾಃ ಪರೇ=ಏಳು ತಲೆಗಳ ಹಿಂದಿರುವ ಪಿತೃದೇವತೆಗಳೇ!* ತತಾಃ ತತಾಮಹಾಃ ಅವರೇ=ಏಳು ತಲೆಗಳಿಂದ ಈಚಿನವರಾದ ಪಿತೃದೇವತೆಗಳೇ! ಇಹ=ಈ ವಿಷಯಗಳಲ್ಲಿ [ಅಂದರೆ]

---

ಅಭ್ಯಾತಾನಹೋಮಗಳಿಗೆ ಅಗ್ನಿ, ಇಂದ್ರ,ಯಮ,(ಅಗ್ನಿ ವಿಶೇಷ) ವಾಯು, ಸೂರ್ಯ, ಚಂದ್ರ, ಬೃಹಸ್ಪತಿ, ಮಿತ್ರ, ವರುಣ, ಸಮುದ್ರ, ಅನ್ನ, ಸೋಮ, ಸವಿತೃ, ರುದ್ರ, ತ್ವಷ್ಟೃ, ವಿಷ್ಣು, ಮರುದ್ದೇವತೆಗಳು, ಹಾಗೂ ಪಿತೃಗಳು ದೇವತೆಗಳು.

ಈ ಮಂತ್ರಗಳಲ್ಲಿ 'ಅಗ್ನಿರ್ವಾವ ಯಮಃ' ಎಂಬ ಶ್ರುತಿವಾಕ್ಯವನ್ನು ಅನುಸರಿಸಿ ಯಮ

---

*ಪಿತೃ-ಪಿತಾಮಹ ಶಬ್ದಗಳು ಬದುಕಿರುವ ತಂದೆ ಮತ್ತು ಅಜ್ಜನನ್ನು ಹೇಳುತ್ತವೆ. ತತ-ತತಾಮಹ ಶಬ್ದಗಳು ಮೃತರಾಗಿರುವ ಜನಕಾದಿಗಳನ್ನು ಈ ಮಂತ್ರದಲ್ಲಿ ಹೇಳುತ್ತವೆ. ಹೀಗಾಗಿ ಪೌನರುಕ್ತ್ಯವಿಲ್ಲ.

ಮಾಽವತ । ಅಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್

॥೧೬-5॥

[ಅವರೇ ಸಪ್ತದಶ ಚ ॥]

---

ಮಾ । ಅವತ । ಅಸ್ಮಿನ್ನ್ । ಬ್ರಹ್ಮನ್ನ್ । ಅಸ್ಮಿನ್ನ್ । ಕ್ಷತ್ರೇ । ಅಸ್ಯಾಮ್ । ಆಶಿಷೀತ್ಯಾ-ಶಿಷಿ । ಅಸ್ಯಾಮ್ । ಪುರೋಧಾಯಾಮಿತಿ ಪುರಃ-ಧಾಯಾಮ್ । ಅಸ್ಮಿನ್ನ್ । ಕರ್ಮನ್ನ್ । ಅಸ್ಯಾಮ್ । ದೇವಹೂತ್ಯಾಮಿತಿ ದೇವ-ಹೂತ್ಯಾಮ್ ॥೧೬॥

---

ಮಾಽವತ । ಅಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ ದೇವಹೂತ್ಯಾಮ್ ।

---

ಅಸ್ಮಿನ್ ಬ್ರಹ್ಮನ್, ಅಸ್ಮಿನ್ ಕ್ಷತ್ರೇ, ಅಸ್ಯಾಮ್ ಆಶಿಷಿ, ಅಸ್ಯಾಮ್ ಪುರೋಧಾಯಾಮ್, ಅಸ್ಮಿನ್ ಕರ್ಮನ್, ಅಸ್ಯಾಮ್ ದೇವಹೂತ್ಯಾಮ್= ಬ್ರಾಹ್ಮಣ್ಯ, ಕ್ಷಾತ್ರ, ಈ ಫಲಾಶಂಸೆ, ಈ ಪ್ರಾಧಾನ್ಯ, ಈ ಯಾಗಾದಿಕರ್ಮಗಳು, ಈ ದೇವತಾಹ್ವಾನ [ಇವುಗಳ ವಿಷಯದಲ್ಲಿ] ಮಾ ಅವತ=ನನ್ನನ್ನು ರಕ್ಷಿಸಿರಿ.

---

ಶಬ್ದಕ್ಕೆ ಅಗ್ನಿಯೆಂದು ಅರ್ಥವನ್ನು ಹೇಳಲಾಗಿದೆ.

## ॥ ಷಷ್ಠೋಽನುವಾಕಃ ॥

ದೇವಾ ವೈ ಯದ್ಯಜ್ಞೇಽಕುರ್ವತ ತದಸುರಾ ಅಕುರ್ವತ

ತೇ ದೇವಾ ಏತಾನಭ್ಯಾತಾನಾನಪಶ್ಯ-

---

ದೇವಾಃ । ವೈ । ಯತ್ । ಯಜ್ಞೇ । ಅಕುರ್ವತ । ತತ್ । ಅಸುರಾಃ । ಅಕುರ್ವತ ।

ತೇ । ದೇವಾಃ । ಏತಾನ್ । ಅಭ್ಯಾತಾನಾನಿತ್ಯಭಿ-ಆತಾನಾನ್ । ಅಪಶ್ಯನ್ ।

---

ಐದನೆಯ ಅನುವಾಕದಲ್ಲಿ ಅಭ್ಯಾತಾನಮಂತ್ರಗಳು ಹೇಳಲ್ಪಟ್ಟವು. ಈ ಆರನೆಯ ಅನುವಾಕದಲ್ಲಿ ಆ ಅಭ್ಯಾತಾನಮಂತ್ರಗಳ ಬ್ರಾಹ್ಮಣವೂ ಅನಂತರ ಅಭ್ಯಾತಾನ-ಜಯ-ರಾಷ್ಟ್ರಭೃನ್ಮಂತ್ರಗಳ ಒಟ್ಟಾದ ವಿನಿಯೋಗವೂ ಹೇಳಲ್ಪಡುತ್ತದೆ.

---

ಅಭ್ಯಾತಾನಮಂತ್ರಗಳ ವಿನಿಯೋಗಕ್ಕಾಗಿ ಉಪಾಖ್ಯಾನ-ವಿಧಿ-ಪ್ರಶಂಸೆ

| ಬ್ರಾಹ್ಮಣ | ವಿವರಣೆ |
|---|---|
| ದೇವಾಃ ವೈ ಯತ್ ಯಜ್ಞೇ ಅಕುರ್ವತ ತತ್ ಅಸುರಾಃ ಅಕುರ್ವತ | ದೇವತೆಗಳು ಯಜ್ಞದ ವಿಷಯದಲ್ಲಿ ಏನೇನನ್ನು ಮಾಡಿದರೋ ಅದನ್ನು ಅಸುರರೂ ಮಾಡಿದರು. |
| ತೇ ದೇವಾಃ | ಆ ದೇವತೆಗಳು |
| ಏತಾನ್ ಅಭ್ಯಾತಾನಾನ್ ಅಪಶ್ಯನ್ | [ತಮ್ಮ ಕರ್ಮಸಮೃದ್ಧಿಗಾಗಿ] ಈ ಅಭ್ಯಾತಾನ ಮಂತ್ರಗಳನ್ನು ತಿಳಿದುಕೊಂಡರು. |

–ನ್ತಾನಭ್ಯಾತನ್ವತ ಯದ್ದೇವಾನಾಂ ಕರ್ಮಾಽಸೀದಾರ್ಧ್ಯತ

ತದ್ಯದಸುರಾಣಾಂ ನ ತದಾರ್ಧ್ಯತ ಯೇನ ಕರ್ಮಣೇರ್ತ್ಸೇ

ತ್ತತ್ರ ಹೋತವ್ಯಾ ಋಧ್ನೋತ್ಯೇವ ತೇನ ಕರ್ಮಣಾ

---

ತಾನ್ । ಅಭ್ಯಾತನ್ವತೇತ್ಯಭಿ–ಅತನ್ವತ । ಯತ್ । ದೇವಾನಾಮ್ । ಕರ್ಮ । ಆಸೀತ್ । ಆರ್ಧ್ಯತ । ತತ್ । ಯತ್ । ಅಸುರಾಣಾಮ್ । ನ । ತತ್ । ಆರ್ಧ್ಯತ । ಯೇನ । ಕರ್ಮಣಾ । ಈರ್ತ್ಸೇತ್ । ತತ್ರ । ಹೋತವ್ಯಾಃ । ಋಧ್ನೋತಿ । ಏವ । ತೇನ । ಕರ್ಮಣಾ ।

---

| | |
|---|---|
| ತಾನ್ ಅಭ್ಯಾತನ್ವತ | ಆ ಮಂತ್ರಗಳನ್ನು ಎದುರಿಗೆ ತಂದುಕೊಂಡು ಹೋಮವನ್ನು ಅನುಷ್ಠಿಸಿದರು. |
| ದೇವಾನಾಮ್ ಕರ್ಮ ಯತ್ ಆಸೀತ್ ತತ್ ಆರ್ಧ್ಯತ | [ಆ ಹೋಮಗಳ ಫಲವಾಗಿ] ಯಾವುದು ದೇವತೆಗಳ ಕರ್ಮವಾಗಿತ್ತೋ ಆ ಕರ್ಮವು ಸಮೃದ್ಧವಾಯಿತು. |
| ಯತ್ ಅಸುರಾಣಾಮ್ [ಕರ್ಮ] ತತ್ ನ ಆರ್ಧ್ಯತ | [ಈ ಹೋಮರಹಿತವಾದ] ಅಸುರರ ಆ ಕರ್ಮವು ಸಮೃದ್ಧಿ ಹೊಂದಲಿಲ್ಲ. |
| ಯೇನ ಕರ್ಮಣಾ ಈರ್ತ್ಸೇತ್ | ಯಾವ ಕರ್ಮದಿಂದ ಫಲಸಮೃದ್ಧಿಯನ್ನು ಪಡೆಯಲು ಇಚ್ಛಿಸುತ್ತಾನೆಯೋ |
| ತತ್ರ ಹೋತವ್ಯಾಃ | ಯಜಮಾನನು ಮಾಡುವ ಆ ಕರ್ಮದಲ್ಲಿ ಈ ಅಭ್ಯಾತಾನಹೋಮಗಳು ಮಾಡಲ್ಪಡಬೇಕು.[ವಿಧಿ] |
| ತೇನ ಕರ್ಮಣಾ ಋಧ್ನೋತಿ ಏವ | ಆ ಕರ್ಮದಿಂದ ಯಜಮಾನನು ಫಲ ಸಮೃದ್ಧಿ ಯನ್ನು ಹೊಂದಿಯೇ ಹೊಂದುತ್ತಾನೆ. |

---

ಕರ್ಮಸಮೃದ್ಧಿಗಾಗಿ ಈ ಅಭ್ಯಾತಾನಹೋಮವು ವಿಹಿತವಾಗಿದೆ. ದೇವತೆಗಳು

ಯದ್ವಿಶ್ವೇ ದೇವಾಸ್ಸಮಭರನ್ತಸ್ಮಾದಭ್ಯಾತಾನಾ

ವೈಶ್ವದೇವಾ ಯತ್ಪ್ರಜಾಪತಿರ್ಜಯಾನ್ಪ್ರಾಯಚ್ಛ

ತ್ತಸ್ಮಾಜ್ಜಯಾಃ ಪ್ರಾಜಾಪತ್ಯಾ [ಪ್ರಾಜಾಪತ್ಯಾಃ(೧೭)]

---

ಯತ್ । ವಿಶ್ವೇ । ದೇವಾಃ । ಸಮಭರನ್ನಿತಿ ಸಂ-ಅಭರನ್ನ್ । ತಸ್ಮಾತ್ । ಅಭ್ಯಾತಾನಾ ಇತ್ಯಭಿ-ಆತಾನಾಃ । ವೈಶ್ವದೇವಾ ಇತಿ ವೈಶ್ವ-ದೇವಾಃ । ಯತ್ । ಪ್ರಜಾಪತಿರಿತಿ ಪ್ರಜಾ-ಪತಿಃ । ಜಯಾನ್ । ಪ್ರೇತಿ । ಅಯಚ್ಛತ್ । ತಸ್ಮಾತ್ । ಜಯಾಃ । ಪ್ರಾಜಾಪತ್ಯಾ ಇತಿ ಪ್ರಾಜಾ-ಪತ್ಯಾಃ ।(೧೭)।

---

### ಅಭ್ಯಾತಾನ-ಜಯ-ರಾಷ್ಟ್ರಭೃತ್-ಇವುಗಳ ನಾಮನಿರ್ವಚನ

| | |
|---|---|
| **ಯತ್ ವಿಶ್ವೇ ದೇವಾಃ ಸಮಭರನ್** | ಯಾವ ಕಾರಣದಿಂದ ದೇವತೆಗಳೆಲ್ಲರೂ ಈ ಹೋಮಮಂತ್ರಗಳನ್ನು ಸಂಪಾದಿಸಿದರೋ |
| **ತಸ್ಮಾತ್ ಅಭ್ಯಾತಾನಾಃ ವೈಶ್ವದೇವಾಃ** | ಆ ಕಾರಣದಿಂದ ಅಭ್ಯಾತಾನಗಳು ವೈಶ್ವದೇವಗಳೆಂದು ಹೇಳಲ್ಪಡುತ್ತವೆ. |
| **ಯತ್ ಪ್ರಜಾಪತಿಃ ಜಯಾನ್ ಪ್ರಾಯಚ್ಛತ್** | ಯಾವ ಕಾರಣದಿಂದ ಪ್ರಜಾಪತಿದೇವನು ಜಯಮಂತ್ರಗಳನ್ನು [ಇಂದ್ರನಿಗೆ ಜಯಾರ್ಥವಾಗಿ] ಕೊಟ್ಟನೋ |
| **ತಸ್ಮಾತ್ ಜಯಾಃ ಪ್ರಾಜಾಪತ್ಯಾಃ** | ಆ ಕಾರಣದಿಂದ ಜಯಮಂತ್ರಗಳು ಪ್ರಾಜಾಪತ್ಯಗಳೆಂದು ಹೇಳಲ್ಪಡುತ್ತವೆ. |

---

ಅನುಷ್ಠಾನ ಮಾಡಿದುದನ್ನೇ ಅಸುರರೂ ಅನುಷ್ಠಿಸಿದರೂ ಅಭ್ಯಾತಾನಮಂತ್ರಗಳಿಂದ ಹವನವನ್ನು ಮಾಡಿದ ದೇವತೆಗಳ ಕರ್ಮವು ಸಮೃದ್ಧವಾಗಿ, ಅಸುರರು ಅದನ್ನು

ಯದ್ರಾಷ್ಟ್ರಭೃದ್ಭಿ॑ ರಾಷ್ಟ್ರಮಾದದತ ತದ್ರಾಷ್ಟ್ರಭೃತಾಗ್ಂ

ರಾಷ್ಟ್ರಭೃತ್ತ್ವಂ ತೇ ದೇವಾ

ಅಭ್ಯಾತಾನ್ಯೈರಸುರಾನಭ್ಯಾತನ್ವತ ಜಯ್ಯೈರಜಯ-

---

ಯತ್ । ರಾಷ್ಟ್ರಭೃದ್ಭಿರಿತಿ ರಾಷ್ಟ್ರಭೃತ್-ಭಿಃ । ರಾಷ್ಟ್ರಮ್ । ಏತಿ । ಅದದತ । ತತ್ । ರಾಷ್ಟ್ರಭೃತಾಮಿತಿ ರಾಷ್ಟ್ರ-ಭೃತಾಮ್ । ರಾಷ್ಟ್ರಭೃತ್ತ್ವಮಿತಿ ರಾಷ್ಟ್ರಭೃತ್-ತ್ವಮ್ । ತೇ । ದೇವಾಃ । ಅಭ್ಯಾತಾನ್ಯೈರಿತ್ಯಭಿ-ಆತಾನ್ಯೈಃ । ಅಸುರಾನ್ । ಅಭ್ಯಾತನ್ವತೇತ್ಯಭಿ-ಆತನ್ವತ । ಜಯ್ಯೈಃ । ಅಜಯನ್ನ್ ।

---

| | |
|---|---|
| ಯತ್ ರಾಷ್ಟ್ರಭೃದ್ಭಿಃ ರಾಷ್ಟ್ರಮ್ ಆದದತ | ಯಾವ ಕಾರಣದಿಂದ ರಾಷ್ಟ್ರಭೃನ್ಮಂತ್ರಗಳಿಂದ [ದೇವತೆಗಳು] [ಅಸುರರ] ಶತ್ರುಗಳ ರಾಷ್ಟ್ರವನ್ನು ತಮ್ಮದನ್ನಾಗಿ ಮಾಡಿಕೊಂಡರೋ |
| ತತ್ ರಾಷ್ಟ್ರಭೃತಾಮ್ ರಾಷ್ಟ್ರಭೃತ್ತ್ವಮ್ | ಆ ಕಾರಣದಿಂದ ರಾಷ್ಟ್ರಭೃನ್ಮಂತ್ರಗಳು ಅನ್ವರ್ಥವಾಗಿ 'ರಾಷ್ಟ್ರಭೃತ್' ಎನ್ನಿಸಿಕೊಳ್ಳುತ್ತವೆ. |

### ಅಭ್ಯಾತಾನ-ಜಯ-ರಾಷ್ಟ್ರಭೃತ್ ಪದಗಳ ನಿರ್ವಚನ

| | |
|---|---|
| ತೇ ದೇವಾಃ ಅಭ್ಯಾತಾನ್ಯೈಃ ಅಸುರಾನ್ ಅಭ್ಯಾತನ್ವತ | ಆ ದೇವತೆಗಳು ಅಭ್ಯಾತಾನಗಳಿಂದ ಅಸುರರನ್ನು ಅಧೀನರನ್ನಾಗಿ ಮಾಡಿಕೊಂಡರು. |
| ಜಯ್ಯೈಃ ಅಜಯನ್ | ಜಯಮಂತ್ರಗಳಿಂದ ಅಸುರರನ್ನು ಗೆದ್ದರು. |

---

ಅನುಷ್ಠಿಸದಿದ್ದರಿಂದ ಅವರ ಕರ್ಮವು ಸಮೃದ್ಧವಾಗಲಿಲ್ಲ. ಹೀಗಾಗಿ ಕರ್ಮಸಮೃದ್ಧಿಗಾಗಿ ಅಭ್ಯಾತಾನಹೋಮಗಳನ್ನು ಅನುಷ್ಠಿಸಬೇಕು.

ನ್ರಾಷ್ಟ್ರಭೃದ್ಭೀ ರಾಷ್ಟ್ರಮಾದದತ ಯದ್ದೇವಾ ಅಭ್ಯಾತಾನ್ಯೈ
ರಸುರಾನಭ್ಯಾತನ್ವತ ತದಭ್ಯಾತಾನಾನಾಮಭ್ಯಾತಾನತ್ವಂ
ಯಜ್ಜಯ್ಯೈರಜಯನ್ತಜ್ಜಯಾನಾಂ ಜಯತ್ವಂ

---

ರಾಷ್ಟ್ರಭೃದ್ಭಿರಿತಿ ರಾಷ್ಟ್ರಭೃತ್-ಭಿಃ । ರಾಷ್ಟ್ರಮ್ । ಏತಿ । ಅದದತ । ಯತ್ । ದೇವಾಃ ।
ಅಭ್ಯಾತಾನ್ಯೈರಿತ್ಯಭಿ-ಆತಾನ್ಯೈಃ । ಅಸುರಾನ್ । ಅಭ್ಯಾತನ್ವತೇತ್ಯಭಿ-ಆತನ್ವತ । ತತ್ ।
ಅಭ್ಯಾತಾನಾನಾಮಿತ್ಯಭಿ-ಆತಾನಾನಾಮ್ । ಅಭ್ಯಾತಾನತ್ವಮಿತ್ಯಭ್ಯಾತಾನ-ತ್ವಮ್ ।
ಯತ್ । ಜಯ್ಯೈಃ । ಅಜಯನ್ । ತತ್ । ಜಯಾನಾಮ್ । ಜಯತ್ವಮಿತಿ ಜಯ-ತ್ವಮ್ ।

---

| | |
|---|---|
| ರಾಷ್ಟ್ರಭೃದ್ಭಿಃ ರಾಷ್ಟ್ರಮ್ ಆದದತ | ರಾಷ್ಟ್ರಭೃತ್ತುಗಳಿಂದ ಅಸುರರಾಜ್ಯವನ್ನು ತಮ್ಮದನ್ನಾಗಿ ಮಾಡಿಕೊಂಡರು. |
| ಯತ್ ದೇವಾಃ ಅಭ್ಯಾತಾನ್ಯೈಃ | ಯಾವ ಕಾರಣದಿಂದ ದೇವತೆಗಳು |
| ಅಸುರಾನ್ ಅಭ್ಯಾತನ್ವತ | ಅಭ್ಯಾತಾನಮಂತ್ರಗಳಿಂದ ಅಸುರರನ್ನು ವಿಧೇಯರನ್ನಾಗಿಸಿದರೋ |
| ತತ್ ಅಭ್ಯಾತಾನಾನಾಮ್ ಅಭ್ಯಾತಾನತ್ವಮ್ | ಅದೇ ಅಭ್ಯಾತಾನಮಂತ್ರಗಳ ಅಭ್ಯಾತಾನತ್ವ [ಅನ್ವರ್ಥ ಹೆಸರು] |
| ಯತ್ ಜಯ್ಯೈಃ ಅಜಯನ್ | ಯಾವ ಕಾರಣದಿಂದ ದೇವತೆಗಳು ಅಸುರರನ್ನು ಜಯಿಸಿದರೋ |
| ತತ್ ಜಯಾನಾಮ್ ಜಯತ್ವಮ್ | ಆ ಕಾರಣದಿಂದ ಜಯಸಂಜ್ಞೆಯೂ ಅನ್ವರ್ಥವಾಯಿತು. |

---

ಈ ಜಯ-ಅಭ್ಯಾತಾನಹೋಮಗಳೂ ಮುಂದೆ ಹೇಳುವ ರಾಷ್ಟ್ರಭೃನ್ಮಂತ್ರ ಹೋಮಗಳೂ ಶತ್ರುಜಯಕ್ಕಾಗಿಯೂ ಹೇಳಲ್ಪಟ್ಟಿವೆ. ವೈಶ್ವದೇವವೆಂಬ ಹೆಸರಿನ

ಯದ್ರಾಷ್ಟ್ರಭೃದ್ಭಿಃ ರಾಷ್ಟ್ರಮಾದದತ ತದ್ರಾಷ್ಟ್ರಭೃತಾಗ್ಂ

ರಾಷ್ಟ್ರಭೃತ್ತ್ವಂ ತತೋ ದೇವಾ ಅಭವನ್ಪರಾಽಸುರಾ

ಯೋ ಭ್ರಾತೃವ್ಯವಾನ್ಥ್ಸ್ಯಾತ್

---

ಯತ್ । ರಾಷ್ಟ್ರಭೃದ್ಭಿರಿತಿ ರಾಷ್ಟ್ರಭೃತ್-ಭಿಃ । ರಾಷ್ಟ್ರಮ್ । ಆ । ಅದದತ । ತತ್ । ರಾಷ್ಟ್ರಭೃತಾಮಿತಿ ರಾಷ್ಟ್ರ-ಭೃತಾಮ್ । ರಾಷ್ಟ್ರಭೃತ್ತ್ವಮಿತಿ ರಾಷ್ಟ್ರಭೃತ್-ತ್ವಮ್ । ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ । ಯಃ । ಭ್ರಾತೃವ್ಯವಾನಿತಿ ಭ್ರಾತೃವ್ಯ-ವಾನ್ । ಸ್ಯಾತ್ ।

---

| | |
|---|---|
| ಯತ್ ರಾಷ್ಟ್ರಭೃದ್ಭಿಃ ರಾಷ್ಟ್ರಮ್ ಆದದತ | ಯಾವ ಕಾರಣದಿಂದ ರಾಷ್ಟ್ರಭೃತ್ತುಗಳಿಂದ ಶತ್ರುರಾಷ್ಟ್ರವನ್ನು ತಮ್ಮದನ್ನಾಗಿ ಮಾಡಿಕೊಂಡರೋ |
| ತತ್ ರಾಷ್ಟ್ರಭೃತಾಮ್ ರಾಷ್ಟ್ರಭೃತ್ತ್ವಮ್ | ಆ ಕಾರಣದಿಂದ ರಾಷ್ಟ್ರಭೃನ್ಮಂತ್ರಗಳಿಗೆ 'ರಾಷ್ಟ್ರಭೃತ್' ಎಂಬ ಸಂಜ್ಞೆಯು ಅನ್ವರ್ಥವಾಗಿದೆ. |
| ತತಃ ದೇವಾಃ ಅಭವನ್ | ಈ ಹೋಮಗಳ ಅನುಷ್ಠಾನಾನಂತರದಲ್ಲಿ ದೇವತೆಗಳು ವಿಜಯಿಗಳಾದರು. |
| ಅಸುರಾಃ ಪರಾ [ಅಭವನ್] | ಅಸುರರು ಪರಾಜಿತರಾದರು/ಸೋತುಹೋದರು. |

## ಈ ಹೋಮಗಳಿಗೆ ಅಧಿಕಾರಿ-ಫಲ

| | |
|---|---|
| ಯಃ ಭ್ರಾತೃವ್ಯವಾನ್ ಸ್ಯಾತ್ | ಯಾವ ಯಜಮಾನನು ಹಗೆಗಳುಳ್ಳವನಾಗಿರುತ್ತಾನೆಯೋ |

ಥ್ಸ ಏತಾಞ್ಜುಹುಯಾದಭ್ಯಾತಾನ್ಯೈರೇವ ಭ್ರಾತೃವ್ಯಾನಭ್ಯಾ

ತನುತೇ ಜಯ್ಯೈರ್ಜಯತಿ ರಾಷ್ಟ್ರಭೃದ್ಭೀ ರಾಷ್ಟ್ರಮಾದತ್ತೇ

ಭವತ್ಯಾತ್ಮನಾ ಪರಾಸ್ಯ ಭ್ರಾತೃವ್ಯೋ ಭವತಿ ॥೧೮-6॥

[ಪ್ರಾಜಾಪತ್ಯಾಸ್ಸೋಽಷ್ಟಾದಶ ಚ ॥]

---

ಸಃ । ಏತಾನ್ । ಜುಹುಯಾತ್ । ಅಭ್ಯಾತಾನ್ಯೈರಿತ್ಯಭಿ-ಆತಾನ್ಯೈಃ । ಏವ । ಭ್ರಾತೃವ್ಯಾನ್ । ಅಭ್ಯಾತನುತ ಇತ್ಯಭಿ-ಆತನುತೇ । ಜಯ್ಯೈಃ । ಜಯತಿ । ರಾಷ್ಟ್ರಭೃದ್ಭಿರಿತಿ ರಾಷ್ಟ್ರಭೃತ್-ಭಿಃ । ರಾಷ್ಟ್ರಮ್ । ಏತಿ । ದತ್ತೇ । ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ ॥ ೧೮ ॥

---

| | |
|---|---|
| ಸಃ ಏತಾನ್ ಜುಹುಯಾತ್ | ಆತನು ಈ ಹೋಮಗಳನ್ನು ಮಾಡಬೇಕು. |
| ಅಭ್ಯಾತಾನ್ಯೈಃ ಏವ ಭ್ರಾತೃವ್ಯಾನ್ ಅಭ್ಯಾತನುತೇ | ಅವನು ಅಭ್ಯಾತಾನಹೋಮಗಳಿಂದ ವೈರಿಗಳನ್ನು ಸ್ವಾಧೀನಪಡಿಸಿಕೊಳ್ಳುತ್ತಾನೆ. |
| ಜಯ್ಯೈಃ ಜಯತಿ ರಾಷ್ಟ್ರಭೃದ್ಭಿಃ ರಾಷ್ಟ್ರಮ್ ಆ ದತ್ತೇ | ಜಯಹೋಮಗಳಿಂದ ಶತ್ರುಗಳನ್ನು ಜಯಿಸುತ್ತಾನೆ. ರಾಷ್ಟ್ರಭೃನ್ಮಂತ್ರಗಳಿಂದ ಹಗೆಯ ರಾಷ್ಟ್ರವನ್ನು ತನ್ನದನ್ನಾಗಿ ಮಾಡಿಕೊಳ್ಳುತ್ತಾನೆ. |
| ಆತ್ಮನಾ ಭವತಿ | ತಾನು ವೈರಿಗಳಿಗಿಂತ ಅಧಿಕನಾಗುತ್ತಾನೆ. |
| ಅಸ್ಯ ಭ್ರಾತೃವ್ಯಃ ಪರಾಭವತಿ | ಈತನ ಹಗೆಯು ಸೋತು ಹೋಗುತ್ತಾನೆ. |

---

ಅಭ್ಯಾತಾನಗಳೂ, ಜಯವನ್ನೀಯುವ ಜಯಮಂತ್ರಗಳೂ, ರಾಷ್ಟ್ರವನ್ನು ಸ್ವಾಧೀನಪಡಿಸಿಕೊಳ್ಳಲು ಸಾಧನವಾದ ರಾಷ್ಟ್ರಭೃನ್ಮಂತ್ರಗಳೂ ಅನ್ವರ್ಥವಾಗಿವೆ. ದೇವತೆಗಳು ಅಭ್ಯಾತಾನಮಂತ್ರಗಳಿಂದ ಅಸುರರನ್ನು ಸ್ವಾಧೀನಪಡಿಸಿಕೊಂಡರು. ಜಯಮಂತ್ರಗಳಿಂದ

ಅವರನ್ನು ಗೆದ್ದರು. ರಾಷ್ಟ್ರಭೃನ್ಮಂತ್ರಗಳಿಂದ ಅಸುರರಾಷ್ಟ್ರವನ್ನು ವಶಪಡಿಸಿ ಕೊಂಡರು. ಹೀಗೆಯೂ ಮಂತ್ರಗಳಿಗೆ ಅನ್ವರ್ಥಸಂಜ್ಞೆಯು ಇದೆ. ಮಂತ್ರಪಾಠದಲ್ಲಿ ಮೊದಲು ಜಯಮಂತ್ರಗಳು ಪಠಿತವಾಗಿವೆ. ಬಳಿಕ ಅಭ್ಯಾತಾನಮಂತ್ರಗಳಿವೆ. ಅನಂತರ ರಾಷ್ಟ್ರಭೃನ್ಮಂತ್ರಗಳು ಇವೆ.

ಬ್ರಾಹ್ಮಣದ ವಿವರಣೆಯಲ್ಲಿ ಮೂರು ಬಾರಿಯೂ ಮೊದಲು ಅಭ್ಯಾತಾನ–ಜಯ–ರಾಷ್ಟ್ರಭೃತ್–ಈ ಕ್ರಮವನ್ನು ಅನುಸರಿಸಲಾಗಿದೆ.

ಮೊದಲು ಶತ್ರುಬಲವನ್ನು ಕಡಿಮೆ ಮಾಡುವುದು–ಬಳಿಕ ಜಯಿಸುವುದು–ಅನಂತರ ಶತ್ರುರಾಜ್ಯವನ್ನು ಸ್ವಾಧೀನ ಪಡಿಸಿಕೊಳ್ಳುವುದು–ಎಂದು ಈ ಕ್ರಮದಲ್ಲಿ ನಿರೂಪಿಸಿರುವುದರ ಅಭಿಪ್ರಾಯ ಎಂದು ವಿವರಿಸಬಹುದು.

ಈ ರೀತಿಯ ಕಾಮನೆಯುಳ್ಳ ಯಜಮಾನನು ಈ ಹೋಮಗಳನ್ನು ಅನುಷ್ಠಿಸಬೇಕು.

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

೧) ಯೇನ 'ಕರ್ಮಣಾ' ಎಂಬುದರ ತಾತ್ಪರ್ಯ ಏನು?

[ಜೈ.ಸೂ.3.4.24.25]

ಜೈಮಿನಿಸೂತ್ರದ ೩ನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಹೀಗೆ ವಿಚಾರ ಮಾಡಲಾಗಿದೆ.

ಅನಾರಭ್ಯಾಧೀತವಾದ 'ಯೇನ ಕರ್ಮಣೇರ್ತ್ಸೇತ್ ತತ್ರ ಹೋತವ್ಯಾಃ' ಎಂಬ ಶ್ರುತಿವಾಕ್ಯಕ್ಕೆ ಯಾವ ಕರ್ಮದಲ್ಲಿ ಯಜಮಾನನು ಫಲಾಧಿಕ್ಯವನ್ನು ಬಯಸು ವನೋ ಅಲ್ಲಿ ಈ ಜಯಾದಿಹೋಮಗಳು ಅನುಷ್ಠಿಸಲ್ಪಡಬೇಕು ಎಂದು ಅರ್ಥ. ಕರ್ಮ ಎಂಬುದರಿಂದ ವೈದಿಕಕರ್ಮಗಳನ್ನು ಮಾತ್ರ ಪರಿಗ್ರಹಿಸಬೇಕೇ? ಅಥವಾ ಕೃಷಿ ಮುಂತಾದ ಲೌಕಿಕಕರ್ಮಗಳನ್ನು ಪರಿಗ್ರಹಿಸಬಹುದೇ? ಎಂಬುದು ಇಲ್ಲಿನ ಸಂಶಯ. 'ಕರ್ಮಣಾ' ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಎಲ್ಲ ಕರ್ಮಗಳ ಲ್ಲಿಯೂ ಈ ಹೋಮಗಳನ್ನು ಮಾಡಬೇಕು. ಹೀಗಾಗಿ ಇವು ಸರ್ವಕರ್ಮಾಂಗ ಗಳು ಎಂಬುದು ಇಲ್ಲಿನ ಪೂರ್ವಪಕ್ಷ.

'ಯದಾಹವನೀಯೇ ಜುಹ್ವತಿ । ತೇನ ಸೋऽಸ್ಯಾಭೀಷ್ಟಃ ಪ್ರೀತಃ' ಎಂಬ ವಾಕ್ಯಗಳಂತೆ ಹೋಮಗಳನ್ನು ಸಾಮಾನ್ಯವಾಗಿ ಆಹವನೀಯದಲ್ಲಿ ಮಾಡಬೇಕು. ಕೃಷಿ ಮುಂತಾದ ಲೌಕಿಕಕರ್ಮಗಳಲ್ಲಿ ಆಹವನೀಯಾಗ್ನಿಯಿಲ್ಲ. ಆದುದರಿಂದ ಅನಾರಭ್ಯಾಧೀತವಾಗಿ ಹೇಳಿದ್ದರೂ, 'ಕರ್ಮಣಾ' ಎಂದು ಸಾಮಾನ್ಯವಾಗಿ ಹೇಳಿದ್ದರೂ ವೈದಿಕಕರ್ಮಗಳಲ್ಲಿಯೇ ಜಯಾದಿಗಳನ್ನು ಮಾಡಬೇಕು. 'ಜಯಾದಿ ಪ್ರತಿಪದ್ಯತೇ' ಎಂದು ಗೃಹ್ಯಸೂತ್ರಾದಿಗಳಲ್ಲಿ ಹೇಳಿರುತ್ತಾರೆ. ಅಲ್ಲಿ ಆಹವನೀಯಾಗ್ನಿಯಿಲ್ಲದಿದ್ದರೂ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿಕೊಂಡು ಈ ಹೋಮಗಳನ್ನು ಅನುಷ್ಠಿಸುತ್ತಾರೆ. ಇದು ಇಲ್ಲಿನ ಸಿದ್ಧಾಂತ.



## ॥ ಸಪ್ತಮೋಽನುವಾಕಃ ॥

ಆರನೆಯ ಅನುವಾಕದಲ್ಲಿ ಜಯಾದಿಮಂತ್ರಗಳ ವಿನಿಯೋಗವು ಹೇಳಲ್ಪಟ್ಟಿದೆ. ಈ ಏಳನೆಯ ಅನುವಾಕದಲ್ಲಿ ರಾಷ್ಟ್ರಭೃನ್ಮಂತ್ರಗಳು ಹೇಳಲ್ಪಟ್ಟಿವೆ. ಈ ರಾಷ್ಟ್ರಭೃನ್ಮಂತ್ರಗಳು ಇಪ್ಪತ್ತೆರಡು (22) ಇವೆ. ಈ ಇಪ್ಪತ್ತೆರಡು ಮಂತ್ರಗಳಿಂದ 22 ಆಹುತಿಗಳಾಗುತ್ತವೆ. ಈ ಮಂತ್ರಗಳ ಸಂಖ್ಯೆಯು ಹೀಗೆ ಲಭಿಸುತ್ತದೆ; **'ಋತಾಷಾಟ್....ಊರ್ಜೋ ನಾಮ ಸ ಇದಂ ಬ್ರಹ್ಮ ಕ್ಷತ್ರಂ ಪಾತು ತಾ ಇದಂ ಬ್ರಹ್ಮ ಕ್ಷತ್ರಂ ಪಾಂತು ತಸ್ಮೈ ಸ್ವಾಹಾ ತಾಭ್ಯಃ ಸ್ವಾಹಾ'** ಎಂಬ ಪಾಠವನ್ನು ಒಂದು ಪರ್ಯಾಯವನ್ನಾಗಿ ಪರಿಗಣಿಸಬೇಕು. ಮೇಲಿನ ಮಂತ್ರದ **'ಋತಾಷಾಟ್....ಅಗ್ನಿರ್ಗಂಧರ್ವಃ'** ಎಂಬಲ್ಲಿ **'ಸ ಇದಂ ಬ್ರಹ್ಮ ಕ್ಷತ್ರಂ ಪಾತು ತಸ್ಮೈ ಸ್ವಾಹಾ'** ಎಂದು ಸೇರಿಸಿ ಒಂದು ಆಹುತಿಯನ್ನೂ, **'ತಸ್ಯೌಷಧಯೋಽಪ್ಸರಸ ಊರ್ಜೋ ನಾಮ'** ಎಂಬಲ್ಲಿ **'ತಾ ಇದಂ ಬ್ರಹ್ಮ ಕ್ಷತ್ರಂ ಪಾಂತು ತಾಭ್ಯಃ ಸ್ವಾಹಾ'** ಎಂದು ಸೇರಿಸಿ ಇನ್ನೊಂದು ಆಹುತಿಯನ್ನೂ ಅರ್ಪಿಸಬೇಕು. ಹೀಗೆ ಒಂದು ಪರ್ಯಾಯದಲ್ಲಿ ಎರಡು ಮಂತ್ರಗಳಾಗುತ್ತವೆ. ಎರಡು ಆಹುತಿಗಳಾಗುತ್ತವೆ. ಈ ರೀತಿಯಾಗಿ ೧) ಋತಾಷಾಟ್.... 2)ಸಗ್ಂಹಿತೋ.... 3)ಸುಷುಮ್ನಃ.... 4)ಭುಜ್ಯುಃ ಸುಪರ್ಣಃ.... 5)ಪ್ರಜಾಪತಿಃ.... 6)ಇಷಿರೋ...ಎಂಬ ಆರು ಪರ್ಯಾಯಗಳ ಪಾಠವು ಇದೆ. ಇದರಲ್ಲಿ ಅನುಷಂಗವು ಸೇರಿದಾಗ 12 ಮಂತ್ರಗಳಾಗುತ್ತವೆ.

---

**ಋತಾಷಾಡೃತಧಾಮಾಗ್ನಿರ್ಗಂಧರ್ವಸ್ತಸ್ಯೌಷಧಯೋಽಪ್ಸರಸ**

---

**ಋತಾಷಾಟ್ । ಋತಧಾಮೇತ್ಯೃತ-ಧಾಮಾ । ಅಗ್ನಿಃ । ಗಂಧರ್ವಃ । ತಸ್ಯ । ಓಷಧಯಃ । ಅಪ್ಸರಸಃ ।**

---

| ಮಂತ್ರ | ವಿನಿಯೋಗ |
|---|---|
| **ಋತಾಷಾಟ್...ತಾಭ್ಯಃ ಸ್ವಾಹಾ ॥** | ಪ್ರಥಮ ಪರ್ಯಾಯಹೋಮವನ್ನು ಮಾಡಲು. |

---

**✦ಋತಾಷಾಟ್**=ಸತ್ಯದಿಂದ ಅನೃತವನ್ನು ಸೋಲಿಸುವ; **ಋತಧಾಮಾ**=ಸತ್ಯವೇ/ಯಜ್ಞವೇ ಸ್ಥಾನವಾಗಿರುವ; **ಅಗ್ನಿಃ ಗಂಧರ್ವಃ**=ಅಗ್ನಿಯೆಂಬ ಗಂಧರ್ವನು [ಪ್ರಸಿದ್ಧನಾಗಿದ್ದಾನೆ] **ತಸ್ಯ ಓಷಧಯಃ ಅಪ್ಸರಸಃ**=ಅವನಿಗೆ ಓಷಧಿದೇವತೆಗಳೆಂಬ ಪ್ರಿಯಭಾರ್ಯೆಯರಿದ್ದಾರೆ.

ಇವುಗಳ ಬಳಿಕ 'ಭುವನಸ್ಯ....ಸ್ವಸ್ತಿಮ್' ಎಂಬ ಮಂತ್ರವಿದೆ. 'ಭುವನಸ್ಯ ಪತ ಇತಿ ರಥಮುಖೇ ಪಂಚಾಹುತೀರ್ಜುಹೋತಿ ದಶ ವಾ' [ಆಪ.ಶ್ರೌ.17.19.12.20.1-5] ಎಂದು ವಿಹಿತವಾಗಿರುವ ಮಂತ್ರವು ಪರ್ಯಾಯಗಳಲ್ಲಿ ಏಳನೆಯದು. ಆಹುತಿಯಲ್ಲಿ ಹದಿಮೂರನೆಯದು. ಇದಕ್ಕೆ ಅನುಷಂಗವಿಲ್ಲ.

ಬಳಿಕ (1-7) ಪರಮೇಷ್ಠೀ....(2-8) ಸುಕ್ಷಿತಿಃ...(3-9) ದೂರೇಹೇತಿಃ...(4-10) ಚಾರುಃ... ಎಂಬ ನಾಲ್ಕು ಪರ್ಯಾಯಗಳಿವೆ. ಇಲ್ಲಿ ೩ ಪರ್ಯಾಯಗಳಿಗೆ ಅನುಷಂಗವಿದೆ. ಕಡೆಯ ಪರ್ಯಾಯಕ್ಕೆ ಅನುಷಂಗಾಂಶವು ಶ್ರುತಿಯಲ್ಲಿಯೇ ಪಠಿತವಾಗಿದೆ. ಇಲ್ಲಿಗೆ ಪರ್ಯಾಯಗಳು 11 ಆಗುತ್ತವೆ. ಆಹುತಿಗಳು ಪರ್ಯಾಯಕ್ಕೆ ಎರಡರಂತೆ 21 ಆಗುತ್ತವೆ.

ಕಡೆಯದಾಗಿ 'ಸ ನೋ ಭುವನಸ್ಯ...' ಎಂಬ ಮಂತ್ರವು ಪಠಿತವಾಗಿದೆ. ಇದಕ್ಕೆ ಅನುಷಂಗವಿಲ್ಲ. ಇದು 12ನೆಯ ಪರ್ಯಾಯ. ಇದರ ಆಹುತಿಯು 22ನೆಯದಾಗುತ್ತದೆ.

**ಹೀಗೆ ಇಪ್ಪತ್ತೆರಡು ಆಹುತಿಮಂತ್ರಗಳು ರಾಷ್ಟ್ರಭೃನ್ಮಂತ್ರಗಳು.**

**[12(6)+1+8(4)+1=12+1+8+1=22]**

---

**ಊರ್ಜೋ ನಾಮ ಸ ಇದಂ ಬ್ರಹ್ಮ ಕ್ಷತ್ರಂ ಪಾತು ತಾ ಇದಂ ಬ್ರಹ್ಮ ಕ್ಷತ್ರಂ ಪಾಂತು ತಸ್ಮೈ ಸ್ವಾಹಾ ತಾಭ್ಯಸ್ಸ್ವಾಹಾ**

---

ಊರ್ಜಃ । ನಾಮ । ಸಃ । ಇದಮ್ । ಬ್ರಹ್ಮ । ಕ್ಷತ್ರಮ್ । ಪಾತು । ತಾಃ । ಇದಮ್ । ಬ್ರಹ್ಮ । ಕ್ಷತ್ರಮ್ । ಪಾಂತು । ತಸ್ಮೈ । ಸ್ವಾಹಾ । ತಾಭ್ಯಃ । ಸ್ವಾಹಾ ।

---

ಊರ್ಜಃ ನಾಮ=ಅವರಿಗೆ ಬಲವನ್ನು ವೃದ್ಧಿಗೊಳಿಸುವ/ಊರ್ಜರೆಂಬ ಹೆಸರಿದೆ/ ಪ್ರಸಿದ್ಧಿಯಿದೆ. ಸಃ=ಆ ಅಗ್ನಿಗಂಧರ್ವನು; ಇದಮ್ ಬ್ರಹ್ಮ ಕ್ಷತ್ರಮ್ ಪಾತು=ಈ ಮಹತ್ತಾಗಿರುವ ಫಲವನ್ನು ಕೊಡಲು ಸಮರ್ಥವಾಗಿರುವ ಕರ್ಮವನ್ನು/ಹವಿಸ್ಸನ್ನು ಫಲಪ್ರದವಾಗಿರುವಂತೆ ರಕ್ಷಿಸಲಿ/ಬ್ರಹ್ಮಕ್ಷತ್ರಪುರಸ್ಸರವಾದ ಸ್ಥಾವರಜಂಗಮಾತ್ಮಕವಾದ ವಿಶ್ವವನ್ನು ರಕ್ಷಿಸಲಿ; ತಾಃ ಇದಮ್ ಬ್ರಹ್ಮ ಕ್ಷತ್ರಮ್ ಪಾಂತು=ಆ ಅಪ್ಸರೆಯರು ಈ ಬ್ರಹ್ಮ-ಕ್ಷತ್ರವನ್ನು ಕಾಪಾಡಲಿ. ತಸ್ಮೈ ಸ್ವಾಹಾ=ಆ ಅಗ್ನಿಗಂಧರ್ವನಿಗೆ ಇದು ಹುತವಾಗಲಿ; ತಾಭ್ಯಃ ಸ್ವಾಹಾ=ಆ ಅಪ್ಸರೆಯರಿಗೆ ಇದು ಹುತವಾಗಲಿ.

## ಸಗ್ಂಹಿತೋ ವಿಶ್ವಸಾಮಾ ಸೂರ್ಯೋ ಗಂಧರ್ವಸ್ತಸ್ಯ ಮರೀಚಯೋಽಪ್ಸರಸ ಆಯುವ

---

ಸಗ್ಂಹಿತ ಇತಿ ಸಂ–ಹಿತಃ । ವಿಶ್ವಸಾಮೇತಿ ವಿಶ್ವ–ಸಾಮಾ । ಸೂರ್ಯಃ । ಗಂಧರ್ವಃ । ತಸ್ಯ । ಮರೀಚಯಃ । ಅಪ್ಸರಸಃ । ಆಯುವ ಇತ್ಯಾ–ಯುವಃ ।

---

| ಮಂತ್ರ | ವಿನಿಯೋಗ |
|---|---|
| ಸಗ್ಂಹಿತೋ...ಆಯುವಃ..ಸ್ವಾಹಾ ॥ | ಅನುಷಂಗದಿಂದ ಕೂಡಿದ ದ್ವಿತೀಯ ಪರ್ಯಾಯಹೋಮವನ್ನು ಅನುಷ್ಠಿಸಲು. |

---

✦ಸಗ್ಂಹಿತಃ=ಎಲ್ಲವನ್ನೂ ಒಂದುಗೂಡಿಸುವ; ವಿಶ್ವಸಾಮಾ=ಎಲ್ಲವನ್ನೂ ಮುಗಿಸುವ; ಸೂರ್ಯಃ ಗಂಧರ್ವಃ=ಸೂರ್ಯನೆಂಬ ಗಂಧರ್ವನು [ಪ್ರಸಿದ್ಧನಾಗಿದ್ದಾನೆ] ತಸ್ಯ ಮರೀಚಯಃ ಅಪ್ಸರಸಃ=[ಅಹೋರಾತ್ರಪ್ರವರ್ತಕನಾದ] ಸೂರ್ಯಗಂಧರ್ವನಿಗೆ ಮರೀಚಿಗಳೆಂಬ ಪ್ರಿಯಭಾರ್ಯೆಯರಿರುತ್ತಾರೆ; ಆಯುವಃ [ನಾಮ]=[ಅವರು ಬೇಗನೆ ಬರುವುದರಿಂದ ಆಯುಗಳೆಂದು ಪ್ರಸಿದ್ಧರಾಗಿರುತ್ತಾರೆ. [ಸ ಇದಂ....ತಾಭ್ಯಃ ಸ್ವಾಹಾ=ಅವನೂ ಅವರು ಬ್ರಹ್ಮಕ್ಷತ್ರಾದಿಗಳನ್ನು ಸಂರಕ್ಷಿಸಲಿ. ಅವನಿಗೂ, ಅವರಿಗೂ ಈ ಹವಿಸ್ಸು ಹುತವಾಗಲಿ.]

---

ಪ್ರಥಮಪರ್ಯಾಯದಲ್ಲಿ ಶಕ್ತಿಯನ್ನು ವೃದ್ಧಿಗೊಳಿಸುವ ಓಷಧಿಗಳಿಗೆ ಅಗ್ನಿಯನ್ನು ಒಡೆಯನೆಂಬುದಾಗಿ ಸ್ತುತಿಸಲಾಗಿದೆ. ಸೂರ್ಯನೆಂಬ ಗಂಧರ್ವನಿಗೆ ಮರೀಚಿಗಳೇ ಭಾರ್ಯೆಯರು. ಸೂರ್ಯನಿಂದ ಅಹೋರಾತ್ರಗಳಾಗುತ್ತವೆ. ಅವನೂ ಮತ್ತು ಅವರು ಬ್ರಹ್ಮಾದಿಗಳನ್ನು ರಕ್ಷಿಸಲಿ. ಚಂದ್ರನ ಪ್ರಕಾಶವು ಸೂರ್ಯನಿಂದಲೇ ಬಂದಿರುವುದೆಂಬುದು ಪ್ರಸಿದ್ಧವಾಗಿದೆ. ಅವನ ಅಪ್ಸರೆಯರಂತಿರುವ ನಕ್ಷತ್ರಗಳೂ, ಚಂದ್ರನೂ ಈ ಬ್ರಹ್ಮ–ಕ್ಷತ್ರಾದಿಗಳನ್ನು ಕಾಪಾಡಲಿ.

ಸ್ಸುಷುಮ್ನಸ್ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವಸ್ತಸ್ಯ
ನಕ್ಷತ್ರಾಣ್ಯಪ್ಸರಸೋ ಬೇಕುರಯೋ ಭುಜ್ಯುಸ್ಸುಪರ್ಣೋ
ಯಜ್ಞೋ ಗಂಧರ್ವಸ್ತಸ್ಯ ದಕ್ಷಿಣಾ ಅಪ್ಸರಸಸ್ಸ್ತವಾಃ

---

ಸುಷುಮ್ನ ಇತಿ ಸು–ಸುಮ್ನಃ । ಸೂರ್ಯರಶ್ಮಿರಿತಿ ಸೂರ್ಯ–ರಶ್ಮಿಃ । ಚಂದ್ರಮಾಃ । ಗಂಧರ್ವಃ । ತಸ್ಯ । ನಕ್ಷತ್ರಾಣಿ । ಅಪ್ಸರಸಃ । ಬೇಕುರಯಃ । ಭುಜ್ಯುಃ । ಸುಪರ್ಣ ಇತಿ ಸು–ಪರ್ಣಃ । ಯಜ್ಞಃ । ಗಂಧರ್ವಃ । ತಸ್ಯ । ದಕ್ಷಿಣಾಃ । ಅಪ್ಸರಸಃ । ಸ್ತವಾಃ ।

---

**ಸುಷುಮ್ನಃ...ಬೇಕುರಯಃ..ಸ್ವಾಹಾ॥** ಅನುಷಂಗದಿಂದ ಕೂಡಿದ ತೃತೀಯ ಪರ್ಯಾಯಹೋಮವನ್ನು ಮಾಡಲು.

**ಭುಜ್ಯುಃ...ಸ್ತವಾಃ..ಸ್ವಾಹಾ॥** ಅನುಷಂಗದಿಂದ ಕೂಡಿದ ಚತುರ್ಥ ಪರ್ಯಾಯಹೋಮವನ್ನು ಮಾಡಲು.

---

✦**ಸುಷುಮ್ನಃ**=[ಅಮೃತಾತ್ಮಕನಾಗಿ] ದೇವ–ಪಿತೃ–ಮನುಷ್ಯರಿಗೆ ಸುಖವನ್ನುಂಟು ಮಾಡುವ; **ಸೂರ್ಯರಶ್ಮಿಃ**=ಸೂರ್ಯನ ಕಿರಣಗಳಿಂದ ಪ್ರಕಾಶಿಸುವ; **ಚಂದ್ರಮಾಃ ಗಂಧರ್ವಃ**=ಚಂದ್ರನೆಂಬ ಗಂಧರ್ವನು [ಪ್ರಸಿದ್ಧನಾಗಿದ್ದಾನೆ] **ತಸ್ಯ ನಕ್ಷತ್ರಾಣಿ ಅಪ್ಸರಸಃ**=ಅವನಿಗೆ ನಕ್ಷತ್ರರೂಪರಾದ ಭಾರ್ಯೆಯರು ಇರುತ್ತಾರೆ. **ಬೇಕುರಯಃ** [ನಾಮ]=ಮೋಹಕರಾಗಿರುವುದರಿಂದ ಬೇಕುರಿಗಳೆಂದು ಪ್ರಸಿದ್ಧರಾಗಿರುತ್ತಾರೆ. [ಸಃ...ಸ್ವಾಹಾ=ಅವರು ಬ್ರಹ್ಮಕ್ಷತ್ರಾದಿ...ಹುತವಾಗಲಿ.]✦**ಭುಜ್ಯುಃ ಸುಪರ್ಣಃ**=ವಿಶ್ವ ಪಾಲಕನಾಗಿರುವ ಗರುಡನಂತೆ ಹಾರಾಡುವ/ಸ್ವರ್ಗದಲ್ಲಿಯೂ ಫಲವನ್ನು ಕೊಡುವ; **ಯಜ್ಞಃ ಗಂಧರ್ವಃ**=ಯಜ್ಞನೆಂದು ಪ್ರಸಿದ್ಧನಾದ ಗಂಧರ್ವನಿದ್ದಾನೆ; **ತಸ್ಯ ದಕ್ಷಿಣಾ ಅಪ್ಸರಸಃ**=ಅವನಿಗೆ ವೃದ್ಧಿಗೊಳಿಸುವ ದಕ್ಷಿಣೆಯೆಂಬ ಪ್ರಿಯಪತ್ನಿಯರಿರುತ್ತಾರೆ. ಸ್ತವಾಃ ನಾಮ=[ಅವರು ಹೊಗಳಲ್ಪಡುವುದರಿಂದ] ಸ್ತವೆಯರೆಂದು ಪ್ರಸಿದ್ಧರು. [ಸಃ...ಸ್ವಾಹಾ=ಅವರು ಬ್ರಹ್ಮಕ್ಷತ್ರಾದಿ...ಹುತವಾಗಲಿ.]

# ಪ್ರಜಾಪತಿರ್ವಿಶ್ವಕರ್ಮಾ ಮನೋ [ ಮನಃ(೧೯) ಗಂಧರ್ವಃ]ಗಂಧರ್ವಸ್ತಸ್ಯರ್ಕ್ಸಾಮಾನ್ಯಪ್ಸರಸೋ ವಹ್ನಯ

ಪ್ರಜಾಪತಿರಿತಿ ಪ್ರಜಾ-ಪತಿಃ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ಮನಃ ।(೧೯)। ಗಂಧರ್ವಃ । ತಸ್ಯ । ಋಕ್ಸಾಮಾನೀತ್ಯೃಕ್-ಸಾಮಾನಿ । ಅಪ್ಸರಸಃ । ವಹ್ನಯಃ ।

| ಮಂತ್ರ | ವಿನಿಯೋಗ |
| --- | --- |
| ಪ್ರಜಾಪತಿಃ...ವಹ್ನಯಃ..ಸ್ವಾಹಾ ॥ | ಅನುಷಂಗದಿಂದ ಕೂಡಿದ ಐದನೆಯ ಪರ್ಯಾಯಹೋಮಕ್ಕಾಗಿ. |

✦ಪ್ರಜಾಪತಿಃ ವಿಶ್ವಕರ್ಮಾ=ಪ್ರಜಾಪಾಲಕನಾದ, ವಿಶ್ವಸ್ರಷ್ಟನಾದ; ಮನಃ ಗಂಧರ್ವಃ=ಮನಃಸ್ವರೂಪನಾದ ಬ್ರಹ್ಮನೆಂಬ ಗಂಧರ್ವನು ಪ್ರಸಿದ್ಧನಾಗಿದ್ದಾನೆ; ತಸ್ಯ ಋಕ್ಸಾಮಾನಿ ಅಪ್ಸರಸಃ=ಅವನಿಗೆ ಯಾಗನಿರ್ವಾಹಕರಾದ ಋಕ್ಸಾಮಗಳೆಂಬ ಪ್ರಿಯಪತ್ನಿಯರಿದ್ದಾರೆ. ವಹ್ನಯಃ ನಾಮ=[ಅವರು ಸೌಂದರ್ಯವನ್ನು ವಹಿಸುವುದರಿಂದ] ವಹ್ನಿಯರೆಂದು ಪ್ರಸಿದ್ಧರು; [ಸಃ...ಸ್ವಾಹಾ =ಅವರು ಬ್ರಹ್ಮಕ್ಷತ್ರಾದಿ...ಹುತವಾಗಲಿ.]

ಯಜ್ಞನೆಂಬ ಗಂಧರ್ವನಿಗೆ *ದಕ್ಷಿಣೆಯೆಂಬ ಭಾರ್ಯೆಯರು. ಯಜ್ಞವು ವೃಷ್ಟಿಗೆ ಕಾರಣವಾದುದರಿಂದ ಅದು ಲೋಕರಕ್ಷಕವಾಗಿದೆ. **'ಯಜ್ಞಾದ್ಭವತಿ ಪರ್ಜನ್ಯಃ'** ಎಂಬ ವಚನವಿದೆಯಷ್ಟೆ.

ಪ್ರಜಾಪತಿಬ್ರಹ್ಮನು ಮನಸ್ಸಿನಿಂದಲೇ ವಿಶ್ವವನ್ನು ಸೃಷ್ಟಿಸುವುದರಿಂದ ಅವನು ಮನಃಸ್ವರೂಪನಾಗಿರುತ್ತಾನೆ. ಅವನ ಸೃಷ್ಟಿಕಾರ್ಯದಲ್ಲಿ ಋಕ್ಸಾಮದೇವತೆಗಳು ಸಹಾಯಕರು. ಅವನೂ, ಆ ದೇವತೆಗಳೂ ಈ ಬ್ರಹ್ಮಾದಿಗಳನ್ನು ಕಾಪಾಡಲಿ.

*ಪತ್ನೀ ಸುದಕ್ಷಿಣೇತ್ಯಾಸೀದಧ್ವರಸ್ಯೇವ ದಕ್ಷಿಣಾ ॥ ಮಹಾಕವಿಕಾಳಿದಾಸನ ರಘುವಂಶ ಮಹಾಕಾವ್ಯ. (1-31)

ಇಷಿರೋ ವಿಶ್ವವ್ಯಚಾ ವಾತೋ ಗಂಧರ್ವಸ್ತಸ್ಯಾಪೋಽಪ್ಸ
ರಸೋ ಮುದಾ ಭುವನಸ್ಯ ಪತೇ ಯಸ್ಯ ತ ಉಪರಿ
ಗೃಹಾ ಇಹ ಚ ।

---

ಇಷಿರಃ । ವಿಶ್ವವ್ಯಚಾ ಇತಿ ವಿಶ್ವ–ವ್ಯಚಾಃ । ವಾತಃ । ಗಂಧರ್ವಃ । ತಸ್ಯ । ಆಪಃ ।
ಅಪ್ಸರಸಃ । ಮುದಾಃ । ಭುವನಸ್ಯ । ಪತೇ । ಯಸ್ಯ । ತೇ । ಉಪರಿ । ಗೃಹಾಃ । ಇಹ । ಚ ॥

---

| ಮಂತ್ರ | ವಿನಿಯೋಗ |
|---|---|
| ಇಷಿರೋ...ಮುದಾ...ಸ್ವಾಹಾ ॥ | ಅನುಷಂಗದಿಂದ ಕೂಡಿದ ಆರನೆಯ ಪರ್ಯಾಯ ಹೋಮವನ್ನು ಮಾಡಲು. |
| ಭುವನಸ್ಯ...ಸ್ವಸ್ತಿಮ್ ॥ | ಏಳನೆಯ ಪರ್ಯಾಯದ ಹೋಮಕ್ಕಾಗಿ. |

---

+ಇಷಿರಃ=ಅಪೇಕ್ಷಿತವಸ್ತುಗಳಲ್ಲಿರುವ; ವಿಶ್ವವ್ಯಚಾಃ=ಸಮಗ್ರ ವಿಶ್ವದಲ್ಲಿ ಸಂಚರಿಸುವ; ವಾತಃ ಗಂಧರ್ವಃ=ವಾತದೇವನೆಂಬ ಗಂಧರ್ವನು ಪ್ರಸಿದ್ಧನು. ತಸ್ಯ ಆಪಃ ಅಪ್ಸರಸಃ=ಅವನಿಗೆ ಅಬ್ದೇವತೆಗಳು ಪ್ರಿಯಪತ್ನಿಯರು. ಮುದಾಃ [ನಾಮ]= [ಸಂತೋಷಪಡಿಸುವುದರಿಂದ ಅವರು] ಮುದಾ ಎಂದು ಪ್ರಸಿದ್ಧರು. [ಸಃ...ಸ್ವಾಹಾ= ಅವರು ಬ್ರಹ್ಮಕ್ಷತ್ರಾದಿ...ಹುತವಾಗಲಿ.] +ಭುವನಸ್ಯ ಪತೇ=ಲೋಕಕ್ಕೆ ಅಧಿಪತಿಯಾದ ಪ್ರಜಾಪತಿಯೇ! ಯಸ್ಯ ತೇ=ಯಾವ ನಿನಗೆ; ಉಪರಿ= ಮೇಲಿನ ದ್ಯುಲೋಕ–ಅಂತರಿಕ್ಷಗಳಲ್ಲಿಯೂ; ಇಹ ಚ=ಈ ಭೂಲೋಕದಲ್ಲಿಯೂ; ಗೃಹಾಃ=ವಾಸಸ್ಥಾನಗಳಿವೆಯೋ/ತ್ರಿಲೋಕವಾಸಿಗಳೂ ನಿನ್ನವರೇ ಆಗಿರುತ್ತಾರೆಯೋ;

---

ವಾತದೇವನೆಂಬ ಗಂಧರ್ವನಿಗೆ ಸಂತೋಷಪಡಿಸುವುದರಿಂದಲೇ 'ಮುದಾ' ಎಂಬ ಹೆಸರಿನ ಅಬ್ದೇವತೆಯರು ಪ್ರಿಯಪತ್ನಿಯರು. ಅವರೂ ಈ ಬ್ರಹ್ಮಾದಿಗಳನ್ನು ರಕ್ಷಿಸಲಿ.

ಸ ನೋ ರಾಸ್ವಾಜ್ಯಾನಿಗ್ಂ ರಾಯಸ್ಪೋಷಗ್ಂ ಸುವೀರ್ಯಗ್ಂ ಸಂವತ್ಸರೀಣಾಗ್ಂ ಸ್ವಸ್ತಿಮ್ । ಪರಮೇಷ್ಠ್ಯಧಿಪತಿರ್ಮೃತ್ಯು ರ್ಗಂಧರ್ವಸ್ತಸ್ಯ ವಿಶ್ವಮಪ್ಸರಸೋ ಭುವ–

---

ಸಃ । ನಃ । ರಾಸ್ವ । ಅಜ್ಯಾನಿಮ್ । ರಾಯಃ । ಪೋಷಮ್ । ಸುವೀರ್ಯಮಿತಿ ಸು–ವೀರ್ಯಮ್ । ಸಂವತ್ಸರೀಣಾಮಿತಿ ಸಂ–ವತ್ಸರೀಣಾಮ್ । ಸ್ವಸ್ತಿಮ್ ॥ ಪರಮೇಷ್ಠೀ । ಅಧಿಪತಿರಿತ್ಯಧಿ–ಪತಿಃ ॥ ಮೃತ್ಯುಃ । ಗಂಧರ್ವಃ । ತಸ್ಯ । ವಿಶ್ವಮ್ । ಅಪ್ಸರಸಃ । ಭುವಃ ।

---

| ಮಂತ್ರ | ವಿನಿಯೋಗ |
|---|---|
| ಪರಮೇಷ್ಠೀ...ಭುವಃ...ಸ್ವಾಹಾ ॥ | ರಾಷ್ಟ್ರಭೃನ್ಮಂತ್ರಗಳ ಅನುಷಂಗಸಹಿತವಾದ ಉತ್ತರಪಂಚಕದ ಪ್ರಥಮಪರ್ಯಾಯದ ಹೋಮಕ್ಕಾಗಿ [ಮೊದಲಿನಿಂದ ಎಂಟನೆಯ ಪರ್ಯಾಯ, ಹದಿನಾಲ್ಕು ಮತ್ತು ಹದಿನೈದ ನೆಯ ಆಹುತಿ] |

---

✦ಸಃ=ಅಂತಹ ನೀನು; ನಃ=ನಮಗೆ; ಅಜ್ಯಾನಿಮ್=ಹಾನಿಯಿಲ್ಲದಿರುವಿಕೆಯನ್ನು; ರಾಸ್ವ=ಕೊಡು; ರಾಯಃ ಪೋಷಮ್=ಧನಪುಷ್ಟಿಯನ್ನೂ; ಸುವೀರ್ಯಮ್=ಒಳ್ಳೆಯ ಪುತ್ರರಿರುವಿಕೆಯನ್ನೂ; ಸಂವತ್ಸರೀಣಾಮ್ ಸ್ವಸ್ತಿಮ್=ಹಲವು ವರ್ಷಗಳ ಪರ್ಯಂತ ಸುಖವಾಗಿರುವಂತಹ ಸಮೃದ್ಧಿಯನ್ನೂ; ರಾಸ್ವ=ಕೊಡು. ✦ಪರಮೇಷ್ಠೀ=ಉತ್ತಮಸ್ಥಾನದಲ್ಲಿರುವ; ಅಧಿಪತಿಃ=ಸರ್ವಪಾಲಕನಾದ; ಮೃತ್ಯುಃ ಗಂಧರ್ವಃ=ಮೃತ್ಯುವೆಂಬ ಗಂಧರ್ವನಿದ್ದಾನೆ; ತಸ್ಯ ವಿಶ್ವಮ್ ಅಪ್ಸರಸಃ=ಅವನಿಗೆ ವಿಶ್ವಾಭಿಮಾನಿದೇವತೆಗಳು ಪ್ರಿಯಭಾರ್ಯೆಯರಿರುತ್ತಾರೆ; ಭುವಃ ನಾಮ=[ಅವರು ಯಾವಾಗಲೂ ಇರುವುದರಿಂದ 'ಭುವಃ' ಎಂದು ಪ್ರಸಿದ್ಧರಾಗಿರುತ್ತಾರೆ; [ಸಃ...ಸ್ವಾಹಾ =ಅವರು ಬ್ರಹ್ಮಕ್ಷತ್ರಾದಿ...ಹುತವಾಗಲಿ.]

# ಸ್ಸುಕ್ಷಿತಿಸ್ಸುಭೂತಿರ್ಭದ್ರಕೃಥ್ಸುವರ್ವಾನ್ಪರ್ಜನ್ಯೋ ಗಂಧರ್ವಸ್ತಸ್ಯ ವಿದ್ಯುತೋಽಪ್ಸರಸೋ ರುಚೋ

---

ಸುಕ್ಷಿತಿರಿತಿ ಸು-ಕ್ಷಿತಿಃ । ಸುಭೂತಿರಿತಿ ಸು-ಭೂತಿಃ । ಭದ್ರಕೃದಿತಿ ಭದ್ರ-ಕೃತ್ । ಸುವರ್ವಾನಿತಿ ಸುವಃ-ವಾನ್ । ಪರ್ಜನ್ಯಃ । ಗಂಧರ್ವಃ । ತಸ್ಯ । ವಿದ್ಯುತ ಇತಿ ವಿ-ದ್ಯುತಃ । ಅಪ್ಸರಸಃ । ರುಚಃ ।

---

| ಮಂತ್ರ | ವಿನಿಯೋಗ |
|---|---|
| ಸುಕ್ಷಿತಿಃ...ರುಚಃ...ಸ್ವಾಹಾ ॥ | ಉತ್ತರಪಂಚಕದಲ್ಲಿ ಸಾನುಷಂಗದ್ವಿತೀಯ ಪರ್ಯಾಯದ ಹೋಮಕ್ಕಾಗಿ [ಮೊದಲಿನಿಂದ ಒಂಬತ್ತನೆ ಪರ್ಯಾಯ ಹದಿನಾರು ಮತ್ತು ಹದಿನೇಳನೆಯ ಆಹುತಿ. |



---

✦ಸುಕ್ಷಿತಿಃ=ಒಳ್ಳೆಯ ವಾಸಸ್ಥಾನವುಳ್ಳ; ಸುಭೂತಿಃ=ಒಳ್ಳೆಯ ಐಶ್ವರ್ಯವುಳ್ಳ; ಭದ್ರಕೃತ್=ಎಲ್ಲರಿಗೂ ಮಂಗಳವನ್ನುಂಟುಮಾಡುವ; ಸುವರ್ವಾನ್=ಸ್ವರ್ಗ ಲೋಕವನ್ನು ಹೊಂದಿರುವ/ಕೊಡಬಲ್ಲ; ಪರ್ಜನ್ಯಃ ಗಂಧರ್ವಃ=ಪರ್ಜನ್ಯವೆಂಬ ಗಂಧರ್ವನು [ಪ್ರಸಿದ್ಧನಾಗಿರುತ್ತಾನೆ] ತಸ್ಯ ವಿದ್ಯುತಃ ಅಪ್ಸರಸಃ=ಅವನಿಗೆ ಮಿಂಚುಗಳೆಂಬ ಪ್ರಿಯಭಾರ್ಯೆಯರಿರುತ್ತಾರೆ. ರುಚಃ ನಾಮ=[ಅವರು ಹೊಳೆಯುವುದರಿಂದ] 'ರುಚಃ' ಎಂದು ಪ್ರಸಿದ್ಧರಾಗಿರುತ್ತಾರೆ. [ಸಃ...ಸ್ವಾಹಾ=ಅವರು ಬ್ರಹ್ಮಕ್ಷತ್ರಾದಿ... ಹುತವಾಗಲಿ.]

---

ಲೋಕಕ್ಕೆ ಅಧಿಪತಿಯಾದ ಪ್ರಜಾಪತಿಯೇ! ನೀನು ಧನಪುಷ್ಟಿಯನ್ನೂ, ಸತ್ಪುತ್ರರಿರುವಿಕೆಯನ್ನೂ, ಸಮೃದ್ಧಿಯನ್ನೂ ನೀಡು. ಇದು ಏಳನೆಯ ರಾಷ್ಟ್ರಭೃನ್ಮಂತ್ರ. ಹದಿಮೂರನೆಯ ಹೋಮವಾಗಿದೆ.

# ದೂರೇಹೇತಿರಮೃಡಯೋ[..ಮೃಡಯಃ(೨೦)]ಮೃತ್ಯು ರ್ಗಂಧರ್ವಸ್ತಸ್ಯ ಪ್ರಜಾ ಅಪ್ಸರಸೋ ಭೀರುವ

---

ದೂರೇಹೇತಿರಿತಿ ದೂರೇ-ಹೇತಿಃ । ಅಮೃಡಯಃ ।(೨೦)। ಮೃತ್ಯುಃ । ಗಂಧರ್ವಃ । ತಸ್ಯ । ಪ್ರಜಾ ಇತಿ ಪ್ರ-ಜಾಃ । ಅಪ್ಸರಸಃ । ಭೀರುವಃ ।

---

| ಮಂತ್ರ | ವಿನಿಯೋಗ |
| --- | --- |
| ದೂರೇಹೇತಿ...ಭೀರುವ...ಸ್ವಾಹಾ॥ | ಉತ್ತರಪಂಚಕದಲ್ಲಿ ಸಾನುಷಂಗತೃತೀಯ ಪರ್ಯಾಯದ ಹೋಮಕ್ಕಾಗಿ [ಮೊದಲಿನಿಂದ ಹತ್ತನೆಯ ಪರ್ಯಾಯ ಹದಿನೆಂಟು ಮತ್ತು ಹತ್ತೊಂಬತ್ತನೆಯ ಆಹುತಿ] |

---

✦ದೂರೇಹೇತಿಃ=ದೂರದಲ್ಲಿದ್ದರೂ ಪ್ರಹರಿಸಬಲ್ಲ ಆಯುಧವುಳ್ಳ; ಅಮೃಡಯಃ= ಕೇಳಿದೊಡನೆಯೇ ದುಃಖವನ್ನು ಕೊಡುವ; ಮೃತ್ಯುಃ ಗಂಧರ್ವಃ=ಮೃತ್ಯುನಾಮಕ [ಮರಣವನ್ನುಂಟುಮಾಡುವ] ಗಂಧರ್ವನು ಪ್ರಸಿದ್ಧನು; ತಸ್ಯ ಪ್ರಜಾ ಅಪ್ಸರಸಃ =ಅವನಿಗೆ ಪ್ರಜಾಭಿಮಾನಿದೇವತೆಗಳು ಪ್ರಿಯಭಾರ್ಯೆಯರು; ಭೀರುವಃ ನಾಮ= [ಅವರು ಭಯಪಡುವ ಸ್ವಭಾವವುಳ್ಳವರಾದುದರಿಂದ 'ಭೀರು' ಎಂದು ಪ್ರಸಿದ್ಧರಾಗಿ ದ್ದಾರೆ. [ಸಃ...ಸ್ವಾಹಾ=ಅವರು ಬ್ರಹ್ಮಕ್ಷತ್ರಾದಿ... ಹುತವಾಗಲಿ.]

---

ಮೃತ್ಯು ಗಂಧರ್ವನಿಗೆ ಭುವರೆಂಬ ಹೆಸರಿನವರು ಪ್ರಿಯಭಾರ್ಯೆಯರು. ಅವನೂ ಅವರೂ ಯಜಮಾನನನ್ನು ಕಾಯಲಿ.

ಪರ್ಜನ್ಯನೆಂಬ ಗಂಧರ್ವನಿಗೆ ಮಿಂಚುಗಳೆಂಬ ಭಾರ್ಯೆಯರು. ಅವರೂ ಯಜಮಾನನನ್ನು ರಕ್ಷಿಸಲಿ.

ಮೃತ್ಯುವೆಂಬ ಗಂಧರ್ವನಿಗೆ ಪ್ರಜಾಭಿಮಾನಿದೇವತೆಗಳು ಪ್ರಿಯಭಾರ್ಯೆಯರು. ಅವರು 'ಭೀರು' ಗಳೆಂಬ ಹೆಸರುಳ್ಳವರು. ಮೃತ್ಯುವು ದೂರದಲ್ಲಿ ಪ್ರಹರಿಸಬಲ್ಲ ಆಯುಧ

-ಶ್ಚಾರುಃ ಕೃಪಣಕಾಶೀ ಕಾಮೋ

ಗಂಧರ್ವಸ್ತಸ್ಯಾಧಯೋಽಪ್ಸರಸ ಶ್ಶೋಚಯಂತೀರ್ನಾಮ ಸ

ಇದಂ ಬ್ರಹ್ಮ ಕ್ಷತ್ರಂ ಪಾತು

---

ಚಾರುಃ । ಕೃಪಣಕಾಶೀತಿ ಕೃಪಣ-ಕಾಶೀ । ಕಾಮಃ । ಗಂಧರ್ವಃ । ತಸ್ಯ । ಆಧಯ ಇತ್ಯಾ-ಧಯಃ । ಅಪ್ಸರಸಃ । ಶೋಚಯಂತೀಃ । ನಾಮ । ಸಃ । ಇದಮ್ । ಬ್ರಹ್ಮ । ಕ್ಷತ್ರಮ್ । ಪಾತು ।

---

| ಮಂತ್ರ | ವಿನಿಯೋಗ |
|---|---|
| ಚಾರುಃ...ಸ್ವಾಹಾ ॥ | ಉತ್ತರಪಂಚಕದಲ್ಲಿ ಚತುರ್ಥಪರ್ಯಾಯದ ಹೋಮಕ್ಕಾಗಿ [ಮೊದಲಿನಿಂದ ಹನ್ನೊಂದನೆಯ ಪರ್ಯಾಯ-ಇಪ್ಪತ್ತು ಹಾಗೂ ಇಪ್ಪತ್ತೊಂದನೆಯ ಆಹುತಿ] |

---

✦ಚಾರುಃ=ಮನೋಹರವಾದ ಆಚರಣೆಯುಳ್ಳ ಅಥವಾ ಸುಂದರವಾದ ರೂಪವುಳ್ಳ; ಕೃಪಣಕಾಶೀ=ಉತ್ತಮವಲ್ಲದ ಇಂದ್ರಿಯಸುಖಗಳಲ್ಲಿ ಮನಸ್ಸನ್ನು ತೊಡಗಿಸುವ; ಕಾಮಃ ಗಂಧರ್ವಃ=ಕಾಮನೆಂಬ ಗಂಧರ್ವನು. ತಸ್ಯ=ಅವನಿಗೆ; ಆಧಯಃ ಅಪ್ಸರಸಃ=[ಮನೋವ್ಯಥೆಯನ್ನುಂಟುಮಾಡುವ] ಆಧಿಗಳೆಂಬ ಪ್ರಿಯಭಾರ್ಯೆಯರು ಇರುತ್ತಾರೆ. ಶೋಚಯಂತೀಃ ನಾಮ=[ಆ ಅಪ್ಸರೆಯರು] ಶೋಕವನ್ನುಂಟು ಮಾಡುವುದರಿಂದ 'ಶೋಚಯಂತಿ'ಯರೆಂದು ಪ್ರಸಿದ್ಧರು. ಸಃ ಇದಮ್ ಬ್ರಹ್ಮ ಕ್ಷತ್ರಮ್ ಪಾತು=ಆ ಗಂಧರ್ವನು ಯಜಮಾನನ ಬ್ರಹ್ಮಕ್ಷತ್ರಾದಿಗಳೆಲ್ಲವನ್ನೂ/ ಜಗತ್ತೆಲ್ಲವನ್ನೂ ಕಾಪಾಡಲಿ.

ತಾ ಇದಂ ಬ್ರಹ್ಮ ಕ್ಷತ್ರಂ ಪಾಂತು ತಸ್ಮೈ ಸ್ವಾಹಾ ತಾಭ್ಯ ಸ್ಸ್ವಾಹಾ ಸ ನೋ ಭುವನಸ್ಯ ಪತೇ ಯಸ್ಯ ತ ಉಪರಿ ಗೃಹಾ ಇಹ ಚ ।

---

ತಾಃ । ಇದಮ್ । ಬ್ರಹ್ಮ । ಕ್ಷತ್ರಮ್ । ಪಾಂತು । ತಸ್ಮೈ । ಸ್ವಾಹಾ । ತಾಭ್ಯಃ । ಸ್ವಾಹಾ । ಸಃ । ನಃ । ಭುವನಸ್ಯ । ಪತೇ । ಯಸ್ಯ । ತೇ । ಉಪರಿ । ಗೃಹಾಃ । ಇಹ । ಚ ॥

---

| ಮಂತ್ರ | ವಿನಿಯೋಗ |
|---|---|
| ಸ ನೋ...ಯಚ್ಛ ॥ | ಉತ್ತರಪಂಚಕದಲ್ಲಿ ಪಂಚಮಪರ್ಯಾಯದ ಹೋಮಕ್ಕಾಗಿ [ಮೊದಲಿನಿಂದ ಹನ್ನೆರಡನೆಯ ಪರ್ಯಾಯ-ಇಪ್ಪತ್ತೆರಡನೆಯ ರಾಷ್ಟ್ರಭೃನ್ಮಂತ್ರ-ಆಹುತಿಯಲ್ಲಿ ವಿನಿಯೋಗ] |

---

ತಾಃ ಇದಮ್ ಬ್ರಹ್ಮ ಕ್ಷತ್ರಮ್ ಪಾಂತು=ಆ ಅಪ್ಸರೆಯರು ಯಜಮಾನನ ಈ ಬ್ರಹ್ಮ-ಕ್ಷತ್ರಗಳನ್ನು ಪಾಲಿಸಲಿ. ತಸ್ಮೈ ಸ್ವಾಹಾ=ಆ ಗಂಧರ್ವನಿಗೆ ಇದು ಹುತವಾಗಲಿ; ತಾಭ್ಯಃ ಸ್ವಾಹಾ=ಆ ಅಪ್ಸರೆಯರಿಗೆ ಈ ಆಜ್ಯಾಹುತಿಯು ಹುತವಾಗಲಿ; +ಭುವನಸ್ಯ ಪತೇ=ವಿಶ್ವಪಾಲಕನಾದ ಪ್ರಜಾಪತಿಯೇ! ಯಸ್ಯ ತೇ ಉಪರಿ ಗೃಹಾಃ ಇಹ ಚ=ಯಾವ ನಿನಗೆ ದ್ಯುಲೋಕ-ಅಂತರಿಕ್ಷಗಳಲ್ಲಿಯೂ ಈ ಭೂಲೋಕದಲ್ಲಿಯೂ ವಾಸಸ್ಥಾನಗಳಿವೆಯೋ;

---

ವುಳ್ಳವನು. ಕೇಳಿದೊಡನೆಯೇ ದುಃಖವನ್ನೀಯುವವನು. ಮೃತ್ಯುವು ಎಷ್ಟು ದೂರದಲ್ಲಿದ್ದರೂ ಜನರನ್ನು ಹಿಡಿಯಬಲ್ಲನು. ಇದರಿಂದ ಪ್ರಜೆಗಳು ಮೃತ್ಯುವಿಗೆ ಹೆದರುವುದು ಸ್ವಾಭಾವಿಕವೇ ಆಗಿದೆ. ಅವನೂ ಆ ಭಾರ್ಯೆಯರೂ ಯಜಮಾನನನ್ನು ರಕ್ಷಿಸಲಿ.

ಉರು ಬ್ರಹ್ಮಣೇಽಸ್ಮೈ ಕ್ಷತ್ತ್ರಾಯ ಮಹಿ

ಶರ್ಮ ಯಚ್ಛ ॥೨೧-7॥

[ಮನೋಽಮೃಡಯಷ್ಟಚ್ಚತ್ವಾರಿಗ್ಂಶಚ್ಚ ॥]

---

ಉರು । ಬ್ರಹ್ಮಣೇ । ಅಸ್ಮೈ । ಕ್ಷತ್ತ್ರಾಯ । ಮಹಿ । ಶರ್ಮ । ಯಚ್ಛ ॥೨೧॥

---

ಸಃ=ಅಂತಹ ನೀನು; ನಃ=ನಮಗೆ; ಉರು ಶರ್ಮ ಯಚ್ಛ=ಹೆಚ್ಚಾದ ಸುಖವನ್ನು ಕೊಡು; ಅಸ್ಮೈ ಬ್ರಹ್ಮಣೇ ಕ್ಷತ್ತ್ರಾಯ=ಈ ಬ್ರಾಹ್ಮಣ-ಕ್ಷತ್ರಿಯಜಾತಿಯವರಿಗೂ; ಮಹಿ=ಮಹತ್ತಾದ; ಶರ್ಮ ಯಚ್ಛ=ಸುಖವನ್ನು ಕೊಡು.

---

ಕಾಮನೆಂಬ ಗಂಧರ್ವನಿಗೆ ಆಧಿಯೆಂಬ ಪ್ರಿಯಭಾರ್ಯೆಯರು. ಆ ಗಂಧರ್ವನು ಕೃಪಣಕಾಶಿಯಾಗಿರುವನು. ಉತ್ತಮವಲ್ಲದ ಇಂದ್ರಿಯಸುಖಗಳಲ್ಲಿ ತೊಡಗುವಂತೆ ಮಾಡುತ್ತಾನೆ. ವಿಷಯಸುಖಗಳಲ್ಲಿ ಮನಸ್ಸು ಮೋಹಗೊಂಡರೆ ಅದು ದೊರೆಯದಿದ್ದಾಗ ಮನೋವ್ಯಥೆಯು ಉಂಟಾಗುತ್ತದೆ. ಆ ಗಂಧರ್ವನೂ ಆ ಭಾರ್ಯೆಯರೂ ಯಜಮಾನನನ್ನು ರಕ್ಷಿಸಲಿ.

'ಪ್ರಜಾಪತಿರ್ವೈ ಭುವನಸ್ಯ ಪತಿಃ' ಎಂದು ಶ್ರುತಿವಚನ. ಆತನು ಸರ್ವವ್ಯಾಪಕನು. ಸರ್ವರಕ್ಷಕನು. ಆತನು ಸುಖವನ್ನು ಕೊಡಲಿ.

ಈ ರಾಷ್ಟ್ರಭೃನ್ಮಂತ್ರಗಳಲ್ಲಿ ದೇವತೆಗಳ ವಿವಿಧರೂಪವನ್ನು ಹೇಳಿದೆ. ದೇವತೆಗಳು ಅಸಾಧಾರಣಶಕ್ತಿಯುಳ್ಳವರು. ಈ ಅನುವಾಕದಲ್ಲಿ ಅವರನ್ನು ಗಂಧರ್ವರೆಂದೂ ಅಪ್ಸರೆಯರೆಂದೂ, ರಾಷ್ಟ್ರವನ್ನು ಭರಿಸಬಲ್ಲವರೆಂದೂ ಹೇಳಿದೆ.

ಮಹಾಭಾರತದ ಅರಣ್ಯಪರ್ವದಲ್ಲಿ ಪಾಂಡವರನ್ನು ಪರೀಕ್ಷಿಸಲು ಯಮನು ಯಕ್ಷರೂಪದಿಂದ ಕಾಣಿಸಿಕೊಂಡನೆಂಬುದನ್ನು ಗಮನಿಸಬಹುದು.

# ವಿನಿಯೋಗಸಂಗ್ರಹ

ಅಥ ತ್ರಯೋದಶ ಜಯಾಶ್ಚಿತ್ತಂ ಚೇತ್ಯಾದಯಃ ಶ್ರುತಾಃ ।
ಅಗ್ನಿರಭ್ಯಾತಾನಮಂತ್ರಾ ಅಷ್ಟಾದಶ ಯಥಾಶ್ರುತಾಃ ।
ಋತಾ ರಾಷ್ಟ್ರಭೃತಸ್ತದ್ವತ್ ದ್ವಾವಿಂಶತಿರುದೀರಿತಾಃ ॥

ಜಯಮಂತ್ರಗಳು–13

ಅಭ್ಯಾತಾನಮಂತ್ರಗಳು–18

ರಾಷ್ಟ್ರಭೃನ್ಮಂತ್ರಗಳು–22

ಒಟ್ಟು 53 ಮಂತ್ರಗಳು



## ॥ ಅಷ್ಟಮೋಽನುವಾಕಃ ॥

ರಾಷ್ಟ್ರಕಾಮಾಯ ಹೋತವ್ಯಾ ರಾಷ್ಟ್ರಂ ವೈ ರಾಷ್ಟ್ರಭೃತೋ
ರಾಷ್ಟ್ರೇಣೈವಾಸ್ಮೈ ರಾಷ್ಟ್ರಮವರುಂಧೇ

---

ರಾಷ್ಟ್ರಕಾಮಾಯೇತಿ ರಾಷ್ಟ್ರ–ಕಾಮಾಯ । ಹೋತವ್ಯಾಃ । ರಾಷ್ಟ್ರಮ್ । ವೈ । ರಾಷ್ಟ್ರಭೃತ ಇತಿ ರಾಷ್ಟ್ರ–ಭೃತಃ । ರಾಷ್ಟ್ರೇಣ । ಏವ । ಅಸ್ಮೈ । ರಾಷ್ಟ್ರಮ್ । ಅವೇತಿ । ರುಂಧೇ ।

---

ಏಳನೆಯ ಅನುವಾಕದಲ್ಲಿ ರಾಷ್ಟ್ರಭೃನ್ಮಂತ್ರಗಳು ಹೇಳಲ್ಪಟ್ಟವೆ. ಈ ಎಂಟನೆಯ ಅನುವಾಕದಲ್ಲಿ ಈ ಮಂತ್ರಗಳ ಕಾಮ್ಯವಿಧಿಗಳೂ, ಅವುಗಳಿಗೆ ಸಂಬಂಧಿಸಿದ ಪ್ರಯೋಗವಿಶೇಷವಿಧಿಗಳೂ ಹೇಳಲ್ಪಟ್ಟವೆ.

---

### ರಾಷ್ಟ್ರಕಾಮನಿಗೆ ರಾಷ್ಟ್ರಭೃನ್ಮಂತ್ರಹೋಮವಿಧಿ–ಬ್ರಾಹ್ಮಣ

| ಬ್ರಾಹ್ಮಣ | ವಿವರಣೆ |
|---|---|
| ರಾಷ್ಟ್ರಕಾಮಾಯ ಹೋತವ್ಯಾಃ | ಭೂಮಿವಿಶೇಷವನ್ನು ಪಡೆಯಲು ಬಯಸುವ ಯಜಮಾನನಿಗಾಗಿ ಈ ರಾಷ್ಟ್ರಭೃದ್ಧೋಮಗಳು ಅನುಷ್ಠಿಸಲ್ಪಡಬೇಕು. |
| ರಾಷ್ಟ್ರಭೃತಃ ರಾಷ್ಟ್ರಮ್ ವೈ | ರಾಷ್ಟ್ರಪ್ರಾಪಕವಾದ ರಾಷ್ಟ್ರಭೃತ್ತುಗಳು ರಾಷ್ಟ್ರವೇ ಆಗಿವೆಯಷ್ಟೆ. |
| ರಾಷ್ಟ್ರೇಣ ಏವ | ರಾಷ್ಟ್ರರೂಪವಾದ ರಾಷ್ಟ್ರಭೃದ್ಧೋಮದಿಂದಲೇ ಈ ಯಜಮಾನನಿಗೆ ಭೂವಿಶೇಷರೂಪವಾದ |
| ಅಸ್ಮೈ ರಾಷ್ಟ್ರಮ್ ಅವರುಂಧೇ | ರಾಷ್ಟ್ರವನ್ನು ಅಧ್ವರ್ಯುವು ಸಂಪಾದಿಸಿಕೊಡುತ್ತಾನೆ. |

ರಾಷ್ಟ್ರಮೇವ ಭವತ್ಯಾತ್ಮನೇ ಹೋತವ್ಯಾ ರಾಷ್ಟ್ರಂ ವೈ ॥ ರಾಷ್ಟ್ರಭೃತೋ ರಾಷ್ಟ್ರಂ ಪ್ರಜಾ ರಾಷ್ಟ್ರಂ ಪಶವೋ ರಾಷ್ಟ್ರಂ

---

ರಾಷ್ಟ್ರಮ್ । ಏವ । ಭವತಿ । ಆತ್ಮನೇ । ಹೋತವ್ಯಾಃ । ರಾಷ್ಟ್ರಮ್ । ವೈ । ರಾಷ್ಟ್ರಭೃತ ಇತಿ ರಾಷ್ಟ್ರ-ಭೃತಃ । ರಾಷ್ಟ್ರಮ್ । ಪ್ರಜೇತಿ ಪ್ರ-ಜಾ । ರಾಷ್ಟ್ರಮ್ । ಪಶವಃ । ರಾಷ್ಟ್ರಮ್ ।

---

| ಬ್ರಾಹ್ಮಣ | ವಿವರಣೆ |
|---|---|
| ರಾಷ್ಟ್ರಮ್ ಏವ ಭವತಿ | ಯಜಮಾನನು ರಾಷ್ಟ್ರರೂಪವಾದ ಭೂಮಿಯನ್ನು ಹೊಂದಿ ರಾಷ್ಟ್ರಸ್ವರೂಪನೇ ಆಗುತ್ತಾನೆ. |

ಶ್ರೇಷ್ಠನಾಗಲು ಬಯಸುವವನಿಗಾಗಿ ಈ ಹೋಮವಿಧಿ-ಬ್ರಾಹ್ಮಣ

| | |
|---|---|
| ಆತ್ಮನೇ ಹೋತವ್ಯಾಃ | ತನಗಾಗಿ/ತಾನು ಶ್ರೇಷ್ಠನಾಗುವನೆಂದು ಬಯಸುವವನಿಗಾಗಿ ಈ ಹೋಮಗಳು ಅನುಷ್ಠಿಸಲ್ಪಡಬೇಕು. |
| ರಾಷ್ಟ್ರಭೃತಃ ರಾಷ್ಟ್ರಮ್ ವೈ | ರಾಷ್ಟ್ರಭೃತ್ತುಗಳು ರಾಷ್ಟ್ರಸ್ವರೂಪವಷ್ಟೆ. |
| ಪ್ರಜಾ ರಾಷ್ಟ್ರಮ್ | ಪುತ್ರಾದಿಪ್ರಜೆಯೂ ರಾಷ್ಟ್ರವೇ ಆಗಿದೆ. |
| ಪಶವಃ ರಾಷ್ಟ್ರಮ್ | ಗವಾದಿ ಪಶುಗಳೂ ರಾಷ್ಟ್ರವೇ ಆಗಿವೆ. |

---

ಈ ಅನುವಾಕದಲ್ಲಿ ರಾಷ್ಟ್ರಸಾಧಕವಾದ ರಾಷ್ಟ್ರಭೃದ್ಧೋಮಗಳನ್ನು ರಾಷ್ಟ್ರವೆಂದೇ ವರ್ಣಿಸಲಾಗಿದೆ. ಆಯುಸ್ಸನ್ನು ವೃದ್ಧಿಪಡಿಸುವ ಘೃತವನ್ನು 'ಆಯುರ್ವೈ ಘೃತಮ್' ಎಂದು ಶ್ರುತಿಯು ಹೇಳುವುದಷ್ಟೆ.

ಶ್ರೇಷ್ಠನಾಗಲು ಬಯಸುವವನಿಗಾಗಿ ಈ ರಾಷ್ಟ್ರಭೃದ್ಧೋಮವು ವಿಹಿತವಾಗಿದೆ.

ಪ್ರಜಾಪಶ್ವಾದಿಸಂಪತ್ತಿಯನ್ನು ಹೊಂದಿದವನು ಸಮಾನರಿಗಿಂತಲೂ ಶ್ರೇಷ್ಠನಾಗಿ ಬೇರೆಯವರಿಗೆ ಆಶ್ರಯದಾತನಾಗುವನು.

ಯಚ್ಛ್ರೇಷ್ಠೋ ಭವತಿ ರಾಷ್ಟ್ರೇಣೈವ ರಾಷ್ಟ್ರಮವರುಂಧೇ

ವಸಿಷ್ಠಸ್ಸಮಾನಾನಾಂ ಭವತಿ ಗ್ರಾಮಕಾಮಾಯ ಹೋತವ್ಯಾ

ರಾಷ್ಟ್ರಂ ವೈ ರಾಷ್ಟ್ರಭೃತೋ ರಾಷ್ಟ್ರಗ್‌ಂ ಸಜಾತಾ

---

ಯತ್ । ಶ್ರೇಷ್ಠಃ । ಭವತಿ । ರಾಷ್ಟ್ರೇಣ । ಏವ । ರಾಷ್ಟ್ರಮ್ । ಅವೇತಿ । ರುಂಧೇ ।

ವಸಿಷ್ಠಃ । ಸಮಾನಾನಾಮ್ । ಭವತಿ । ಗ್ರಾಮಕಾಮಾಯೇತಿ ಗ್ರಾಮ-ಕಾಮಾಯ ।

ಹೋತವ್ಯಾಃ । ರಾಷ್ಟ್ರಮ್ । ವೈ । ರಾಷ್ಟ್ರಭೃತ ಇತಿ ರಾಷ್ಟ್ರ-ಭೃತಃ । ರಾಷ್ಟ್ರಮ್ ।

ಸಜಾತಾ ಇತಿ ಸ-ಜಾತಾಃ ।

---

| | |
|---|---|
| **ಯತ್ ಶ್ರೇಷ್ಠಃ ಭವತಿ ರಾಷ್ಟ್ರೇಣ ಏವ ರಾಷ್ಟ್ರಮ್ ಅವರುಂಧೇ** | ರಾಷ್ಟ್ರದಲ್ಲಿ ಶ್ರೇಷ್ಠನಾದರೆ ರಾಷ್ಟ್ರರೂಪವಾದ ರಾಷ್ಟ್ರಭೃತ್ತುಗಳಿಂದಲೇ ರಾಷ್ಟ್ರರೂಪವಾದ ಪ್ರಜಾಪಶ್ವಾದಿಭೋಗವನ್ನೂ ಪಡೆಯುತ್ತಾನೆ. |
| **ಸಮಾನಾನಾಮ್ ವಸಿಷ್ಠಃ ಭವತಿ** | ಸಮಾನರಲ್ಲಿ ಶ್ರೇಷ್ಠನಾಗಿ ಉಳಿದವರಿಗಿಂತಲೂ ಶ್ರೀಮಂತನಾಗುತ್ತಾನೆ/ಶ್ರೇಷ್ಠನಾಗುತ್ತಾನೆ. |

**ಗ್ರಾಮಾಧಿಪತಿಯಾಗಬಯಸುವವನಿಗೆ ರಾಷ್ಟ್ರಭೃದ್ಧೋಮವಿಧಿ-ಬ್ರಾಹ್ಮಣ**

| | |
|---|---|
| **ಗ್ರಾಮಕಾಮಾಯ ಹೋತವ್ಯಾಃ** | ಗ್ರಾಮಾಧಿಪತಿಯಾಗಬೇಕೆನ್ನುವ ಯಜಮಾನನಿಗಾಗಿ ಈ ಹೋಮವನ್ನು ಮಾಡಬೇಕು. |
| **ರಾಷ್ಟ್ರಭೃತಃ ರಾಷ್ಟ್ರಮ್ ವೈ** | ರಾಷ್ಟ್ರಭೃತ್ತುಗಳು ರಾಷ್ಟ್ರಸಾಧಕವಾದುದರಿಂದ ರಾಷ್ಟ್ರವೇ ಆಗಿದೆ. |
| **ಸಜಾತಾಃ ರಾಷ್ಟ್ರಮ್** | ಜ್ಞಾತಿಗಳೂ, ಇತರ ಗ್ರಾಮವಾಸಿಗಳೂ ರಾಷ್ಟ್ರ ಸ್ವರೂಪರೇ ಆಗಿರುತ್ತಾರೆ. |

ರಾಷ್ಟ್ರೇಣೈವಾಸ್ಮೈ ರಾಷ್ಟ್ರಗ್ಂ ಸಜಾತಾನವರುಂಧೇ
ಗ್ರಾಮ್ಯೇ [ಗ್ರಾಮೀ(೨೨)ಏವ]ವ ಭವತ್ಯಧಿದೇವನೇ
ಜುಹೋತ್ಯಧಿದೇವನ ಏವಾಸ್ಮೈ ಸಜಾತಾನವರುಂಧೇ

---

ರಾಷ್ಟ್ರೇಣ । ಏವ । ಅಸ್ಮೈ । ರಾಷ್ಟ್ರಮ್ । ಸಜಾತಾನಿತಿ ಸ–ಜಾತಾನ್ । ಅವೇತಿ । ರುಂಧೇ । ಗ್ರಾಮೀ । ಏವ । ಭವತಿ । ಅಧಿದೇವನ ಇತ್ಯಧಿ–ದೇವನೇ । ಜುಹೋತಿ । ಅಧಿದೇವನ ಇತ್ಯಧಿ–ದೇವನೇ । ಏವ । ಅಸ್ಮೈ । ಸಜಾತಾನಿತಿ ಸ–ಜಾತಾನ್ । ಅವೇತಿ । ರುಂಧೇ ।

---

| | |
|---|---|
| ಅಸ್ಮೈ ರಾಷ್ಟ್ರೇಣ ಏವ | [ಅಧ್ವರ್ಯುವು] ಈ ಯಜಮಾನನಿಗಾಗಿ ರಾಷ್ಟ್ರರೂಪವಾದ ರಾಷ್ಟ್ರಭೃತ್ತುಗಳಿಂದಲೇ |
| ರಾಷ್ಟ್ರಮ್ ಸಜಾತಾನ್ ಅವರುಂಧೇ | ರಾಷ್ಟ್ರರೂಪರಾದ ಗ್ರಾಮವಾಸಿಗಳನ್ನು ವಿಧೇಯರನ್ನಾಗಿ ಮಾಡುತ್ತಾನೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಾಧಿಪತಿಯೇ ಆಗುತ್ತಾನೆ. |

### ಈ ಹೋಮಕ್ಕಾಗಿ ಸ್ಥಳವಿಶೇಷವಿಧಿ–ಬ್ರಾಹ್ಮಣ

| | |
|---|---|
| ಅಧಿದೇವನೇ ಜುಹೋತಿ | ಜೂಜಾಡುವ ಸ್ಥಳದಲ್ಲಿ ಈ ಹೋಮವನ್ನು ಮಾಡಬೇಕು. |
| ಅಸ್ಮೈ ಅಧಿದೇವನೇ ಏವ ಸಜಾತಾನ್ ಅವರುಂಧೇ | ಈ ಜೂಜುಕಟ್ಟೆಯಲ್ಲಿಯೇ ಇತರರನ್ನು [ಅಧ್ವರ್ಯುವು ಈ ಹೋಮದಿಂದ ಗೆದ್ದು] ಈ ಯಜಮಾನನಿಗೆ ಅಧೀನರನ್ನಾಗಿ ಮಾಡುತ್ತಾನೆ. |

ತ ಏನಮವರುದ್ಧಾ ಉಪತಿಷ್ಠಂತೇ ರಥಮುಖ ಓಜಸ್ಕಾಮಸ್ಯ

ಹೋತವ್ಯಾ ಓಜೋ ವೈ ರಾಷ್ಟ್ರಭೃತ ಓಜೋ ರಥ

ಓಜಸೈವಾಸ್ಮಾ ಓಜೋಽವರುಂಧ

---

ತೇ । ಏನಮ್ । ಅವರುದ್ಧಾ ಇತ್ಯವ-ರುದ್ಧಾಃ । ಉಪೇತಿ । ತಿಷ್ಠಂತೇ । ರಥಮುಖ ಇತಿ ರಥ-ಮುಖೇ । ಓಜಸ್ಕಾಮಸ್ಯೇತ್ಯೋಜಃ-ಕಾಮಸ್ಯ । ಹೋತವ್ಯಾಃ । ಓಜಃ । ವೈ । ರಾಷ್ಟ್ರಭೃತ ಇತಿ ರಾಷ್ಟ್ರ-ಭೃತಃ । ಓಜಃ । ರಥಃ । ಓಜಸಾ । ಏವ । ಅಸ್ಮೈ । ಓಜಃ । ಅವೇತಿ । ರುಂಧೇ ।

---

| | |
|---|---|
| ತೇ ಅವರುದ್ಧಾ ಏನಮ್ ಉಪತಿಷ್ಠಂತೇ | ಅಧೀನರಾದ ಜ್ಞಾತಿಗಳೂ, ಗ್ರಾಮವಾಸಿಗಳೂ ಯಜಮಾನನನ್ನು ಸೇವಿಸುತ್ತಾರೆ. |

ಓಜಸ್ಕಾಮನಿಗೆ ಸ್ಥಳವಿಶೇಷವಿಧಿಯೊಡನೆ ರಾಷ್ಟ್ರಭೃದ್ಧೋಮ ವಿಧಿ-ಬ್ರಾಹ್ಮಣ

| | |
|---|---|
| ರಥಮುಖೇ | ರಥದ ಮೂಕಿಯ ಭಾಗದಲ್ಲಿ [ಅಗ್ನಿಯನ್ನು ಪ್ರತಿಷ್ಠಾಪಿಸಿ] |
| ಓಜಸ್ಕಾಮಸ್ಯ ಹೋತವ್ಯಾಃ | ಬಲವನ್ನು ಅಪೇಕ್ಷಿಸುವ ಯಜಮಾನನಿಗಾಗಿ ಹೋಮ ಮಾಡಲ್ಪಡಬೇಕು. |
| ರಾಷ್ಟ್ರಭೃತಃ ಓಜಃ ವೈ | ರಾಷ್ಟ್ರಭೃತ್ತುಗಳೂ ಬಲಸಾಧಕಗಳಾಗಿ ಓಜೋರೂಪವೇ ಆಗಿವೆ. |
| ರಥಃ ಓಜಃ | [ಜಯಸಾಧಕವಾದ] ರಥವೂ ಓಜಸ್ಸೇ ಆಗಿದೆ |
| ಅಸ್ಮೈ ಓಜಸಾ ಏವ ಓಜಃ ಅವರುಂಧೇ | [ಹೀಗೆ ಮಾಡುವುದರಿಂದ]ಅಧ್ವರ್ಯುವು ಈ ಯಜಮಾನನಿಗಾಗಿ ಬಲದಿಂದಲೇ ಬಲವನ್ನು ಸಂಪಾದಿಸಿ ಕೊಟ್ಟವನಾಗುತ್ತಾನೆ. |

ಓಜಸ್ವ್ಯೇವ ಭವತಿ ಯೋ ರಾಷ್ಟ್ರಾದಪಭೂತಸ್ಸ್ಯಾತ್ತಸ್ಮೈ

ಹೋತವ್ಯಾ ಯಾವಂತೋಽಸ್ಯ ರಥಾಸ್ಸ್ಯುಸ್ತಾನ್ಬ್ರೂಯಾ-

ದ್ಯುಙ್ಗ್ಧ್ವಮಿತಿ ರಾಷ್ಟ್ರಮೇವಾಸ್ಮೈ ಯುನಕ್ತಿ

[ಯುನಕ್ತಿ(೨೩)ಆಹುತ]

---

ಓಜಸ್ವೀ । ಏವ । ಭವತಿ । ಯಃ । ರಾಷ್ಟ್ರಾತ್ । ಅಪಭೂತ ಇತ್ಯಪ-ಭೂತಃ । ಸ್ಯಾತ್ ।

ತಸ್ಮೈ । ಹೋತವ್ಯಾಃ । ಯಾವಂತಃ । ಅಸ್ಯ । ರಥಾಃ । ಸ್ಯುಃ । ತಾನ್ । ಬ್ರೂಯಾತ್ ।

ಯುಙ್ಗ್ಧ್ವಮ್ । ಇತಿ । ರಾಷ್ಟ್ರಮ್ । ಏವ । ಅಸ್ಮೈ । ಯುನಕ್ತಿ ।[೨೩]।

---

| | |
|---|---|
| ಓಜಸ್ವೀ ಏವ ಭವತಿ | ಹೀಗೆ ಯಜಮಾನನು ಅತಿಶಯಬಲಶಾಲಿಯೇ ಆಗುತ್ತಾನೆ. |

## ರಾಷ್ಟ್ರಭ್ರಷ್ಟನಿಗೆ ರಾಷ್ಟ್ರಭೃದ್ಧೋಮವಿಧಿ-ಬ್ರಾಹ್ಮಣ

| | |
|---|---|
| ಯಃ ರಾಷ್ಟ್ರಾತ್ ಅಪಭೂತಃ ಸ್ಯಾತ್ | ಯಾವನು ರಾಷ್ಟ್ರದಿಂದ ಭ್ರಷ್ಟನಾಗಿ ಹೋಗುತ್ತಾನೆಯೋ/ರಾಜ್ಯವನ್ನು ಕಳೆದುಕೊಳ್ಳುತ್ತಾನೆಯೋ |
| ತಸ್ಮೈ ಹೋತವ್ಯಾಃ | ಆ ಯಜಮಾನನಿಗಾಗಿ ರಾಷ್ಟ್ರಭೃದ್ಧೋಮಗಳು ಅನುಷ್ಠಿಸಲ್ಪಡಬೇಕು. |
| ಅಸ್ಯ ರಥಾಃ ಯಾವಂತಃ ಸ್ಯುಃ | ಈ ರಾಷ್ಟ್ರಭ್ರಷ್ಟನಿಗೆ ಎಷ್ಟು ರಥಗಳು ಇವೆಯೋ |
| ತಾನ್ ಯುಙ್ಗ್ಧ್ವಮ್ ಇತಿ ಬ್ರೂಯಾತ್ | ಆ ರಥಗಳನ್ನು 'ಯುದ್ಧಕ್ಕೆ ಸಜ್ಜುಗೊಳಿಸಿ' ಎಂದು ಅಧ್ವರ್ಯುವು ಪ್ರೈಷವನ್ನು ಕೊಡಬೇಕು. |
| ಅಸ್ಮೈ ರಾಷ್ಟ್ರಮ್ ಏವ ಯುನಕ್ತಿ | ಈ ಯಜಮಾನನಿಗೆ ಅಧ್ವರ್ಯುವು ರಾಷ್ಟ್ರವನ್ನು ಸಂಪಾದಿಸಿಕೊಡುತ್ತಾನೆ. |

-ಹುತಯೋ ವಾ ಏತಸ್ಯಾಕ್ಲ್ಪ್ತಾ ಯಸ್ಯ ರಾಷ್ಟ್ರಂ ನ
ಕಲ್ಪತೇ ಸ್ವರಥಸ್ಯ ದಕ್ಷಿಣಂ ಚಕ್ರಂ ಪ್ರವೃಹ್ಯ

---

ಆಹುತಯ ಇತ್ಯಾ-ಹುತಯಃ । ವೈ । ಏತಸ್ಯ । ಅಕ್ಲೃಪ್ತಾಃ । ಯಸ್ಯ । ರಾಷ್ಟ್ರಮ್ । ನ ।
ಕಲ್ಪತೇ । ಸ್ವರಥಸ್ಯೇತಿ ಸ್ವ-ರಥಸ್ಯ । ದಕ್ಷಿಣಮ್ । ಚಕ್ರಮ್ । ಪ್ರವೃಹ್ಯೇತಿ ಪ್ರ-ವೃಹ್ಯ ।

---

ರಾಷ್ಟ್ರವು ಕೈಯಲ್ಲಿದ್ದರೂ ರಾಜ್ಯಭೋಗವಿಲ್ಲದವನಿಗೆ ಹೋಮ-ವಿಶೇಷ
ಪ್ರಯೋಗವಿಧಿ-ಬ್ರಾಹ್ಮಣ

| | |
|---|---|
| ಯಸ್ಯ ರಾಷ್ಟ್ರಮ್ ನ ಕಲ್ಪತೇ | ಯಾವ ಯಜಮಾನನ ರಾಜ್ಯದ *ಸಪ್ತಾಂಗಗಳು ಅಧೀನವಾಗಿ ಭೋಗಸಾಧನವಾಗಿರುವುದಿಲ್ಲವೋ |
| ಏತಸ್ಯ ಆಹುತಯಃ ಅಕ್ಲೃಪ್ತಾಃ ವೈ | ಮೊದಲು ಅನುಷ್ಠಾನ ಮಾಡಿರುವ ಈ ಯಜಮಾನನ ಹೋಮಾದಿಗಳು ಫಲಪ್ರದವಾಗಲಾರದಷ್ಟೆ. |
| ಸ್ವರಥಸ್ಯ ದಕ್ಷಿಣಮ್ ಚಕ್ರಮ್ ಪ್ರವೃಹ್ಯ | ಆಗ ಅಧ್ವರ್ಯುವು ತನ್ನ ಯಜಮಾನನ ರಥದ ಬಲಗಡೆಯ ಚಕ್ರವನ್ನು ಅಗ್ನಿಯ ಮೇಲೆ ಹಿಡಿದು |

---

ರಾಷ್ಟ್ರಭೃದ್ಧೋಮಗಳಿಂದ ಜ್ಞಾತಿಗಳೂ, ಗ್ರಾಮವಾಸಿಗಳೂ ಯಜಮಾನನಿಗೆ ಅಧೀನರಾಗಿ ನಡೆದುಕೊಳ್ಳುತ್ತಾರೆ. ಇದರಿಂದ ಗ್ರಾಮಸ್ವಾಮಿಯಾಗಬೇಕೆನ್ನುವ ಯಜಮಾನನ ಕಾಮನೆಯು ಪೂರ್ಣವಾಗುತ್ತದೆ. ಈ ಹೋಮಗಳಿಗಾಗಿ ಸ್ಥಳವಿಶೇಷ ವನ್ನು ಹೇಳಲಾಗಿದೆ. ಜೂಜಾಡುವ ಸ್ಥಳದಲ್ಲಿ ಈ ಹೋಮವನ್ನು ಅನುಷ್ಠಿಸಬೇಕು. ಜೂಜುಕಟ್ಟೆಯು ಗೆಲ್ಲುವವರ ಕಾರ್ಯಕ್ಷೇತ್ರವಷ್ಟೆ. ಅಲ್ಲಿ ಹೋಮ ಮಾಡುವುದ ರಿಂದ ಹೋಮಪ್ರಭಾವದಿಂದ ಬೇರೆ ಕಡೆಯಲ್ಲಿರುವ ಸಜಾತರೂ ಯಜಮಾನನಿಗೆ ವಿಧೇಯರಾಗುತ್ತಾರೆ.

---

*ರಾಜ, ಮಂತ್ರಿ, ಮಿತ್ರರಾಜರು, ಬೊಕ್ಕಸ, ದೇಶ, ಕೋಟೆಕೊತ್ತಲಗಳು, ಸೈನ್ಯ-ಇವು ಸಪ್ತ ರಾಜ್ಯಾಂಗಗಳು.

ನಾಡೀಮಭಿ ಜುಹುಯಾದಾಹುತೀರೇವಾಸ್ಯ ಕಲ್ಪಯತಿ ತಾ

ಅಸ್ಯ ಕಲ್ಪಮಾನಾ ರಾಷ್ಟ್ರಮನು ಕಲ್ಪತೇ ಸಂಗ್ರಾಮೇ

ಸಂಯತ್ತೇ ಹೋತವ್ಯಾ

---

ನಾಡೀಮ್ । ಅಭೀತಿ । ಜುಹುಯಾತ್ । ಆಹುತೀರಿತ್ಯಾ-ಹುತೀಃ । ಏವ । ಅಸ್ಯ ।

ಕಲ್ಪಯತಿ । ತಾಃ । ಅಸ್ಯ । ಕಲ್ಪಮಾನಾಃ । ರಾಷ್ಟ್ರಮ್ । ಅನ್ವಿತಿ । ಕಲ್ಪತೇ । ಸಂಗ್ರಾಮ

ಇತಿ ಸಂ-ಗ್ರಾಮೇ । ಸಂಯತ್ತ ಇತಿ ಸಂ-ಯತ್ತೇ । ಹೋತವ್ಯಾಃ ।

---

| | |
|---|---|
| ನಾಡೀಮ್ ಅಭಿ ಜುಹುಯಾತ್ | ಚಕ್ರರಂಧ್ರಕ್ಕೆ ಅಭಿಮುಖವಾಗಿ ರಾಷ್ಟ್ರಭೃದ್ಹೋಮಗಳನ್ನು ಅನುಷ್ಠಿಸಬೇಕು. |
| ಅಸ್ಯ ಆಹುತೀಃ ಕಲ್ಪಯತಿ ಏವ | [ಇದರಿಂದ] ಈ ಯಜಮಾನನಿಗಾಗಿ ಮೊದಲು ಮಾಡಿದ ಹೋಮಗಳು ಕಾರ್ಯಸಮರ್ಥವಾಗುವಂತೆ ಮಾಡುತ್ತಾನೆ. |
| ತಾಃ ಕಲ್ಪಮಾನಾಃ ಅನು ಅಸ್ಯ ರಾಷ್ಟ್ರಮ್ ಕಲ್ಪತೇ | ಕಾರ್ಯಸಮರ್ಥವಾದ ಆಹುತಿಗಳನ್ನು ಅನುಸರಿಸಿ ರಾಷ್ಟ್ರವೂ ಭೋಗಗಳನ್ನು ಒದಗಿಸಿಕೊಡಲು ಸಮರ್ಥವಾಗುತ್ತದೆ. |

ಯುದ್ಧದಲ್ಲಿ ಜಯವನ್ನು ಬಯಸುವವನಿಗಾಗಿ ರಾಷ್ಟ್ರಭೃದ್ಹೋಮವಿಧಿ
ಪ್ರಯೋಗವಿಶೇಷವಿಧಿ-ಬ್ರಾಹ್ಮಣ

| | |
|---|---|
| ಸಂಗ್ರಾಮೇ ಸಂಯತ್ತೇ ಹೋತವ್ಯಾಃ | ಯುದ್ಧವು ಪ್ರಾಪ್ತವಾಗಲಾಗಿ [ಜಯಾಪೇಕ್ಷಿಯಾದ ಯಜಮಾನನಿಗಾಗಿ] ಈ ರಾಷ್ಟ್ರಭೃದ್ಹೋಮಗಳು ಮಾಡಲ್ಪಡಬೇಕು. |

---

ಓಜಸ್ಕಾಮನಾದವನಿಗೆ ರಥದ ಮೂಕಿಯ ಭಾಗದಲ್ಲಿ ಈ ಹೋಮಗಳನ್ನು ಮಾಡಬೇಕು. ಬಲಸಾಧನವಾದ ರಥದ ಮುಂಭಾಗದಲ್ಲಿ ಬಲಸಾಧನವಾದ ರಾಷ್ಟ್ರಭೃತ್ತುಗಳ ಹೋಮ

# ರಾಷ್ಟ್ರಂ ವೈ ರಾಷ್ಟ್ರಭೃತೋ ರಾಷ್ಟ್ರೇ ಖಲು ವಾ ಏತೇ ವ್ಯಾಯಚ್ಛಂತೇ ಯೇ ಸಂಗ್ರಾಮಗ್ಂ ಸಂಯಂತಿ ಯಸ್ಯ ಪೂರ್ವಸ್ಯ ಜುಹ್ವತಿ ಸ ಏವ ಭವತಿ

---

ರಾಷ್ಟ್ರಮ್ । ವೈ । ರಾಷ್ಟ್ರಭೃತ ಇತಿ ರಾಷ್ಟ್ರ-ಭೃತಃ । ರಾಷ್ಟ್ರೇ । ಖಲು । ವೈ । ಏತೇ । ವ್ಯಾಯಚ್ಛಂತ ಇತಿ ವಿ-ಆಯಚ್ಛಂತೇ । ಯೇ । ಸಂಗ್ರಾಮಮಿತಿ ಸಂ-ಗ್ರಾಮಮ್ । ಸಂಯಂತೀತಿ ಸಂ-ಯಂತಿ । ಯಸ್ಯ । ಪೂರ್ವಸ್ಯ । ಜುಹ್ವತಿ । ಸಃ । ಏವ । ಭವತಿ ।

---

| | |
|---|---|
| **ರಾಷ್ಟ್ರಭೃತಃ ರಾಷ್ಟ್ರಮ್ ವೈ** | ರಾಷ್ಟ್ರಸಾಧಕವಾದ ರಾಷ್ಟ್ರಭೃತ್ತುಗಳು ರಾಷ್ಟ್ರವೇ ಆಗಿವೆಯಷ್ಟೆ. |
| **ಯೇ ಸಂಗ್ರಾಮಮ್ ಸಂಯಂತಿ** | ಯಾರು ಯುದ್ಧರಂಗಕ್ಕೆ ಹೋಗುತ್ತಾರೆಯೋ |
| **ರಾಷ್ಟ್ರೇ ಖಲು ವೈ ಏತೇ ವ್ಯಾಯಚ್ಛಂತೇ** | ರಾಷ್ಟ್ರದ ವಿಷಯದಲ್ಲಿ ತಾನೇ ಈ ಸ್ಪರ್ಧಿ-ಪ್ರತಿಸ್ಪರ್ಧಿಗಳು ಯುದ್ಧದಲ್ಲಿ ತೊಡಗುತ್ತಾರೆ! |
| **ಯಸ್ಯ ಪೂರ್ವಸ್ಯ ಜುಹ್ವತಿ** | [ಯುದ್ಧದಲ್ಲಿ] ಮೊದಲು ತೊಡಗಿರುವ ಯಾವ ಯಜಮಾನನಿಗಾಗಿ [ಋತ್ವಿಜರು] ರಾಷ್ಟ್ರಭೃದ್ಧೋಮಗಳನ್ನು ಮಾಡುತ್ತಾರೆಯೋ |
| **ಸಃ ಏವ ಭವತಿ** | ಅವನೇ ಯುದ್ಧದಲ್ಲಿ ಸಮರ್ಥನಾಗುತ್ತಾನೆ. |

---

ದಿಂದ-ಬಲದಿಂದಲೇ-ಬಲವನ್ನು ಒದಗಿಸಿಕೊಟ್ಟಂತೆ ಆಗುತ್ತದೆ. ಯಜಮಾನನ ಕಾಮನೆಯು ಪೂರ್ಣವಾಗುತ್ತದೆ.

ಯಾವನು ರಾಷ್ಟ್ರಭ್ರಷ್ಟನಾಗುತ್ತಾನೆಯೋ ಅವನಿಗಾಗಿಯೂ ಈ ಹೋಮಗಳು ಮಾಡಲ್ಪಡಬೇಕು. ಈ ರಥಗಳನ್ನು ಸಜ್ಜುಗೊಳಿಸಲು 'ಯುಙ್ಕ್ಷ್ವಮ್' ಎಂಬ ಪ್ರೈಷವಾಕ್ಯ ಏದೆ. ಇದು ಪ್ರಯೋಗವಿಶೇಷ.

ಜಯತಿ ತಗ್ಂ ಸಂಗ್ರಾಮಂ ಮಾಂಧುಕ ಇಧ್ಮೋ

[ಇಧ್ಮಃ(೨೪)ಭವತ್ಯ]ಭವತ್ಯಂಗಾರಾ ಏವ

ಪ್ರತಿವೇಷ್ಟಮಾನಾ ಅಮಿತ್ರಾಣಾಮಸ್ಯ ಸೇನಾಂ

ಪ್ರತಿವೇಷ್ಟಯಂತಿ

---

ಜಯತಿ । ತಮ್ । ಸಂಗ್ರಾಮಮಿತಿ ಸಂ-ಗ್ರಾಮಮ್ । ಮಾಂಧುಕಃ । ಇಧ್ಮಃ ।[೨೪]। ಭವತಿ । ಅಂಗಾರಾಃ । ಏವ । ಪ್ರತಿವೇಷ್ಟಮಾನಾ ಇತಿ ಪ್ರತಿ-ವೇಷ್ಟಮಾನಾಃ । ಅಮಿತ್ರಾಣಾಮ್ । ಅಸ್ಯ । ಸೇನಾಮ್ । ಪ್ರತೀತಿ । ವೇಷ್ಟಯಂತಿ ।

---

| | |
|---|---|
| ತಮ್ ಸಂಗ್ರಾಮಮ್ ಜಯತಿ | ಅವನೇ ಈ ಯುದ್ಧವನ್ನು ಗೆಲ್ಲುತ್ತಾನೆ. |
| ಮಾಂಧುಕಃ ಇಧ್ಮಃ ಭವತಿ | ಹಿಪ್ಪೆಮರದ ಕಟ್ಟಿಗೆಗಳು ಅಗ್ನಿಪ್ರಜ್ವಾಲನ ಸಾಧನಗಳಾಗಬೇಕು. [ವಿಧಿ] |
| ಪ್ರತಿವೇಷ್ಟಮಾನಾಃ ಅಂಗಾರಾಃ ಏವ | ಸುತ್ತಲೂ ವ್ಯಾಪಿಸುವ ಹಿಪ್ಪೆಮರದ ಕಟ್ಟಿಗೆಗಳ ಅಗ್ನಿಕಣಗಳೇ |
| ಅಸ್ಯ ಅಮಿತ್ರಾಣಾಮ್ ಸೇನಾಮ್ ಪ್ರತಿವೇಷ್ಟಯಂತಿ | ಈ ಯಜಮಾನನ ಶತ್ರುಗಳ ಸೈನ್ಯವನ್ನು ಅಗ್ನಿಜ್ವಾಲೆಯಿಂದ ಆವರಿಸಿಬಿಡುತ್ತವೆ. |

---

ಈ ಪ್ರೈಷವನ್ನು ಕೊಡುವುದರಿಂದಲೂ, ಹಾಗೆ ರಥಗಳನ್ನು ಸಜ್ಜುಗೊಳಿಸುವುದರಿಂದಲೂ, ಈ ರಾಷ್ಟ್ರಭೃದ್ಧೋಮಗಳನ್ನು ಮಾಡುವುದರಿಂದಲೂ, ಈ ರಾಷ್ಟ್ರಭ್ರಷ್ಟನಾದ ಯಜಮಾನನಿಗೆ ಅಧ್ವರ್ಯುವು ರಾಷ್ಟ್ರವನ್ನು ಸಂಪಾದಿಸಿಕೊಡುತ್ತಾನೆ.

ರಾಷ್ಟ್ರವಿದ್ದರೂ ಆದರ ಸಪ್ತಾಂಗಗಳು ಸ್ವಾಧೀನವಿಲ್ಲದಿರುವವನಿಗಾಗಿ ಈ ಹೋಮಗಳು ಹೇಳಲ್ಪಟ್ಟಿವೆ. ರಾಷ್ಟ್ರದಲ್ಲಿ ಸ್ಥಿರತೆಯು ಇಲ್ಲದಿರುವಾಗ ರಾಜ್ಯವನ್ನಾಳುವ

ಯ ಉನ್ಮಾದ್ಯೇತ್ತಸ್ಮೈ ಹೋತವ್ಯಾ ಗಂಧರ್ವಾಪ್ಸರಸೋ
ವಾ ಏತಮುನ್ಮಾದಯಂತಿ ಯ ಉನ್ಮಾದ್ಯತ್ಯೇತೇ ಖಲು
ವೈ ಗಂಧರ್ವಾಪ್ಸರಸೋ ಯದ್ರಾಷ್ಟ್ರಭೃತ-

---

ಯಃ । ಉನ್ಮಾದ್ಯೇದಿತ್ಯುತ್-ಮಾದ್ಯೇತ್ । ತಸ್ಮೈ । ಹೋತವ್ಯಾಃ । ಗಂಧರ್ವಾಪ್ಸರಸ ಇತಿ ಗಂಧರ್ವ-ಅಪ್ಸರಸಃ । ವೈ । ಏತಮ್ । ಉದಿತಿ । ಮಾದಯಂತಿ । ಯಃ । ಉನ್ಮಾದ್ಯತೀತ್ಯುತ್-ಮಾದ್ಯತಿ । ಏತೇ । ಖಲು । ವೈ । ಗಂಧರ್ವಾಪ್ಸರಸ ಇತಿ ಗಂಧರ್ವ-ಅಪ್ಸರಸಃ । ಯತ್ । ರಾಷ್ಟ್ರಭೃತ ಇತಿ ರಾಷ್ಟ್ರ-ಭೃತಃ ।

---

### ಹುಚ್ಚು ಹಿಡಿದವನ ಉನ್ಮಾದಪರಿಹಾರಕ್ಕಾಗಿ ಈ ಹೋಮವಿಧಿ-ಪ್ರಯೋಗವಿಶೇಷ-ಬ್ರಾಹ್ಮಣ

| | |
|---|---|
| **ಯಃ ಉನ್ಮಾದ್ಯೇತ್** | ಯಾವನು ಮನೋರೋಗಿಯಾಗಿರುತ್ತಾನೆಯೋ |
| **ತಸ್ಮೈ ಹೋತವ್ಯಾಃ** | ಅವನ ರೋಗಪರಿಹಾರಕ್ಕಾಗಿ ಈ ರಾಷ್ಟ್ರಭೃದ್ಧೋಮಗಳು ಮಾಡಲ್ಪಡಬೇಕು. |
| **ಯಃ ಉನ್ಮಾದ್ಯತಿ** | ಯಾವನು ಉನ್ಮತ್ತನಾಗಿರುತ್ತಾನೆಯೋ |
| **ಏತಮ್ ಗಂಧರ್ವಾಪ್ಸರಸಃ ಉನ್ಮಾದಯಂತಿ ವೈ** | ಈ ಯಜಮಾನನನ್ನು ಗಂಧರ್ವಾಪ್ಸರಸರೇ ಉನ್ಮತ್ತನನ್ನಾಗಿ ಮಾಡಿರುವರಷ್ಟೆ. |
| **ರಾಷ್ಟ್ರಭೃತಃ [ಇತಿ] ಯತ್ ಏತೇ ಗಂಧರ್ವಾಪ್ಸರಸಃ ಖಲು ವೈ** | [ರಾಷ್ಟ್ರಭೃತರಾದ ಗಂಧರ್ವಾಪ್ಸರಸರನ್ನು ಪ್ರತಿಪಾದಿಸುವ]* ರಾಷ್ಟ್ರಭೃನ್ಮಂತ್ರಗಳು ಗಂಧರ್ವಾಪ್ಸರಸರೇ ಆಗಿವೆ. |

---

* ಯಾವುದು ಪ್ರತಿಪಾದ್ಯವೋ ಅದೇ ಶಬ್ದವು ಪ್ರತಿಪಾದಕಕ್ಕೆ ಬರುತ್ತದೆ. ತತ್ಪ್ರತಿಪಾದಕತ್ವಾತ್ ತಾಚ್ಛಬ್ದ್ಯಮ್ ।

ತಸ್ಮೈ ಸ್ವಾಹಾ ತಾಭ್ಯಃ ಸ್ವಾಹೇತಿ ಜುಹೋತಿ ತೇನೈವೈನಾ

ಞ್ಛಮಯತಿ ನ್ಯಗ್ರೋಧ ಔದುಂಬರ ಆಶ್ವತ್ಥಃ ಪ್ಲಾಕ್ಷ

ಇತೀಧ್ಮೋ ಭವತ್ಯೇತೇ ವೈ ಗಂಧರ್ವಾಪ್ಸರಸಾಂ ಗೃಹಾಃ

---

ತಸ್ಮೈ । ಸ್ವಾಹಾ । ತಾಭ್ಯಃ । ಸ್ವಾಹಾ । ಇತಿ । ಜುಹೋತಿ । ತೇನ । ಏವ । ಏನಾನ್ ।

ಶಮಯತಿ । ನ್ಯಗ್ರೋಧಃ । ಔದುಂಬರಃ । ಆಶ್ವತ್ಥಃ । ಪ್ಲಾಕ್ಷಃ । ಇತಿ । ಇಧ್ಮಃ ।

ಭವತಿ । ಏತೇ । ವೈ । ಗಂಧರ್ವಾಪ್ಸರಸಾಮಿತಿ ಗಂಧರ್ವ–ಅಪ್ಸರಸಾಮ್ । ಗೃಹಾಃ ।

---

| | |
|---|---|
| ತಸ್ಮೈ ಸ್ವಾಹಾ ತಾಭ್ಯಃ ಸ್ವಾಹಾ ಇತಿ ಜುಹೋತಿ | 'ತಸ್ಮೈ ಸ್ವಾಹಾ' ಎಂದು ಗಂಧರ್ವರನ್ನೂ 'ತಾಭ್ಯಃ ಸ್ವಾಹಾ' ಎಂದು ಅಪ್ಸರೆಯರನ್ನೂ ಉದ್ದೇಶಿಸಿ ಹೋಮ ಮಾಡಬೇಕು. |
| ತೇನ ಏವ ಏನಾನ್ ಶಮಯತಿ | ಈ ರೀತಿಯ ಹೋಮದಿಂದಲೇ ಈ ಗಂಧರ್ವಾಪ್ಸರಸೆಯನ್ನು ತೃಪ್ತಿಗೊಳಿಸಿ ಶಾಂತರನ್ನಾಗಿಸುತ್ತಾನೆ. |
| ನ್ಯಗ್ರೋಧಃ, ಔದುಂಬರಃ, ಆಶ್ವತ್ಥಃ,ಪ್ಲಾಕ್ಷಃ, ಇತಿ ಇಧ್ಮಃ ಭವತಿ | ಆಲ, ಅತ್ತಿ, ಅರಳಿ, ಬಸರೀ ಈ ಮರಗಳ ಕಟ್ಟಿಗೆಗಳು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಇಧ್ಮಗಳಾಗುತ್ತವೆ. [ವಿಧಿ] |
| ಏತೇ ಗಂಧರ್ವಾಪ್ಸರಸಾಮ್ ಗೃಹಾಃ ವೈ | ಇವುಗಳೇ ಗಂಧರ್ವಾಪ್ಸರೆಯರ ವಾಸಸ್ಥಾನವಾಗಿದೆ/ವಾಸಸ್ಥಾನದಂತೆ ಪ್ರಿಯವಾಗಿವೆ. |

---

ಪ್ರಭುವು ಸುಖವಾಗಿರುವುದೆಂತು? ಇಂತಹ ಸ್ಥಿತಿಯಲ್ಲಿ ಅವನ ಆಹುತಿಗಳು ಫಲಪ್ರದವಾಗುವುದಿಲ್ಲ. ಅವನಿಗಾಗಿ ಚಕ್ರರಂಧ್ರಕ್ಕೆ ಅಭಿಮುಖವಾಗಿ ಈ ಪ್ರಯೋಗವಿಶೇಷವನ್ನು ಅನುಸರಿಸುವುದರಿಂದ ರಾಷ್ಟ್ರವೂ ಅಧೀನವಾಗುತ್ತದೆ. ಶಾಂತಿಯೂ ನೆಲೆಸುತ್ತದೆ.

ಸ್ವ ಏವೈನಾನ್[೨೫] ಆಯತನೇ ಶಮಯತ್ಯಭಿಚರತಾ ಪ್ರತಿಲೋಮಗ್ಂ ಹೋತವ್ಯಾಃ ಪ್ರಾಣಾನೇವಾಸ್ಯ ಪ್ರತೀಚಃ ಪ್ರತಿ ಯೌತಿ ತಂ ತತೋ ಯೇನ ಕೇನ ಚ ಸ್ತೃಣುತೇ

---

ಸ್ವೇ । ಏವ । ಏನಾನ್ ।[೨೫]। ಆಯತನ ಇತ್ಯಾ-ಯತನೇ । ಶಮಯತಿ । ಅಭಿಚರತೇತ್ಯಭಿ-ಚರತಾ । ಪ್ರತಿಲೋಮಮಿತಿ ಪ್ರತಿ-ಲೋಮಮ್ । ಹೋತವ್ಯಾಃ । ಪ್ರಾಣಾನಿತಿ ಪ್ರ-ಅನಾನ್ । ಏವ । ಅಸ್ಯ । ಪ್ರತೀಚಃ । ಪ್ರತೀತಿ । ಯೌತಿ । ತಮ್ । ತತಃ ಯೇನ । ಕೇನ । ಚ । ಸ್ತೃಣುತೇ ।

---

| | |
|---|---|
| ಸ್ವೇ ಆಯತನೇ ಏವ ಏನಾನ್ ಶಮಯತಿ | ಈ ಗಂಧರ್ವಾಪ್ಸರಸೆಯರನ್ನು ಅವರ ವಾಸಸ್ಥಾನದಲ್ಲಿಯೇ ತೃಪ್ತಿಪಡಿಸಿ ಶಾಂತರನ್ನಾಗಿಸುತ್ತಾನೆ. |

ಶತ್ರುಹಿಂಸಾಕಾಮನಿಗೆ ಪ್ರತಿಲೋಮವಾಗಿ ರಾಷ್ಟ್ರಭೃದ್ಧೋಮವಿಧಿ-ಬ್ರಾಹ್ಮಣ

| | |
|---|---|
| ಅಭಿಚರತಾ ಪ್ರತಿಲೋಮಮ್ ಹೋತವ್ಯಾಃ | ಶತ್ರುವಿನ ಮೇಲೆ ಅಭಿಚಾರ ಮಾಡಬಯಸುವವನು ಈ ಹೋಮಗಳನ್ನು ಕೊನೆಯಿಂದ ಪ್ರಾರಂಭಿಸಬೇಕು. |
| ಅಸ್ಯ ಪ್ರಾಣಾನ್ ಪ್ರತೀಚಃ ಏವ ಪ್ರತಿಯೌತಿ | [ಇದರಿಂದ] ಈ ಶತ್ರುವಿನ ಪ್ರಾಣಾದಿಗಳನ್ನು ವಿರುದ್ಧವಾಗಿ ಸಂಚರಿಸುವಂತೆ ಮಾಡುತ್ತಾನೆ. |
| ತತಃ ತಮ್ ಯೇನ ಕೇನ ಚ ಸ್ತೃಣುತೇ | ಅನಂತರ ಆ ಹಗೆಯನ್ನು ಯಾವುದಾದರೂ ಅಲ್ಪಸಾಧನದಿಂದಲೇ ಹಿಂಸಿಸಲು ಸಮರ್ಥನಾಗುತ್ತಾನೆ. |

ಸ್ವಕೃತ ಇರಿಣೇ ಜುಹೋತಿ ಪ್ರದರೇ ವೈತದ್ವಾ ಅಸ್ಯೈ
ನಿರ್‌ಋತಿಗೃಹೀತಂ ನಿರ್‌ಋತಿಗೃಹೀತ ಏವೈನಂ
ನಿರ್‌ಋತ್ಯಾ ಗ್ರಾಹಯತಿ

---

ಸ್ವಕೃತ ಇತಿ ಸ್ವ-ಕೃತೇ । ಇರಿಣೇ । ಜುಹೋತಿ । ಪ್ರದರ ಇತಿ ಪ್ರ-ದರೇ । ವಾ ।
ಏತತ್ । ವೈ । ಅಸ್ಯೈ । ನಿರ್‌ಋತಿಗೃಹೀತಮಿತಿ ನಿರ್‌ಋತಿ-ಗೃಹೀತಮ್ ।
ನಿರ್‌ಋತಿಗೃಹೀತ ಇತಿ ನಿರ್‌ಋತಿ-ಗೃಹೀತೇ । ಏವ । ಏನಮ್ । ನಿರ್‌ಋತ್ಯೇತಿ
ನಿಃ-ಋತ್ಯಾ । ಗ್ರಾಹಯತಿ ।

---

## ಈ ಪ್ರಯೋಗಕ್ಕೆ ಪ್ರದೇಶವಿಶೇಷವಿಧಿ-ಬ್ರಾಹ್ಮಣ

| | |
|---|---|
| ಸ್ವಕೃತೇ ಇರಿಣೇ ಜುಹೋತಿ | ತಾನಾಗಿಯೇ ಬಂಜರುಭೂಮಿಯಾದ ಚೌಳು ಭೂಮಿಯಲ್ಲಿ ಈ ಹೋಮವನ್ನು ಮಾಡಬೇಕು. |
| ಪ್ರದರೇ ವಾ [ಜುಹೋತಿ] | ಅಥವಾ ನೀರು ಹರಿದು ಹಳ್ಳವಾಗಿರುವ ನೆಲದಲ್ಲಿ ಮಾಡಬೇಕು. |
| ಏತತ್ ವೈ ಅಸ್ಯೈ ನಿರ್‌ಋತಿಗೃಹೀತಮ್ | ರಾಕ್ಷಸದೇವತೆಯಾದ ನಿರ್‌ಋತಿಯಿಂದ ಪರಿಗ್ರಹಿಸಲ್ಪಟ್ಟ ಭೂಮಿಯ ಪ್ರದೇಶವೆಂದರೆ ಇದೇ ಅಷ್ಟೆ. |
| ನಿರ್‌ಋತಿಗೃಹೀತೇ ಏವ ಏನಮ್ | ನಿರ್‌ಋತಿಯಿಂದ ಸ್ವೀಕೃತವಾದ ಪ್ರದೇಶದಲ್ಲಿಯೇ ಈ ಶತ್ರುವನ್ನು |
| ನಿರ್‌ಋತ್ಯಾ ಗ್ರಾಹಯತಿ | ನಿರ್‌ಋತಿದೇವತೆಯಿಂದ ಹಿಡಿಸುತ್ತಾನೆ. |

ಯದ್ವಾಚಃ ಕ್ರೂರಂ ತೇನ ವಷಟ್ಕರೋತಿ ವಾಚ ಏವೈನಂ

ಕ್ರೂರೇಣ ಪ್ರ ವೃಶ್ಚತಿ ತಾಜಗಾರ್ತಿಮಾರ್ಚ್ಛತಿ

---

ಯತ್ । ವಾಚಃ । ಕ್ರೂರಮ್ । ತೇನ । ವಷಟ್ । ಕರೋತಿ । ವಾಚಃ । ಏವ । ಏನಮ್ ।

ಕ್ರೂರೇಣ । ಪ್ರೇತಿ । ವೃಶ್ಚತಿ । ತಾಜಕ್ । ಆರ್ತಿಮ್ । ಏತಿ । ಋಚ್ಛತಿ ।

---

### ವಷಟ್ಕಾರಕ್ಕೆ ಸಂಬಂಧಿಸಿದ ವಿಶೇಷವಿಧಿ; ಬ್ರಾಹ್ಮಣ

| | |
|---|---|
| ಯತ್ ವಾಚಃ ಕ್ರೂರಮ್ | ಯಾವುದು ಮಾತಿನಲ್ಲಿ ಕ್ರೂರವಾಗಿರುವುದೋ* |
| ತೇನ ವಷಟ್ ಕರೋತಿ | ಅದರಿಂದ ವಷಟ್ಕಾರವನ್ನು ಮಾಡಬೇಕು. |
| ಏನಮ್ ವಾಚಃ ಕ್ರೂರೇಣ ಏವ | ಈ ಶತ್ರುವನ್ನು ಈ ಮಾತಿನ ಕ್ರೌರ್ಯದಿಂದಲೇ |
| ಪ್ರವೃಶ್ಚತಿ ತಾಜಕ್ ಆರ್ತಿಮ್ | ಹಿಂಸಿಸುತ್ತಾನೆ. ಶತ್ರುವು ಒಡನೆಯೇ ನಾಶ |
| ಆರ್ಚ್ಛತಿ | ಹೊಂದುತ್ತಾನೆ. |

---

ಯುದ್ಧದಲ್ಲಿ ಜಯವನ್ನು ಬಯಸುವವನಿಗಾಗಿ ಈ ರಾಷ್ಟ್ರಭೃದ್ಧೋಮಗಳನ್ನು ಅನುಷ್ಠಿಸಬೇಕು. ಈ ರೀತಿ ಮಾಡುವ ಹೋಮದಲ್ಲಿ ಹಿಪ್ಪೆಮರದ ಕಟ್ಟಿಗೆಗಳು ಅಗ್ನಿಪ್ರಜ್ವಾಲನಸಾಧನಗಳಾಗಬೇಕು. ಇದರಿಂದ ಶತ್ರುವು ಪರಾಜಿತನಾಗುತ್ತಾನೆ. ಯಜಮಾನನಿಗೆ ಅನೇಕ ಶತ್ರುಗಳಿದ್ದಲ್ಲಿ ಪ್ರತಿ ಶತ್ರುವಿಗೂ ಪ್ರತ್ಯೇಕವಾಗಿ ಹೋಮವನ್ನು ಮಾಡಬೇಕು.

ಮನೋರೋಗಿಯಾದವನ ರೋಗಪರಿಹಾರಕ್ಕಾಗಿ ಈ ಹೋಮಗಳನ್ನು ಅನುಷ್ಠಿಸಬೇಕು. ಈ ಹವನದಿಂದ ಉನ್ಮಾದವನ್ನು ಉಂಟುಮಾಡುವ ಗಂಧರ್ವ-ಅಪ್ಸರಸೆಯರನ್ನು ತೃಪ್ತಿಪಡಿಸುತ್ತಾನೆ.

---

*ಖಟ್ ಫಟ್ ಜಹಿ । ಛಿಂಧೀ ಭಿಂಧೀ ಹಂಧೀ ಕಟ್ । ಇತಿ ವಾಚಃ ಕ್ರೂರಾಣಿ । ಎಂದು ಆರಣ್ಯಕದಲ್ಲಿ ಹೇಳಿದೆ. ಅದು ಮಾತಿನಲ್ಲಿಯೂ, ಅರ್ಥವು ಹಿಂಸಾತ್ಮಕವಾದು ದರಿಂದ ಅರ್ಥದಲ್ಲಿಯೂ ಕ್ರೂರವಾಗಿದೆ. ತೈತ್ತಿರೀಯ ಆರಣ್ಯಕ (4-27)

ಯಸ್ಯ ಕಾಮಯೇತಾನ್ನಾದ್ಯಮ್[೨೬] ಆ ದದೀಯೇತಿ ತಸ್ಯ ಸಭಾಯಾಮುತ್ತಾನೋ ನಿಪದ್ಯ ಭುವನಸ್ಯ ಪತ ಇತಿ ತೃಣಾನಿ ಸಂ ಗೃಹ್ಣೀಯಾತ್ಪ್ರಜಾಪತಿರ್ವೈ ಭುವನಸ್ಯ ಪತಿಃ

---

ಯಸ್ಯ । ಕಾಮಯೇತ । ಅನ್ನಾದ್ಯಮಿತ್ಯನ್ನ–ಅದ್ಯಮ್ ।[೨೬]। ಏತಿ । ದದೀಯ । ಇತಿ । ತಸ್ಯ । ಸಭಾಯಾಮ್ । ಉತ್ತಾನ ಇತ್ಯುತ್–ತಾನಃ । ನಿಪದ್ಯೇತಿ ನಿ–ಪದ್ಯ । ಭುವನಸ್ಯ । ಪತೇ । ಇತಿ । ತೃಣಾನಿ । ಸಮಿತಿ । ಗೃಹ್ಣೀಯಾತ್ । ಪ್ರಜಾಪತಿರಿತಿ ಪ್ರಜಾ–ಪತಿಃ । ವೈ । ಭುವನಸ್ಯ । ಪತಿಃ ।

---

ಶತ್ರುವಿನ ಅನ್ನವನ್ನು ವಶಪಡಿಸಬೇಕೆಂದಿರುವವನಿಗೆ ಕೆಲವು ರಾಷ್ಟ್ರಭೃನ್ಮಂತ್ರಗಳ ಪ್ರಯೋಗವಿಶೇಷವಿಧಿ

| | |
|---|---|
| ಯಸ್ಯ ಅನ್ನಾದ್ಯಮ್ ಆದದೀಯ ಇತಿ ಕಾಮಯೇತ | ಯಾವನು ಯಾವ ಶತ್ರುವಿನ ಅನ್ನವನ್ನು ವಶಪಡಿಸಿಕೊಳ್ಳಲು ಬಯಸುವನೋ |
| ತಸ್ಯ ಸಭಾಯಾಮ್ ಉತ್ತಾನಃ ನಿಪದ್ಯ | ಅವನು ಆ ಹಗೆಯ ಸಭೆಯಲ್ಲಿ ಊರ್ಧ್ವಮುಖನಾಗಿ ಮಲಗಿಕೊಂಡು |
| ಭುವನಸ್ಯ ಪತೇ ಇತಿ | ಭುವನಸ್ಯ ಪತೇ...ಸ್ವಸ್ತಿಮ್ । ಎಂಬ ಮಂತ್ರದಿಂದ |
| ತೃಣಾನಿ ಸಂಗೃಹ್ಣೀಯಾತ್ | ಹುಲ್ಲುಗಳನ್ನು ತೆಗೆದುಕೊಳ್ಳಬೇಕು. |
| ಪ್ರಜಾಪತಿಃ ವೈ ಭುವನಸ್ಯ ಪತಿಃ | ಪ್ರಜಾಪತಿಯೇ ವಿಶ್ವದ ಒಡೆಯನಷ್ಟೆ. |

---

ಈ ಹೋಮಕ್ಕೆ ಆಲ, ಅಶ್ವತ್ಥ, ಅತ್ತಿ ಬಸರೀ ಮರಗಳ ಕಟ್ಟಿಗೆಗಳು ಇರಬೇಕು. ಇವುಗಳಲ್ಲಿ ಒಂದೊಂದು ಮರದ ಇಧ್ಮವಾಗಬೇಕೆಂದು ಕೆಲವರ ಮತ. ಎಲ್ಲ ಮರಗಳ ಇಧ್ಮವೂ ಆಗಿರಬೇಕೆಂದು ಹಲವರ ಮತ. ಈ ಹೋಮದಿಂದ ತೃಪ್ತರಾದ ಗಂಧರ್ವಾಪ್ಸರಸೆಯರು ಉನ್ಮಾದರೋಗವನ್ನು ಪರಿಹರಿಸುತ್ತಾರೆ.

ಪ್ರಜಾಪತಿನೈವಾಸ್ಯಾನ್ನಾದ್ಯಮಾ ದತ್ತ ಇದಮಹಮಮುಷ್ಯಾ

ಮುಷ್ಯಾಯಣಸ್ಯಾನ್ನಾದ್ಯಗ್ಂ ಹರಾಮೀತ್ಯಾಹಾನ್ನಾದ್ಯ

ಮೇವಾಸ್ಯ ಹರತಿ

---

ಪ್ರಜಾಪತಿನೇತಿ ಪ್ರಜಾ–ಪತಿನಾ । ಏವ । ಅಸ್ಯ । ಅನ್ನಾದ್ಯಮಿತ್ಯನ್ನ–ಅದ್ಯಮ್ । ಏತಿ ।

ದತ್ತೇ । ಇದಮ್ । ಅಹಮ್ । ಅಮುಷ್ಯ । ಆಮುಷ್ಯಾಯಣಸ್ಯ । ಅನ್ನಾದ್ಯಮಿತ್ಯನ್ನ–

ಅದ್ಯಮ್ । ಹರಾಮಿ । ಇತಿ । ಆಹ । ಅನ್ನಾದ್ಯಮಿತ್ಯನ್ನ–ಅದ್ಯಮ್ । ಏವ । ಅಸ್ಯ । ಹರತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಪ್ರಜಾಪತಿನಾ ಏವ ಅಸ್ಯ ಅನ್ನಾದ್ಯಮ್ ಆ ದತ್ತೇ | ಪ್ರಜಾಪತಿಯಿಂದಲೇ ಈ ಪ್ರತಿಸ್ಪರ್ಧಿಯ ಅನ್ನವನ್ನು ವಶಪಡಿಸಿಕೊಳ್ಳುತ್ತಾನೆ. |

| ಮಂತ್ರ | ವಿನಿಯೋಗ |
|---|---|
| ಇದಮ್...ಹರಾಮಿ ॥ | ತೃಣಪ್ರಹರಣವನ್ನು ಮಾಡಲು |

✦ಅಹಮ್=ನಾನು; ಆಮುಷ್ಯಾಯಣಸ್ಯ=ಇಂತಹವನ ಮಗನಾದ; ಅಮುಷ್ಯ= ಇಂತಹವನ; ಇದಮ್ ಅನ್ನಾದ್ಯಮ್=ಅನ್ನಸಂಪತ್ತನ್ನೇ ಇದೋ! ಹರಾಮಿ= ಸೆಳೆದುಕೊಂಡು ಹೋಗುತ್ತಿದ್ದೇನೆ.

| | |
|---|---|
| ಇತಿ ಆಹ ಅಸ್ಯ ಅನ್ನಾದ್ಯಮ್ ಏವ ಹರತಿ | ಎಂದು ಈ ಮಂತ್ರವು ಹೇಳುತ್ತದೆ. ಇದರಿಂದ ಈ ಹಗೆಯ ಅನ್ನಸಂಪತ್ತನ್ನೇ/ಅನ್ನವನ್ನು ತಿನ್ನುವ ಶಕ್ತಿಯನ್ನೇ ವಶಪಡಿಸಿಕೊಳ್ಳುತ್ತಾನೆ. |

ಶತ್ರುಹಿಂಸೆಯನ್ನು ಬಯಸುವವನು ಈ ರಾಷ್ಟ್ರಭೃದ್ಧೋಮವನ್ನು ಪ್ರತಿಲೋಮದ ಕ್ರಮದಲ್ಲಿ ಮಾಡಬೇಕು. ಕೊನೆಯ ಮಂತ್ರವಾದ 'ಸ ನೋ ಭುವನಸ್ಯ' ಎಂದು ಆರಂಭಿಸಿ ಮೊದಲನೆಯದಾದ 'ಋತಾಷಾಟ್' ಮಂತ್ರವನ್ನು ಕೊನೆಯದನ್ನಾಗಿ

ಷಡ್ಭಿರ್ ಹರತಿ ಷಡ್ವಾ ಋತವಃ ಪ್ರಜಾಪತಿನೈವಾಸ್ಯಾನ್ನಾದ್ಯ

ಮಾದಾಯರ್ತವೋಽಸ್ಮಾ ಅನು ಪ್ರ ಯಚ್ಛಂತಿ

---

ಷಡ್ಭಿರಿತಿ ಷಟ್-ಭಿಃ । ಹರತಿ । ಷಟ್ । ವೈ । ಋತವಃ । ಪ್ರಜಾಪತಿನೇತಿ ಪ್ರಜಾ-ಪತಿನಾ । ಏವ । ಅಸ್ಯ । ಅನ್ನಾದ್ಯಮಿತ್ಯನ್ನ-ಅದ್ಯಮ್ । ಆದಾಯೇತ್ಯಾ-ದಾಯ । ಋತವಃ । ಅಸ್ಮೈ । ಅನು । ಪ್ರೇತಿ । ಯಚ್ಛಂತಿ ।[೨೭]

---

ಮಂತ್ರಸಂಖ್ಯಾವಿಧಿ;ಬ್ರಾಹ್ಮಣ

| | |
|---|---|
| ಷಡ್ಭಿಃ ಹರತಿ | *ಆರು ಮಂತ್ರಗಳಿಂದ ಹುಲ್ಲನ್ನು ತೆಗೆದುಕೊಂಡು ಹೋಗಬೇಕು. |
| ಷಟ್ ವೈ ಋತವಃ | ಸಂವತ್ಸರದಲ್ಲಿ ಆರು ಋತುಗಳಿವೆಯಷ್ಟೆ. |
| ಅಸ್ಯ ಅನ್ನಾದ್ಯಮ್ ಪ್ರಜಾಪತಿನಾ ಏವ ಆದಾಯ ಋತವಃ ಅಸ್ಮೈ ಅನು ಪ್ರಯಚ್ಛಂತಿ | ವಿಶ್ವಕರ್ತನಾದ ಪ್ರಜಾಪತಿದೇವನ ಅನುಗ್ರಹ ದಿಂದಲೇ ಈ ಹಗೆಯ ಅನ್ನವನ್ನು ಕಸಿದುಕೊಂಡು ಋತುದೇವತೆಗಳು ಈ ಯಜಮಾನನಿಗೆ ಅನ್ನವನ್ನು ಒದಗಿಸಿಕೊಡುತ್ತಾರೆ. |

---

ಮಾಡಿಕೊಂಡು ಹೋಮವನ್ನು ಮಾಡಬೇಕು.

ಇದು ವೈರಿನಾಶಕ್ಕಾಗಿ ಮಾಡುವ ಅಭಿಚಾರಪ್ರಯೋಗ. ಹೋಮವನ್ನು ಮಾಡುವವನು ಅಧ್ವರ್ಯುವೇ ಆದರೂ ಯಜಮಾನನ ಕಾಮನೆಯನ್ನೇ ಅನುಸರಿಸು ತ್ತಾನೆ. ಋತ್ವಿಜರು ದಕ್ಷಿಣೆಯಿಂದ ತೃಪ್ತರಾಗುತ್ತಾರೆ. ಹೀಗೆಯೇ 'ತಂ ಯಾಜಯೇತ್'

---

*೧) ಭುವನಸ್ಯ...ಸ್ವಸ್ತಿಮ್ । ೨) ಪರಮೇಷ್ಠೀ...ಭುವಃ । ೩) ಸುಕ್ಷಿತಿಃ ಸುಭೂತಿಃ...ರುಚಃ । ೪) ದೂರೇಹೇತಿಃ...ಭೀರುವಃ । ೫) ಚಾರುಃ...ಶೋಚಯಂತೀಃ । ೬) ಸ ನೋ...ಯಚ್ಛ ।
ಈ ಆರು ಮಂತ್ರಗಳಿಗೂ 'ಇದಮಹಂ...ಹರಾಮಿ ಎಂದು ಪ್ರತ್ಯೇಕವಾಗಿ ಸೇರಿಸಬೇಕು.

[ಯಚ್ಛಂತಿ(೨೭)] ಯೋ ಜ್ಯೇಷ್ಠಬಂಧುರಪಭೂತಸ್ಸ್ಯಾ

ತ್ತಗ್ಗ್ಂ ಸ್ಥಲೇಽವಸಾಯ್ಯ ಬ್ರಹ್ಮೌದನಂ ಚತುಶ್ಶರಾವಂ

ಪಕ್ತ್ವಾ ತಸ್ಮೈ ಹೋತವ್ಯಾ

---

ಯಃ । ಜ್ಯೇಷ್ಠಬಂಧುರಿತಿ ಜ್ಯೇಷ್ಠ–ಬಂಧುಃ । ಅಪಭೂತ ಇತ್ಯಪ–ಭೂತಃ । ಸ್ಯಾತ್ ।

ತಮ್ । ಸ್ಥಲೇ । ಅವಸಾಯ್ಯೇತ್ಯವ–ಸಾಯ್ಯ । ಬ್ರಹ್ಮೌದನಮಿತಿ ಬ್ರಹ್ಮ–ಓದನಮ್ ।

ಚತುಶ್ಶರಾವಮಿತಿ ಚತುಃ–ಶರಾವಮ್ । ಪಕ್ತ್ವಾ । ತಸ್ಮೈ । ಹೋತವ್ಯಾಃ ।

---

ಮತ್ತೊಂದು ಕಾಮನೆಗಾಗಿ ರಾಷ್ಟ್ರಭೃದ್ಧೋಮವಿಧಿ; ಪ್ರಯೋಗವಿಶೇಷವಿಧಿ

| | |
|---|---|
| ಯಃ ಜ್ಯೇಷ್ಠಬಂಧುಃ | ಯಾವನು ಹಿರಿಯನಾದ ಬಂಧುವಾಗಿದ್ದರೂ/ |
| ಅಪಭೂತಃ ಸ್ಯಾತ್ | ಪ್ರಶಸ್ತರಾದ ಬಂಧುಗಳಿದ್ದರೂ ತಾನು ತಿರಸ್ಕೃತನಾಗಿರುತ್ತಾನೆಯೋ |
| ತಮ್ ಸ್ಥಲೇ ಅವಸಾಯ್ಯ | ಅವನನ್ನು ಎತ್ತರದ ಪ್ರದೇಶದಲ್ಲಿ ಕುಳ್ಳಿರಿಸಿ |
| ಚತುಶ್ಶರಾವಮ್ | ನಾಲ್ಕು ಮುಚ್ಚಳಗಳಷ್ಟು ಪರಿಮಿತವಾದ ಬ್ರಾಹ್ಮಣ |
| ಬ್ರಹ್ಮೌದನಮ್ ಪಕ್ತ್ವಾ | ಭೋಜನಕ್ಕೆ ಅರ್ಹವಾದ ಅನ್ನವನ್ನು ಬೇಯಿಸಿ, |
| ತಸ್ಮೈ ಹೋತವ್ಯಾಃ | ಅವನಿಗಾಗಿ/ಆ ಫಲಸಾಧನೆಗಾಗಿ ಹೋಮಗಳು ಮಾಡಲ್ಪಡಬೇಕು. |

---

ಎಂಬಲ್ಲಿ ಯಜಮಾನನಿಂದ ಯಾಗವನ್ನು ಮಾಡಿಸಬೇಕೆಂಬ ಅರ್ಥವಿದ್ದರೂ ಅದನ್ನು 'ಸಃ ಯಜೇತ' ಅಧ್ವರ್ಯುವು ಯಾಗವನ್ನು ಮಾಡಬೇಕು–ಎಂದೇ ಅರ್ಥ ಮಾಡಿಕೊಳ್ಳಬೇಕು.

ವೈರಿನಾಶಕ್ಕಾಗಿ ಮಾಡುವ ಈ ಪ್ರಯೋಗವನ್ನು ಬಂಜರುಭೂಮಿಯಾದ ಚೌಳು ಭೂಮಿಯಲ್ಲಿ ಅಥವಾ ನೀರು ಹರಿದು ಹಳ್ಳವಾಗಿರುವ ನೆಲದಲ್ಲಿ ಮಾಡಬೇಕು. ಇದರಿಂದ ಆ ಹಗೆಯು ಹಿಂಸಿತನಾಗಿ ಸಾಯುತ್ತಾನೆ.

ವರ್ಷ್ಮ ವೈ ರಾಷ್ಟ್ರಭೃತೋ ವರ್ಷ್ಮ ಸ್ಥಲಂ ವರ್ಷ್ಮಣೈವೈನಂ ವರ್ಷ್ಮ ಸಮಾನಾನಾಂ ಗಮಯತಿ ಚತುಶ್ಶರಾವೋ ಭವತಿ

---

ವರ್ಷ್ಮ । ವೈ । ರಾಷ್ಟ್ರಭೃತ ಇತಿ ರಾಷ್ಟ್ರ-ಭೃತಃ । ವರ್ಷ್ಮ । ಸ್ಥಲಮ್ । ವರ್ಷ್ಮಣಾ । ಏವ । ಏನಮ್ । ವರ್ಷ್ಮ । ಸಮಾನಾನಾಮ್ । ಗಮಯತಿ । ಚತುಶ್ಶರಾವ ಇತಿ ಚತುಃ-ಶರಾವಃ । ಭವತಿ ।

---

## ಈ ಹೋಮದಲ್ಲಿ ಅನುಷ್ಠಾನವಿಶೇಷಗಳು; ಪ್ರಶಂಸೆ

| | |
|---|---|
| ರಾಷ್ಟ್ರಭೃತಃ ವರ್ಷ್ಮ ವೈ | ರಾಷ್ಟ್ರಭೃತ್ತುಗಳು ಶ್ರೇಷ್ಠವಾದ ಶರೀರವೇ ಆಗಿರುತ್ತವೆ. |
| ಸ್ಥಲಮ್ ವರ್ಷ್ಮ | ಎತ್ತರವಾದ ಪ್ರದೇಶವೂ ಶ್ರೇಷ್ಠತಾಸೂಚಕವೇ ಆಗಿದೆ. |
| ಏನಮ್ ವರ್ಷ್ಮಣಾ ಏವ ಸಮಾನಾನಾಮ್ ವರ್ಷ್ಮ ಗಮಯತಿ | ಎತ್ತರವಾದ ಪ್ರದೇಶದಿಂದಲೇ ಈ ಯಜಮಾನನನ್ನು ಸಮಾನರ ಮಧ್ಯದಲ್ಲಿ ಶ್ರೇಷ್ಠತೆಗೆ ಹೊಂದಿಸುತ್ತಾನೆ. |
| ಚತುಶ್ಶರಾವಃ ಭವತಿ | ಓದನವು ನಾಲ್ಕು ಮುಚ್ಚಳಗಳಷ್ಟಿರಬೇಕು. |

---

ಈ ಹೋಮದಲ್ಲಿ ಕ್ರೂರವಾಕ್ಯಗಳಿಂದ ವಷಟ್ಕಾರವನ್ನು ಹೇಳಬೇಕು. ವಷಟ್ಕಾರ ಬುದ್ಧಿಯಿಂದ ಅವುಗಳನ್ನು ಸ್ಮರಿಸಿಕೊಳ್ಳಬೇಕು. ವಷಟ್ಕಾರವನ್ನು ಕ್ರೂರವಾಗಿ ಉಚ್ಚರಿಸಬೇಕು. ಈ ಹಿಂಸಾಕರ್ಮಕ್ಕೆ ಅನುಗುಣವಾಗಿ ಕರ್ಮಾಂಗಗಳೂ ಇವೆ.

ಶತ್ರುವಿನ ಅನ್ನವನ್ನು ತಾನು ವಶಪಡಿಸಿಕೊಳ್ಳಬೇಕೆನ್ನುವವನು ಹಗೆಯ ಸಭೆಯಲ್ಲಿ ರಾತ್ರಿಯಲ್ಲಿ ಮಲಗಿ 'ಭುವನಸ್ಯ ಪತೇ' ಎಂಬ ಮಂತ್ರದಿಂದ ಹುಲ್ಲನ್ನು ಸಂಗ್ರಹಿಸಬೇಕು. ಈ ರಾಷ್ಟ್ರಭೃನ್ಮಂತ್ರದಿಂದ ತೃಣಸಂಗ್ರಹವನ್ನು ಮಾಡಿದುದರಿಂದ ಪ್ರಜಾಪತಿಯ

## ದಿಕ್ಷ್ವೇವ ಪ್ರತಿ ತಿಷ್ಠತಿ ಕ್ಷೀರೇ ಭವತಿ

## ರುಚಮೇವಾಸ್ಮಿನ್ದಧಾತ್ಯುದ್ಧರತಿ ಶೃತತ್ವಾಯ

---

ದಿಕ್ಷು । ಏವ । ಪ್ರತೀತಿ । ತಿಷ್ಠತಿ । ಕ್ಷೀರೇ । ಭವತಿ । ರುಚಮ್ । ಏವ । ಅಸ್ಮಿನ್ನ್ । ದಧಾತಿ । ಉದಿತಿ । ಹರತಿ । ಶೃತತ್ವಾಯೇತಿ ಶೃತ-ತ್ವಾಯ ।

| | |
|---|---|
| ದಿಕ್ಷು ಏವ ಪ್ರತಿತಿಷ್ಠತಿ | [ಇದರಿಂದ] ನಾಲ್ಕು ದಿಕ್ಕುಗಳಲ್ಲಿಯೂ ಒಳ್ಳೆಯ ಸ್ಥಿತಿಯನ್ನು ಹೊಂದಿದಂತಾಗುತ್ತದೆ. |
| ಕ್ಷೀರೇ ಭವತಿ | ಹಾಲಿನಲ್ಲಿ ಈ ಬ್ರಹ್ಮೌದನವಿರಬೇಕು. ಹಾಲಿನಲ್ಲಿ ಬೇಯಿಸಬೇಕು. |
| ಅಸ್ಮಿನ್ ರುಚಮ್ ಏವ ದಧಾತಿ | ಇದರಿಂದ ಬ್ರಹ್ಮೌದನದಲ್ಲಿ ರುಚಿಯನ್ನುಂಟು ಮಾಡುತ್ತಾನೆ. |
| ಶೃತತ್ವಾಯ ಉದ್ಧರತಿ | ಬೇಯಿಸುವುದಕ್ಕಾಗಿ ಬೇರೆಯ ಪಾತ್ರೆಯಲ್ಲಿ ಎತ್ತಿಡಬೇಕು. |

---

ಅನುಗ್ರಹವು ಉಂಟಾಗಿ ಹಗೆಯ ಅನ್ನವನ್ನು ಯಜಮಾನನು ವಶಪಡಿಸಿಕೊಳ್ಳುತ್ತಾನೆ.

ಸಂಗ್ರಹಿಸಿದ ಹುಲ್ಲನ್ನು **'ಇದಮಹಮ್...'** ಎಂಬ ಮಂತ್ರದಿಂದ ಒಯ್ಯಬೇಕು. ಇದರಿಂದ ಶತ್ರುವಿನ ಅನ್ನವನ್ನು ತಿನ್ನುವ ಶಕ್ತಿಯನ್ನೇ ಸೆಳೆದುಕೊಂಡು ಹೋಗುತ್ತಾನೆ.

**'ಭುವನಸ್ಯ ಪತೇ...'** ಮುಂತಾದ ಆರು ಮಂತ್ರಗಳನ್ನೂ **'ಇದಮಹಂ....ಹರಾಮಿ'** ಎಂಬುದನ್ನು ಸೇರಿಸಿ ಹೇಳಬೇಕು. ಆರು ಋತುಗಳು ಇವೆಯಷ್ಟೆ. ಆರು ಋತು ದೇವತೆಗಳು ಈ ಯಜಮಾನನಿಗೆ ಅನ್ನವನ್ನು ಒದಗಿಸಿಕೊಡುತ್ತಾರೆ.

ಯಾವನು ಜ್ಯೇಷ್ಠನಾದ ಬಂಧುವಾಗಿದ್ದರೂ ಇತರರಿಂದ ತಿರಸ್ಕೃತನಾಗಿರುತ್ತಾನೆಯೋ ಅವನಿಗಾಗಿ ಈ ರಾಷ್ಟ್ರಭೃದ್ಧೋಮಗಳು ಮಾಡಲ್ಪಡಬೇಕು. ಇದು ಸಮಾನರಲ್ಲಿ ಶ್ರೇಷ್ಠತೆಯನ್ನು ಪಡೆಯಲು ಮಾಡಬೇಕಾದ ಹೋಮಪ್ರಕಾರದ ವಿಧಿಯಾಗಿದೆ. ಇದನ್ನು ಆ ಯಜಮಾನನೇ ಅನುಷ್ಠಿಸಬೇಕು. ಋತ್ವಿಜರು ಸಹಾಯಕರಾಗಿರುತ್ತಾರೆ.

ಪ್ರಶಸ್ತರಾದ, ಶ್ರೇಷ್ಠರಾದ ಬಂಧುಗಳ ನಡುವೆ ತಿರಸ್ಕೃತನಾದವನಂತೆ ಇರುವವನಿಗಾಗಿಯೂ ವಿಹಿತವಾದ ಹೋಮವಿಧಿಯು ಇದಾಗಿದೆ.

ಸರ್ಪಿಷ್ಮಾನ್ಭವತಿ ಮೇಧ್ಯತ್ವಾಯ ಚತ್ವಾರ ಆರ್ಷೇಯಾಃ ಪ್ರಾಶ್ನಂತಿ ದಿಶಾಮೇವ ಜ್ಯೋತಿಷಿ ಜುಹೋತಿ ॥ ೨೮-8 ॥

[ಗ್ರಾಮೀ ಯುನಕ್ತೀಧ್ಮಃ ಸ್ವ ಏವೈನಾನನ್ನಾದ್ಯಂ ಯಚ್ಛಂತ್ಯೇಕಾನ್ನ ಪಂಚಾಶಚ್ಚ ॥]

---

ಸರ್ಪಿಷ್ಮಾನ್ । ಭವತಿ । ಮೇಧ್ಯತ್ವಾಯೇತಿ ಮೇಧ್ಯ-ತ್ವಾಯ । ಚತ್ವಾರಃ । ಆರ್ಷೇಯಾಃ । ಪ್ರೇತಿ । ಅಶ್ನಂತಿ । ದಿಶಾಮ್ । ಏವ । ಜ್ಯೋತಿಷಿ । ಜುಹೋತಿ ॥೨೮॥

---

| | |
|---|---|
| ಸರ್ಪಿಷ್ಮಾನ್ ಭವತಿ ಮೇಧ್ಯತ್ವಾಯ | ಈ ಬ್ರಹ್ಮೌದನವು ತುಪ್ಪದಿಂದ ಕೂಡಿದ್ದಾಗಿರಬೇಕು. ಇದು ಪವಿತ್ರತೆಗೆ ಕಾರಣವಾಗುತ್ತದೆ. |
| ಚತ್ವಾರಃ ಆರ್ಷೇಯಾಃ ಪ್ರಾಶ್ನಂತಿ | ನಾಲ್ವರು ಋಷಿಸಮಾನರಾದ ವೇದಾಂಗವನ್ನು ತಿಳಿದಿರುವ ಬ್ರಾಹ್ಮಣರು ಬ್ರಹ್ಮೌದನವನ್ನು ಭುಂಜಿಸಬೇಕು. |
| ದಿಶಾಮ್ ಏವ ಜ್ಯೋತಿಷಿ ಜುಹೋತಿ | ಇದರಿಂದ ನಾಲ್ಕು ದಿಕ್ಕುಗಳಲ್ಲಿರುವ ಅಗ್ನಿಗಳಲ್ಲಿಯೇ ಹೋಮ ಮಾಡಿದವನಾಗುತ್ತಾನೆ. |

---

ಎತ್ತರವಾದ ಸ್ಥಳದಲ್ಲಿ ಯಜಮಾನನನ್ನು ಕುಳ್ಳಿರಿಸಿ, ರಾಷ್ಟ್ರಭೃದ್ಹೋಮವನ್ನು ಅನುಷ್ಠಿಸುವುದರಿಂದ ಶ್ರೇಷ್ಠವಾಗಿರುವ ಶರೀರದಂತೆ ಈ ಯಜಮಾನನನ್ನು ಶ್ರೇಷ್ಠನನ್ನಾಗಿ ಮಾಡಿದಂತಾಗುತ್ತದೆ.

ಚತುಃಶರಾವ [ನಾಲ್ಕು ಮುಚ್ಚಳಗಳಷ್ಟು] ಪ್ರಮಾಣದ ಬ್ರಹೌದನವನ್ನು ಬೇಯಿಸಿ, ಹೋಮ–ಬ್ರಾಹ್ಮಣಭೋಜನಗಳನ್ನು ಆಚರಿಸುವುದರಿಂದ ಎಲ್ಲ ದಿಕ್ಕುಗಳಲ್ಲಿಯೂ ಯಜಮಾನನನ್ನು ಪ್ರತಿಷ್ಠಿತನಾದವನಂತೆ ಅಧ್ವರ್ಯುವು ಮಾಡುತ್ತಾನೆ. ಹಾಲಿನಲ್ಲಿ ಬೇಯಿಸುವುದರಿಂದ ಬ್ರಹ್ಮೌದನವು ಹೆಚ್ಚು ರುಚಿಯಾಗುತ್ತದೆ. ತುಪ್ಪವನ್ನು ಹಾಕುವುದರಿಂದ

ಪವಿತ್ರವಾಗುತ್ತದೆ. ಬೇರೆಯ ಪಾತ್ರೆಯಲ್ಲಿ ಹಾಕಿ ಬೇಯಿಸುವುದರಿಂದ ಚೆನ್ನಾಗಿ ಪಕ್ವವಾಗುತ್ತದೆ. ನಾಲ್ವರು ವೇದ-ವೇದಾಂಗ ಬಲ್ಲ ಬ್ರಾಹ್ಮಣರನ್ನು ಭೋಜನ ಮಾಡಿಸುವುದರಿಂದ ನಾಲ್ಕು ದಿಕ್ಕುಗಳಲ್ಲಿಯೂ ಇರುವ ಅಗ್ನಿಗಳಲ್ಲಿ ಹೋಮವನ್ನು ಮಾಡಿದಂತೆಯೇ ಆಗುತ್ತದೆ. ಹೀಗೆ ಆಚರಿಸುವುದರಿಂದ ಯಜಮಾನನು ಸಮಾನರಲ್ಲಿ ಶ್ರೇಷ್ಠನಾಗುತ್ತಾನೆ.

## ॥ ನವಮೋಽನುವಾಕಃ ॥

ದೇವಿಕಾ ನಿರ್ವಪೇತ್ಪ್ರಜಾಕಾಮಶ್ಛಂದಾಗ್ಂಸಿ ವೈ
ದೇವಿಕಾಶ್ಛಂದಾಗ್ಂಸೀವ ಖಲು ವೈ ಪ್ರಜಾ-

---

ದೇವಿಕಾಃ । ನಿರಿತಿ । ವಪೇತ್ । ಪ್ರಜಾಕಾಮ ಇತಿ ಪ್ರಜಾ–ಕಾಮಃ । ಛಂದಾಗ್ಂಸಿ । ವೈ । ದೇವಿಕಾಃ । ಛಂದಾಗ್ಂಸಿ । ಇವ । ಖಲು । ವೈ । ಪ್ರಜಾ ಇತಿ ಪ್ರ–ಜಾಃ ।

---

ಎಂಟನೆಯ ಅನುವಾಕದಲ್ಲಿ ರಾಷ್ಟ್ರಭೃದ್ಧೋಮಗಳಿಗೆ ಸಂಬಂಧಿಸಿದ ವಿಷಯಗಳು ಹೇಳಲ್ಪಟ್ಟವು. ಈ ಒಂಬತ್ತನೆಯ ಅನುವಾಕದಲ್ಲಿ ರಾಜಸೂಯಾಂಗವಾದ ದೇವಿಕಾಹೋಮಗಳು ಹೇಳಲ್ಪಟ್ಟವೆ.

---

| ಬ್ರಾಹ್ಮಣ | ವಿವರಣೆ |
|---|---|
| ಪ್ರಜಾಕಾಮಃ ದೇವಿಕಾಃ ನಿರ್ವಪೇತ್ | ಪುತ್ರಾದಿಪ್ರಜೆಗಳನ್ನು ಬಯಸುವವನು ದೇವಿಕೆಗಳೆಂದು ಪ್ರಸಿದ್ಧವಾದ ಹವಿರ್ಯಾಗಗಳನ್ನು ಅನುಷ್ಠಿಸಬೇಕು. |
| ಛಂದಾಗ್ಂಸಿ ವೈ ದೇವಿಕಾಃ | ದೇವಿಕೆಗಳು ಗಾಯತ್ರ್ಯಾದಿಗಳೆಂದು ಹೇಳಲ್ಪಟ್ಟವೆ. |
| ಪ್ರಜಾಃ ಛಂದಾಗ್ಂಸಿ ಇವ ಖಲು ವೈ | ಪ್ರಜೆಗಳೂ ಸುಖಪ್ರದವಾಗಿರುವುದರಿಂದ ಛಂದಸ್ಸುಗಳೇ ಆಗಿದೆ. |

---

ಪ್ರಜಾಕಾಮನಾದವನು ಫಲಪ್ರಕಾಶಕವಾದುದರಿಂದಲೂ, ಅನುಮತಿಯೇ ಮುಂತಾದ ದೇವತೆಗಳಿಗೆ ವಿಹಿತವಾಗಿರುವುದರಿಂದಲೂ ದೇವಿಕೆಗಳೆಂದು ಪ್ರಸಿದ್ಧವಾಗಿರುವ

ಛಂದೋಭಿರೇವಾಸ್ಮೈ ಪ್ರಜಾಃ ಪ್ರ ಜನಯತಿ ಪ್ರಥಮಂ

ಧಾತಾರಂ ಕರೋತಿ ಮಿಥುನೀ ಏವ ತೇನ

ಕರೋತ್ಯನ್ವೇವಾಸ್ಮಾ ಅನುಮತಿರ್ಮನ್ಯತೇ ರಾತೇ ರಾಕಾ

---

ಛಂದೋಭಿರಿತಿ ಛಂದಃ-ಭಿಃ । ಏವ । ಅಸ್ಮೈ । ಪ್ರಜಾ ಇತಿ ಪ್ರ-ಜಾಃ । ಪ್ರೇತಿ ।

ಜನಯತಿ । ಪ್ರಥಮಮ್ । ಧಾತಾರಂ । ಕರೋತಿ । ಮಿಥುನೀ । ಏವ । ತೇನ । ಕರೋತಿ ।

ಅನ್ವಿತಿ । ಏವ । ಅಸ್ಮೈ । ಅನುಮತಿರಿತ್ಯನು-ಮತಿಃ । ಮನ್ಯತೇ । ರಾತೇ । ರಾಕಾ ।

---

| | |
|---|---|
| ಛಂದೋಭಿಃ ಏವ ಅಸ್ಮೈ ಪ್ರಜಾಃ ಪ್ರಜನಯತಿ | ಛಂದೋರೂಪರಾದ ದೇವಿಕೆಗಳಿಂದಲೇ ಛಂದೋರೂಪರಾದ ಪ್ರಜೆಗಳನ್ನು ಈ ಯಜಮಾನನಿಗೆ ಅಧ್ವರ್ಯುವು ಸಂಪಾದಿಸಿಕೊಡುತ್ತಾನೆ. |
| ಪ್ರಥಮಮ್ ಧಾತಾರಮ್ ಕರೋತಿ | ಧಾತೃಹವಿರ್ಯಾಗವನ್ನು ಮೊದಲನೆಯದನ್ನಾಗಿ ಮಾಡುತ್ತಾನೆ. |
| ತೇನ ಏವ ಮಿಥುನೀ ಕರೋತಿ | ಆದರಿಂದ ಸ್ತ್ರೀಪುರುಷಯುಗ್ಮವನ್ನೇ ಮಾಡಿದವನಾಗುತ್ತಾನೆ. |
| ಅನುಮತಿಃ ಅಸ್ಮೈ ಅನು ಮನ್ಯತೇ ಏವ | ಅನುಮತಿದೇವಿಯು ಈ ಸ್ತ್ರೀಪುರುಷಸಂಯೋಗವನ್ನು ಅನುಮತಿಸುತ್ತಾಳೆ. |
| ರಾಕಾ ರಾತೇ | ರಾಕಾದೇವಿಯು ಪ್ರಜೆಯನ್ನು ಕೊಡುತ್ತಾಳೆ. |

---

ಐದು ಹವಿರ್ಯಾಗಗಳನ್ನು ಹವಿರ್ನಿರ್ವಾಪವನ್ನು ಮಾಡಿ ಅನುಷ್ಠಿಸಬೇಕು.

ಈ ಯಾಗಗಳಲ್ಲಿ ಧಾತೃಯಾಗವನ್ನು ಬಿಟ್ಟು ಉಳಿದ ಯಾಗದೇವತೆಗಳು ಸ್ತ್ರೀಲಿಂಗದಲ್ಲಿರುವುದರಿಂದ ಈ ಯಾಗಗಳು ದೇವಿಕೆಗಳಾಗಿವೆ. ಇವುಗಳಲ್ಲಿ ಧಾತೃಯಾಗವು ಮೊದಲನೆಯದು. ಧಾತೃಶಬ್ದವು ಪುಲ್ಲಿಂಗವಾಗಿರುವುದರಿಂದ ಮುಂದಿನ

ಪ್ರ ಸಿನೀವಾಲೀ ಜನಯತಿ ಪ್ರಜಾಸ್ವೇವ ಪ್ರಜಾತಾಸು ಕುಹ್ವಾ ವಾಚಂ ದಧಾತ್ಯೇತಾ ಏವ ನಿರ್ವಪೇತ್ಪಶುಕಾಮಶ್ಛಂದಾಗ್ಂಸಿ ವೈ ದೇವಿಕಾಶ್ಛಂದಾಗ್ಂಸೀ[..ದಾಗ್ಂಸಿ(೨೯)ಇವ]ವ ಖಲು ವೈ ಪಶವ

---

ಪ್ರೇತಿ । ಸಿನೀವಾಲೀ । ಜನಯತಿ । ಪ್ರಜಾಸ್ವಿತಿ ಪ್ರ-ಜಾಸು । ಏವ । ಪ್ರಜಾತಾಸ್ವಿತಿ ಪ್ರ-ಜಾತಾಸು । ಕುಹ್ವಾ । ವಾಚಮ್ । ದಧಾತಿ । ಏತಾಃ । ಏವ । ನಿರಿತಿ । ವಪೇತ್ । ಪಶುಕಾಮ ಇತಿ ಪಶು-ಕಾಮಃ । ಛಂದಾಗ್ಂಸಿ । ವೈ । ದೇವಿಕಾಃ । ಛಂದಾಗ್ಂಸಿ । (೨೯) । ಇವ । ಖಲು । ವೈ । ಪಶವಃ ।

---

| | |
|---|---|
| ಸಿನೀವಾಲೀ ಪ್ರ ಜನಯತಿ | ಸಿನೀವಾಲಿದೇವಿಯು ಪ್ರಜೆಗಳು ಉತ್ಪನ್ನವಾಗುವಂತೆ ಮಾಡುತ್ತಾಳೆ. |
| ಪ್ರಜಾಸು ಪ್ರಜಾತಾಸು ಏವ ಕುಹ್ವಾ ವಾಚಮ್ ದಧಾತಿ | ಹುಟ್ಟಿದ ಪ್ರಜೆಗಳಲ್ಲಿ ಅಧ್ವರ್ಯುವು ಕುಹೂದೇವಿಯ ಅನುಗ್ರಹದಿಂದ ಮಾತಾಡುವ ಶಕ್ತಿಯನ್ನುಂಟುಮಾಡುತ್ತಾನೆ. |

### ಪಶುಕಾಮನಿಗಾಗಿ ದೇವಿಕಾಯಾಗವಿಧಿ;ಬ್ರಾಹ್ಮಣ

| | |
|---|---|
| ಪಶುಕಾಮಃ ಏತಾಃ ಏವ ನಿರ್ವಪೇತ್ | ಪಶುಗಳನ್ನು ಅಪೇಕ್ಷಿಸುವವನು ಈ ದೇವಿಕಾಯಾಗಗಳನ್ನೇ ಮಾಡಬೇಕು. |
| ಛಂದಾಗ್ಂಸಿ ವೈ ದೇವಿಕಾಃ | ದೇವಿಕಾದೇವತೆಗಳು ಛಂದೋರೂಪರು. |
| ಪಶವಃ ಛಂದಾಗ್ಂಸಿ ಇವ ಖಲು ವೈ | ಪಶುಗಳು ಛಂದಸ್ಸುಗಳಂತೆ ಸುಖಪ್ರದಗಳೇ ಆಗಿವೆ. |

ಛನ್ದೋಭಿರೇವಾಸ್ಮೈ ಪಶೂನ್ಪ್ರಜನಯತಿ ಪ್ರಥಮಂ ಧಾತಾರಂ ಕರೋತಿ ಪ್ರೈವ ತೇನ ವಾಪಯತ್ಯ ನ್ವೇವಾಸ್ಮಾ ಅನುಮತಿರ್ಮನ್ಯತೇ ರಾತೇ ರಾಕಾ

---

ಛಂದೋಭಿರಿತಿ ಛಂದಃ-ಭಿಃ । ಏವ । ಅಸ್ಮೈ । ಪಶೂನ್ । ಪ್ರೇತಿ । ಜನಯತಿ । ಪ್ರಥಮಮ್ । ಧಾತಾರಮ್ । ಕರೋತಿ । ಪ್ರೇತಿ । ಏವ । ತೇನ । ವಾಪಯತಿ । ಅನ್ವಿತಿ । ಏವ । ಅಸ್ಮೈ । ಅನುಮತಿರಿತ್ಯನು-ಮತಿಃ । ಮನ್ಯತೇ । ರಾತೇ । ರಾಕಾ ।

---

| | |
|---|---|
| ಛಂದೋಭಿಃ ಏವ ಅಸ್ಮೈ ಪಶೂನ್ ಪ್ರಜನಯತಿ | ಛಂದೋರೂಪವಾದ ಈ ಯಾಗಗಳಿಂದಲೇ ಈ ಯಜಮಾನನಿಗೆ ಅಧ್ವರ್ಯುವು ಪಶುಗಳನ್ನು ಉತ್ಪಾದಿಸುತ್ತಾನೆ. |
| ಪ್ರಥಮಮ್ ಧಾತಾರಮ್ ಕರೋತಿ | ಧಾತೃಯಾಗವನ್ನು ಈ ಐದು ಯಾಗಗಳಲ್ಲಿ ಮೊದಲನೆಯದನ್ನಾಗಿ ಅನುಷ್ಠಿಸುತ್ತಾನೆ. |
| ತೇನ ಪ್ರ ವಾಪಯತಿ ಏವ | ಸೃಷ್ಟಿಕರ್ತನಾದ ಧಾತೃದೇವನಿಂದ ಪಶುಗಳಲ್ಲಿ ಬೀಜೋತ್ಪತ್ತಿಯಾಗುವಂತೆ ಮಾಡುತ್ತಾನೆ. |
| ಅಸ್ಮೈ ಅನುಮತಿಃ ಅನು ಮನ್ಯತೇ ಏವ | ಅನುಮತಿದೇವಿಯು ಪಶೂತ್ಪಾದನೆಯನ್ನು ಅನುಮತಿಸುತ್ತಾಳೆ. |
| ರಾಕಾ ರಾತೇ | ರಾಕಾದೇವಿಯು ಪಶುಗಳನ್ನು ಅನುಗ್ರಹಿಸುತ್ತಾಳೆ. |

---

ಅನುಮತಿ ಮುಂತಾದ ನಾಲ್ಕು ಯಾಗದೇವತೆಗಳು ಸ್ತ್ರೀಲಿಂಗವಾಗಿರುವುದರಿಂದ ಸ್ತ್ರೀಪುರುಷಸಂಯೋಗವಾದಂತಾಯಿತು.

ಅನುಮತಿ, ರಾಕಾ, ಸಿನೀವಾಲೀ, ಕುಹೂ-ಈ ದೇವತೆಗಳ ಅನುಗ್ರಹದಿಂದ ಪ್ರಜೋತ್ಪತ್ತಿಯಾಗಿ ಆ ಪ್ರಜೆಯು ಮಾತಾಡುವಂತೆಯೂ ಆಯಿತು. ಹೀಗೆ ಯಜಮಾನನ ಕಾಮನೆಯು ಪೂರ್ಣವಾಯಿತು.

ಪ್ರ ಸಿನೀವಾಲೀ ಜನಯತಿ ಪಶೂನೇವ ಪ್ರಜಾತಾನ್ಕುಹ್ವಾ ಪ್ರತಿಷ್ಠಾಪಯತ್ಯೇತಾ ಏವ ನಿರ್ವಪೇದ್ಗ್ರಾಮಕಾಮಶ್ಛಂದಾಗ್ಂಸಿ ವೈ ದೇವಿಕಾಶ್ಛಂದಾಗ್ಂಸೀವ ಖಲು ವೈ ಗ್ರಾಮ

---

ಪ್ರೇತಿ । ಸಿನೀವಾಲೀ । ಜನಯತಿ । ಪಶೂನ್ । ಏವ । ಪ್ರಜಾತಾನಿತಿ ಪ್ರ-ಜಾತಾನ್ । ಕುಹ್ವಾ । ಪ್ರತೀತಿ । ಸ್ಥಾಪಯತಿ । ಏತಾಃ । ಏವ । ನಿರಿತಿ । ವಪೇತ್ । ಗ್ರಾಮಕಾಮ ಇತಿ ಗ್ರಾಮ-ಕಾಮಃ । ಛಂದಾಗ್ಂಸಿ । ವೈ । ದೇವಿಕಾಃ । ಛಂದಾಗ್ಂಸಿ । ಇವ । ಖಲು । ವೈ । ಗ್ರಾಮಃ ।

---

| | |
|---|---|
| ಸಿನೀವಾಲೀ ಪ್ರಜನಯತಿ | ಸಿನೀವಾಲೀದೇವಿಯು ತೊಂದರೆಯಿಲ್ಲದಂತೆ ಪಶುಗಳು ಹುಟ್ಟುವಂತೆ ಮಾಡುತ್ತಾಳೆ. |
| ಪ್ರಜಾತಾನ್ ಪಶೂನ್ ಏವ ಕುಹ್ವಾ ಪ್ರತಿಷ್ಠಾಪಯತಿ | ಅಧ್ವರ್ಯುವು ಕುಹೂದೇವಿಯ ಅನುಗ್ರಹದಿಂದ [ಪಶುಗಳು ತೃಣೋದಕಾದಿಗಳನ್ನು ಪಡೆದು] ಪಶುಗಳು ಚೆನ್ನಾಗಿ ಬಾಳುವಂತೆ ಮಾಡುತ್ತಾನೆ. |

### ಗ್ರಾಮಕಾಮನಿಗಾಗಿ ದೇವಿಕಾವಿಧಿ; ಬ್ರಾಹ್ಮಣ

| | |
|---|---|
| ಗ್ರಾಮಕಾಮಃ ಏತಾಃ ಏವ ನಿರ್ವಪೇತ್ | ಗ್ರಾಮಸ್ವಾಮಿಯಾಗಬೇಕೆನ್ನುವವನು ಈ ದೇವಿಕಾ ಹವಿರ್ಯಾಗಗಳನ್ನು ಅನುಷ್ಠಿಸಬೇಕು. |
| ದೇವಿಕಾಃ ವೈ ಛಂದಾಗ್ಂಸಿ | ದೇವಿಕಾಯಾಗಗಳು ಛಂದೋರೂಪವಾಗಿವೆ. |
| ಗ್ರಾಮಃ ಛಂದಾಗ್ಂಸಿ ಇವ ಖಲು ವೈ | ಯಾಗಗಳಿಂದ ಲಭ್ಯವಾಗುವ ಗ್ರಾಮವೂ ಛಂದೋರೂಪವೇ ಆಗಿದೆ. |

---

ಪಶುಕಾಮನಾದವನು ಈ ದೇವಿಕಾಯಾಗವನ್ನು ಮಾಡಬೇಕು. ಮುಂದಿನ ಬ್ರಾಹ್ಮಣದಲ್ಲಿ ಅನುಮತಿ, ರಾಕಾ, ಸಿನೀವಾಲೀ ಕುಹೂಗಳನ್ನು ಗಾಯತ್ರೀ, ತ್ರಿಷ್ಟುಕ್, ಜಗತೀ, ಅನುಷ್ಟುಪ್ ಎಂದು ಛಂದೋರೂಪವಾಗಿ ವರ್ಣಿಸಲಾಗಿದೆ. ಧಾತೃದೇವ

ಶ್ಛಂದೋಭಿರೇವಾಸ್ಮೈ ಗ್ರಾಮಮ[ಗ್ರಾಮಮ್(೩೦)ಅವ]ಮವ

ರುಂಧೇ ಮಧ್ಯತೋ ಧಾತಾರಂ ಕರೋತಿ ಮಧ್ಯತ ಏವೈನಂ

ಗ್ರಾಮಸ್ಯ ದಧಾತ್ಯೇತಾ ಏವ ನಿರ್ವಪೇಜ್ಜ್ಯೋಗಾಮಯಾವೀ

---

ಛಂದೋಭಿರಿತಿ ಛಂದಃ-ಭಿಃ । ಏವ । ಅಸ್ಮೈ । ಗ್ರಾಮಮ್ । (೩೦) । ಅವೇತಿ ।

ರುಂಧೇ । ಮಧ್ಯತಃ । ಧಾತಾರಮ್ । ಕರೋತಿ । ಮಧ್ಯತಃ । ಏವ । ಏನಮ್ ।

ಗ್ರಾಮಸ್ಯ । ದಧಾತಿ । ಏತಾಃ । ಏವ । ನಿರಿತಿ । ವಪೇತ್ । ಜ್ಯೋಗಾಮಯಾವೀತಿ

ಜ್ಯೋಕ್-ಆಮಯಾವೀ ।

---

| | |
|---|---|
| ಛಂದೋಭಿಃ ಏವ ಅಸ್ಮೈ ಗ್ರಾಮಮ್ ಅವರುಂಧೇ | [ಅಧ್ವರ್ಯುವು] ಯಜಮಾನನಿಗಾಗಿ ಛಂದಸ್ಸುಗಳಿಂದಲೇ ಗ್ರಾಮವನ್ನು ಅಧೀನವನ್ನಾಗಿ ಮಾಡಿ ಕೊಡುತ್ತಾನೆ. |
| ಮಧ್ಯತಃ ಧಾತಾರಮ್ ಕರೋತಿ | ಧಾತೃಹವಿರ್ಯಾಗವನ್ನು ಮಧ್ಯದಲ್ಲಿ ಅನುಷ್ಠಿಸಬೇಕು. |
| ಏನಮ್ ಗ್ರಾಮಸ್ಯ ಮಧ್ಯತಃ ಏವ ದಧಾತಿ | ಯಜಮಾನನನ್ನು ಗ್ರಾಮದ ಮಧ್ಯದಲ್ಲಿ ಮುಖ್ಯಸ್ಥನನ್ನಾಗಿ ಮಾಡುತ್ತಾನೆ. |

### ರೋಗಪರಿಹಾರಕಾಮನೆಯಿಂದ ದೇವಿಕಾಹವಿಸ್ಸುಗಳ ಯಾಗವಿಧಾನ-ಬ್ರಾಹ್ಮಣ

| | |
|---|---|
| ಜ್ಯೋಕ್ ಆಮಯಾವೀ | ದೀರ್ಘಕಾಲ ವ್ಯಾಧಿಪೀಡಿತನಾದವನು |
| ಏತಾಃ ಏವ ನಿರ್ವಪೇತ್ | ಈ ದೇವಿಕಾಯಾಗಗಳನ್ನೇ ಅನುಷ್ಠಿಸಬೇಕು. |

---

ನನ್ನು ವಷಟ್ಕಾರವೆಂದು ಹೇಳಲಾಗಿದೆ.

ಛಂದಾಗ್ಂಸಿ ವೈ ದೇವಿಕಾಶ್ಛಂದಾಗ್ಂಸಿ ಖಲು ವಾ ಏತಮಭಿ ಮನ್ಯಂತೇ ಯಸ್ಯ ಜ್ಯೋಗಾಮಯತಿ ಛಂದೋಭಿ ರೇವೈನಮಗದಂ ಕರೋತಿ ಮಧ್ಯತೋ ಧಾತಾರಂ ಕರೋತಿ

---

ಛಂದಾಗ್ಂಸಿ । ವೈ । ದೇವಿಕಾಃ । ಛಂದಾಗ್ಂಸಿ । ಖಲು । ವೈ । ಏತಮ್ । ಅಭೀತಿ । ಮನ್ಯಂತೇ । ಯಸ್ಯ । ಜ್ಯೋಕ್ । ಆಮಯತಿ । ಛಂದೋಭಿರಿತಿ ಛಂದಃ–ಭಿಃ । ಏವ । ಏನಮ್ । ಅಗದಮ್ । ಕರೋತಿ । ಮಧ್ಯತಃ । ಧಾತಾರಮ್ । ಕರೋತಿ ।

---

| | |
|---|---|
| ದೇವಿಕಾಃ ಛಂದಾಗ್ಂಸಿ ವೈ | ದೇವಿಕಾಹವಿಸ್ಸುಗಳು ಛಂದೋರೂಪಗಳು. |
| ಛಂದಾಗ್ಂಸಿ ಖಲು ವೈ ಏತಮ್ ಅಭಿಮನ್ಯಂತೇ | ದೀರ್ಘಕಾಲ ವ್ಯಾಧಿಪೀಡಿತನನ್ನು ಛಂದಸ್ಸುಗಳು ಕೋಪಗೊಂಡು ತಿರಸ್ಕರಿಸುತ್ತವೆ. |
| ಏನಮ್ ಛಂದೋಭಿಃ ಏವ ಅಗದಮ್ ಕರೋತಿ | ಛಂದೋದೇವತೆಗಳಿಂದಲೇ ಈ ಯಜಮಾನನನ್ನು ಅಧ್ವರ್ಯುವು ರೋಗರಹಿತನನ್ನಾಗಿ ಮಾಡುತ್ತಾನೆ. |
| ಮಧ್ಯತಃ ಧಾತಾರಮ್ ಕರೋತಿ | ಈ ಐದು ಹವಿಸ್ಸುಗಳಲ್ಲಿ ಧಾತೃಹವಿರ್ಯಾಗವನ್ನು ಮಧ್ಯದಲ್ಲಿ ಅನುಷ್ಠಿಸಬೇಕು. |

---

ಛಂದೋಯುಕ್ತವಾದ ಯಾಗಗಳು ಯಜಮಾನನು ಅಪೇಕ್ಷಿಸಿದ ಫಲಗಳನ್ನು ಕೊಟ್ಟು ಸುಖಸಾಧನಗಳಾಗಿವೆ. ಹಾಗೆಯೇ ಪಶುಗಳೂ ಯಾಗಕ್ಕೆ ಬೇಕಾದ ಆಜ್ಯಾದಿದ್ರವ್ಯಗಳನ್ನು ಒದಗಿಸಿಕೊಡುತ್ತವೆ. ಐಹಿಕಸುಖವನ್ನೂ ಕೊಡುತ್ತವೆ. ಈ ದೇವಿಕಾಹವಿಸ್ಸುಗಳು ಪಶುಸಾಧನಗಳಾಗಿವೆ.

ಗ್ರಾಮಸ್ವಾಮಿಯಾಗಬೇಕೆನ್ನುವವನು ಈ ದೇವಿಕಾಹವಿರ್ಯಾಗವನ್ನು ಅನುಷ್ಠಿಸಬೇಕು. ಐದು ದೇವಿಕಾಹವಿರ್ಯಾಗಗಳಲ್ಲಿ ಅನುಮತಿಯಾಗ, ರಾಕಾಯಾಗಗಳ ಅನಂತರ ಧಾತೃಯಾಗವನ್ನು ಅನುಷ್ಠಿಸಿ ಬಳಿಕ ಸಿನೀವಾಲೀ ಕುಹೂಯಾಗಗಳನ್ನು ಮಾಡಬೇಕು.

ಮಧ್ಯತೋ ವಾ ಏತಸ್ಯಾಕ್ಲ್ಪ್ತಂ ಯಸ್ಯ ಜ್ಯೋಗಾಮಯತಿ

ಮಧ್ಯತ ಏವಾಸ್ಯ ತೇನ ಕಲ್ಪಯತ್ಯೇತಾ ಏವ ನಿ[ನಿಃ(೩೧)

ವಪೇದ್ಯಂ]ರ್ವಪೇದ್ಯಂ ಯಜ್ಞೋ ನೋಪನಮೇ-

---

ಮಧ್ಯತಃ । ವೈ । ಏತಸ್ಯ । ಅಕ್ಲ್ಪ್ತಮ್ । ಯಸ್ಯ । ಜ್ಯೋಕ್ । ಆಮಯತಿ ।

ಮಧ್ಯತಃ । ಏವ । ಅಸ್ಯ । ತೇನ । ಕಲ್ಪಯತಿ । ಏತಾಃ । ಏವ । ನಿರಿತಿ ।(೩೧)।

ವಪೇತ್ । ಯಮ್ । ಯಜ್ಞಃ । ನಃ । ಉಪನಮೇದಿತ್ಯುಪ-ನಮೇತ್ ।

---

| | |
|---|---|
| ಯಸ್ಯ ಜ್ಯೋಕ್ ಆಮಯತಿ | ಯಾವನು ಚಿರವ್ಯಾಧಿಪೀಡಿತನೋ |
| ಏತಸ್ಯ ಮಧ್ಯತಃ ವೈ | ಈತನ ದೇಹದ ಮಧ್ಯಭಾಗದಲ್ಲಿ/ಉದರದಲ್ಲಿ |
| ಅಕ್ಲ್ಪ್ತಮ್ | ಅಸಾಮರ್ಥ್ಯವಿರುತ್ತದೆ. |
| ತೇನ ಅಸ್ಯ ಮಧ್ಯತಃ ಏವ ಕಲ್ಪಯತಿ | ಧಾತೃದೇವನ ಅನುಗ್ರಹದಿಂದ ದೇಹದ ಮಧ್ಯ ಭಾಗವು ಸಮರ್ಥವಾಗುವಂತೆ ಅಧ್ವರ್ಯುವು ಮಾಡುತ್ತಾನೆ. |

ವಿಘ್ನಗಳಿಂದ ಸೋಮಯಾಗಗಳನ್ನು ಮಾಡಲಾಗದವನಿಗೆ ಈ ದೇವಿಕಾ ಹವಿರ್ಯಾಗಗಳ ವಿಧಿ;ಪ್ರಶಂಸೆ

| | |
|---|---|
| ಯಮ್ ಯಜ್ಞಃ ನಃ ಉಪನಮೇತ್ | ಯಾವ ಯಜಮಾನನನ್ನು [ವಿಘ್ನಬಾಹುಳ್ಯದಿಂದ] ಯಜ್ಞವು ಹೊಂದುವುದಿಲ್ಲವೋ |
| [ಸಃ] ಏತಾಃ ಏವ ನಿರ್ವಪೇತ್ | [ಅವನು] ಈ ಐದು ದೇವಿಕಾಹವಿರ್ಯಾಗಗಳನ್ನು ಅನುಷ್ಠಿಸಬೇಕು. |

---

ಹೀಗೆ ಮಧ್ಯದಲ್ಲಿ ಧಾತೃಯಾಗವನ್ನು ಮಾಡುವುದರಿಂದ ಯಜಮಾನನ ಇಷ್ಟಸಿದ್ಧಿಯಾಗುತ್ತದೆ. ಯಜಮಾನನು ಗ್ರಾಮಸ್ವಾಮಿಯಾಗುತ್ತಾನೆ.

ಛಂದಾಗ್ಂಸಿ ವೈ ದೇವಿಕಾಶ್ಛಂದಾಗ್ಂಸಿ ಖಲು ವಾ
ಏತಂ ನೋಪನಮಂತಿ ಯಂ ಯಜ್ಞೋ ನೋಪನಮತಿ
ಪ್ರಥಮಂ ಧಾತಾರಂ ಕರೋತಿ ಮುಖತ ಏವಾಸ್ಮೈ
ಛಂದಾಗ್ಂಸಿ ದಧಾತ್ಯುಪೈನಂ ಯಜ್ಞೋ ನಮ–

---

ಛಂದಾಗ್ಂಸಿ । ವೈ । ದೇವಿಕಾಃ । ಛಂದಾಗ್ಂಸಿ । ಖಲು । ವೈ । ಏತಮ್ । ನ । ಉಪೇತಿ । ನಮಂತಿ । ಯಮ್ । ಯಜ್ಞಃ । ನ । ಉಪನಮತೀತ್ಯುಪ–ನಮತಿ । ಪ್ರಥಮಮ್ । ಧಾತಾರಮ್ । ಕರೋತಿ । ಮುಖತಃ । ಏವ । ಅಸ್ಮೈ । ಛಂದಾಗ್ಂಸಿ । ದಧಾತಿ । ಉಪೇತಿ । ಏನಮ್ । ಯಜ್ಞಃ । ನಮತಿ ।

---

| | |
|---|---|
| **ಯಮ್ ಯಜ್ಞಃ ನ ಉಪನಮತಿ** | ಯಾವನನ್ನು ಯಾಗವು ಹೊಂದುವುದಿಲ್ಲವೋ |
| **ಏತಮ್ ಛಂದಾಗ್ಂಸಿ ಖಲು ವೈ ನ ಉಪನಮಂತಿ** | ಅವನನ್ನು [ಯಜ್ಞದ ಸಾಧನವಾದ] ಛಂದಸ್ಸುಗಳು ಹೊಂದುವುದಿಲ್ಲ. |
| **ಛಂದಾಗ್ಂಸಿ ವೈ ದೇವಿಕಾಃ** | ದೇವಿಕಾಹವಿಸ್ಸುಗಳು ಛಂದೋರೂಪಗಳು. |
| **ಧಾತಾರಮ್ ಪ್ರಥಮಮ್ ಕರೋತಿ** | [ದೇವಿಕಾ ಹವಿರ್ಯಾಗದಲ್ಲಿ] ಮೊದಲು ಧಾತೃಯಾಗವನ್ನು ಅನುಷ್ಠಿಸಬೇಕು. |
| **ಅಸ್ಮೈ ಮುಖತಃ ಏವ ಛಂದಾಗ್ಂಸಿ ದಧಾತಿ** | ಇದರಿಂದ ಉಪಕ್ರಮದಲ್ಲಿಯೇ ಛಂದಸ್ಸುಗಳನ್ನು ಹೊಂದಿದಂತೆ ಆಯಿತು/ಛಂದಸ್ಸುಗಳನ್ನು ಹೊಂದಿಸುತ್ತಾನೆ. |
| **ಏನಮ್ ಯಜ್ಞಃ ಉಪನಮತಿ** | ಯಜಮಾನನನ್ನು ಯಜ್ಞವು ಬಂದು ಸೇರುತ್ತದೆ. |

---

ಚಿರವ್ಯಾಧಿಪೀಡಿತನಾದವನು ಈ ದೇವಿಕಾಹವಿರ್ಯಾಗಗಳನ್ನು ಅನುಷ್ಠಿಸಬೇಕು.

ತ್ರೇತಾ ಏವ ನಿರ್ವಪೇದೀಜಾನಶ್ಛಂದಾಗ್ಂಸಿ ವೈ

ದೇವಿಕಾ ಯಾತಯಾಮಾನೀವ ಖಲು ವಾ ಏತಸ್ಯ

ಛಂದಾಗ್ಂಸಿ ಯ ಈಜಾನ ಉತ್ತಮಂ ಧಾತಾರಂ

ಕರೋತ್ಯು[ಕರೋತಿ (೩೨) ಉಪರಿಷ್ಟಾ]ಪರಿಷ್ಟಾ-

---

ಏತಾಃ । ಏವ । ನಿರಿತಿ । ವಪೇತ್ । ಈಜಾನಃ । ಛಂದಾಗ್ಂಸಿ । ವೈ । ದೇವಿಕಾಃ ।

ಯಾತಯಾಮಾನೀತಿ ಯಾತ-ಯಾಮಾನಿ । ಇವ । ಖಲು । ವೈ । ಏತಸ್ಯ ।

ಛಂದಾಗ್ಂಸಿ । ಯಃ । ಈಜಾನಃ । ಉತ್ತಮಮಿತ್ಯುತ್-ತಮಮ್ । ಧಾತಾರಮ್ ।

ಕರೋತಿ ।(೩೨)। ಉಪರಿಷ್ಟಾತ್ ।

---

### ಯಾಗ ಮಾಡಿದವನು ಮತ್ತೊಂದು ಯಾಗವನ್ನು ಅನುಷ್ಠಿಸುವ ಮೊದಲು ಈ ಯಾಗದ ವಿಧಿ-ಬ್ರಾಹ್ಮಣ

| | |
|---|---|
| **ಈಜಾನಃ ಏತಾಃ ಏವ ನಿರ್ವಪೇತ್** | ಯಾಗವನ್ನು ಮಾಡಿದವನು [ಮತ್ತೊಂದು ಯಾಗವನ್ನು ಮಾಡುವ ಮೊದಲು] ಈ ದೇವಿಕಾ ಯಾಗಗಳನ್ನು ಮಾಡಬೇಕು. |
| **ಯಃ ಈಜಾನಃ** | ಯಾವನು ಯಾಗವನ್ನು ಅನುಷ್ಠಿಸಿರುವನೋ |
| **ಏತಸ್ಯ ಛಂದಾಗ್ಂಸಿ** | ಅವನ ಯಾಗದ ಛಂದಸ್ಸುಗಳು ಸಾರರಹಿತವಾಗಿ |
| **ಯಾತಯಾಮಾನಿ ಇವ ಖಲು ವೈ** | ಇರುವಂತಾಗುತ್ತವೆ. |
| **ಧಾತಾರಮ್ ಉತ್ತಮಮ್ ಕರೋತಿ** | ಈ ಯಾಗಪಂಚಕದಲ್ಲಿ ಧಾತೃಯಾಗವನ್ನು ಕೊನೆಯದನ್ನಾಗಿ ಮಾಡಬೇಕು. |
| **ಉಪರಿಷ್ಟಾತ್ ಏವ** | ಅನಂತರದಲ್ಲಿಯೇ |

ದೇವಾಸ್ಮೈ ಛಂದಾಗ್‌ಂಸ್ಯಯಾತಯಾಮಾನ್ಯವರುಂಧ

ಉಪ್ಯೆನಮುತ್ತರೋ ಯಜ್ಞೋ ನಮತ್ಯೇತಾ ಏವ

ನಿರ್ವಪೇದ್ಯಂ ಮೇಧಾ ನೋಪನಮೇ-

---

ಏವ। ಅಸ್ಮೈ। ಛಂದಾಗ್‌ಂಸಿ। ಅಯಾತಯಾಮಾನೀತ್ಯಯಾತ-ಯಾಮಾನಿ। ಅವೇತಿ। ರುಂಧೇ। ಉಪೇತಿ। ಏನಮ್। ಉತ್ತರ ಇತ್ಯುತ್-ತರಃ। ಯಜ್ಞಃ। ನಮತಿ। ಏತಾಃ। ಏವ। ನಿರಿತಿ। ವಪೇತ್। ಯಮ್। ಮೇಧಾ। ನ। ಉಪನಮೇದಿತ್ಯುಪ-ನಮೇತ್।

---

| | |
|---|---|
| ಅಸ್ಮೈ ಅಯಾತಯಾಮಾನಿ ಛಂದಾಗ್‌ಂಸಿ ಅವರುಂಧೇ | ಈ ಯಜಮಾನನಿಗೆ ಮುಂದಿನ ಯಾಗಗಳಲ್ಲಿ ಸಾರಯುಕ್ತವಾದ/ಸತ್ವಪೂರ್ಣಛಂದಸ್ಸುಗಳು ಒದಗುತ್ತವೆ. |
| ಏನಮ್ ಉತ್ತರಃ ಯಜ್ಞಃ ಉಪನಮತಿ | ಈ ಯಜಮಾನನನ್ನು ಮುಂದೆ ಮಾಡುವ ಯಜ್ಞವು ಫಲಪ್ರದವಾಗಿ ಹೊಂದುತ್ತದೆ. |

**ಮೇಧಾಕಾಮನೆಯುಳ್ಳವನಿಗೆ ದೇವಿಕಾಯಾಗವಿಧಿ;ಬ್ರಾಹ್ಮಣ**

| | |
|---|---|
| ಯಮ್ ಮೇಧಾ ನ ಉಪನಮೇತ್ | ಯಾವನನ್ನು ಅಧೀತಗ್ರಂಥಧಾರಣಶಕ್ತಿಯು ಹೊಂದುವುದಿಲ್ಲವೋ |
| [ಸಃ] ಏತಾಃ ಏವ ನಿರ್ವಪೇತ್ | ಅವನು ಈ ದೇವಿಕಾಯಾಗಗಳನ್ನೇ ಮಾಡಬೇಕು. |

---

ದೇವಿಕಾಹವಿಸ್ಸುಗಳಿಂದ ತೃಪ್ತರಾದ ಛಂದೋದೇವತೆಗಳ ಅನುಗ್ರಹದಿಂದ ಯಜಮಾನನು ರೋಗರಹಿತನಾಗುವನು. ಧಾತೃಹವಿರ್ಯಾಗವನ್ನು ಮಧ್ಯದಲ್ಲಿ ಮಾಡುವುದರಿಂದ ಧಾತೃದೇವನ ಅನುಗ್ರಹದಿಂದ ದೇಹದ ಮಧ್ಯದಲ್ಲಿದ್ದು ಅಶಕ್ತಿಯನ್ನುಂಟುಮಾಡುತ್ತಿರುವ ರೋಗದ ಪರಿಹಾರವಾಗಿ ಮಧ್ಯಭಾಗವು ಸಮರ್ಥವಾಗುತ್ತದೆ. ಯಜಮಾನನು ರೋಗಮುಕ್ತನಾಗುವನು.

ಛನ್ದಾಗ್ಂಸಿ ವೈ ದೇವಿಕಾಶ್ಛನ್ದಾಗ್ಂಸಿ ಖಲು ವಾ
ಏತಂ ನೋಪನಮಂತಿ ಯಂ ಮೇಧಾ ನೋಪನಮತಿ
ಪ್ರಥಮಂ ಧಾತಾರಂ ಕರೋತಿ ಮುಖತ ಏವಾಸ್ಮೈ
ಛಂದಾಗ್ಂಸಿ ದಧಾತ್ಯು

---

ಛಂದಾಗ್ಂಸಿ । ವೈ । ದೇವಿಕಾಃ । ಛಂದಾಗ್ಂಸಿ । ಖಲು । ವೈ । ಏತಮ್ । ನ । ಉಪೇತಿ । ನಮಂತಿ । ಯಮ್ । ಮೇಧಾ । ನ । ಉಪನಮತೀತ್ಯುಪ-ನಮತಿ । ಪ್ರಥಮಮ್ । ಧಾತಾರಮ್ । ಕರೋತಿ । ಮುಖತಃ । ಏವ । ಅಸ್ಮೈ । ಛಂದಾಗ್ಂಸಿ । ದಧಾತಿ ।

---

| | |
|---|---|
| ದೇವಿಕಾಃ ಛಂದಾಗ್ಂಸಿ ವೈ | ದೇವಿಕೆಗಳು ಛಂದೋರೂಪಗಳೇ ಆಗಿವೆ. |
| ಯಮ್ ಮೇಧಾ ನ ಉಪನಮತಿ | ಅಧೀತಗ್ರಂಥಧಾರಣಶಕ್ತಿಯು ಯಾವನನ್ನು ಹೊಂದುವುದಿಲ್ಲವೋ |
| ಏತಮ್ ಛಂದಾಗ್ಂಸಿ ಖಲು ವೈ ನ ಉಪನಮಂತಿ | ಈತನನ್ನು ಛಂದಸ್ಸುಗಳೂ ಹೊಂದುವುದಿಲ್ಲ. |
| ಪ್ರಥಮಮ್ ಧಾತಾರಮ್ ಕರೋತಿ | [ಹೀಗಾಗಿ ಮೇಧಾಕಾಮನು] ಐದು ಯಾಗಗಳಲ್ಲಿ ಮೊದಲನೆಯದನ್ನಾಗಿ ಧಾತೃಯಾಗವನ್ನು ಅನುಷ್ಠಿಸಬೇಕು. |
| ಅಸ್ಮೈ ಮುಖತಃ ಏವ ಛಂದಾಗ್ಂಸಿ ದಧಾತಿ | [ಅಧ್ವರ್ಯುವು ಧಾತೃದೇವನ ಅನುಗ್ರಹದಿಂದ] ಈ ಯಜಮಾನನಿಗೆ ಆರಂಭದಿಂದಲೇ ಛಂದಸ್ಸುಗಳನ್ನು ಹೊಂದುವಂತೆ ಮಾಡುತ್ತಾನೆ. |

---

ವಿಘ್ನಗಳಿಂದ ಸೋಮಯಾಗಾದಿಗಳನ್ನು ಅನುಷ್ಠಿಸಲು ಆಗದವನು ಈ ದೇವಿಕಾ ಹವಿರ್ಯಾಗಗಳನ್ನು ಅನುಷ್ಠಿಸಬೇಕು. ಯಜ್ಞಕ್ಕೆ ಆಗತ್ಯವಾದ ಛಂದಸ್ಸುಗಳು

–ಪೈನಂ ಮೇಧಾ ನಮತ್ಯೇತಾ ಏವ ನಿರ್ವಪೇ

[ನಿರ್ವಪೇತ್(೩೩)ರುಕ್ಕಾಮಃ]ದ್ರುಕ್ಕಾಮಶ್ಛಂದಾಗ್ಂಸಿ

ವೈ ದೇವಿಕಾಶ್ಛಂದಾಗ್ಂಸೀವ ಖಲು ವೈ

---

ಉಪೇತಿ । ಏನಮ್ । ಮೇಧಾ । ನಮತಿ । ಏತಾಃ । ಏವ । ನಿರಿತಿ । ವಪೇತ್ ।(೩೩)।

ರುಕ್ಕಾಮ ಇತಿ ರುಕ್–ಕಾಮಃ । ಛಂದಾಗ್ಂಸಿ । ವೈ । ದೇವಿಕಾಃ । ಛಂದಾಗ್ಂಸಿ ।

ಇವ । ಖಲು । ವೈ ।

---

| | |
|---|---|
| ಏನಮ್ ಮೇಧಾ ಉಪನಮತಿ | [ಈ ಛಂದೋದೇವತೆಗಳ ಅನುಗ್ರಹದಿಂದ] ಮೇಧಾಶಕ್ತಿಯು ಈ ಯಜಮಾನನನ್ನು ಆಶ್ರಯಿಸುತ್ತದೆ. |

ಕಾಂತಿಮಂತನಾಗಬಯಸುವವನಿಗೆ ದೇವಿಕಾಹವಿರ್ಯಾಗವಿಧಿ;ಅದರ ಪ್ರಯೋಗವಿಶೇಷ; ಪ್ರಶಂಸೆ

| | |
|---|---|
| ರುಕ್ಕಾಮಃ ಏತಾಃ ಏವ ನಿರ್ವಪೇತ್ | ಕಾಂತಿಯನ್ನು ಹೊಂದಲು ಬಯಸುವವನು ಈ ದೇವಿಕಾಪಂಚಕಯಾಗಗಳನ್ನು ಅನುಷ್ಠಿಸ ಬೇಕು. |
| ದೇವಿಕಾಃ ಛಂದಾಗ್ಂಸಿ ಖಲು ವೈ | ದೇವಿಕೆಗಳು ಛಂದಸ್ಸುಗಳೇ ಆಗಿವೆ. |
| ರುಕ್ ಛಂದಾಗ್ಂಸಿ ಇವ ಖಲು ವೈ | ಜನರಿಗೆ ಇಷ್ಟವಾದ ಕಾಂತಿಯೂ ಕಾಂತಿಪ್ರದ ವಾದ ಛಂದಸ್ಸುಗಳೇ ಆಗಿವೆ. |

---

ಈ ಛಂದೋರೂಪವಾದ ದೇವಿಕಾಯಾಗದಿಂದ ಪ್ರಾಪ್ತವಾಗುತ್ತವೆ. ದೇವಿಕಾ ದೇವತೆಗಳ ಅನುಗ್ರಹದಿಂದ ಯಾಗಸಾಧನವಾದ ಛಂದಸ್ಸುಗಳು ಒದಗಿ ಬಂದು ಯಜಮಾನನ ಇಷ್ಟಾರ್ಥವು ನೆರವೇರುವುದು.

ರುಕ್ಛಂದೋಭಿರೇವಾಸ್ಮಿನ್ರುಚಂ ದಧಾತಿ ಕ್ಷೀರೇ ಭವಂತಿ

ರುಚಮೇವಾಸ್ಮಿನ್ದಧತಿ ಮಧ್ಯತೋ ಧಾತಾರಂ ಕರೋತಿ

ಮಧ್ಯತ ಏವೈನಗ್ಂ ರುಚೋ ದಧಾತಿ

---

ರುಕ್ । ಛಂದೋಭಿರಿತಿ ಛಂದಃ-ಭಿಃ । ಏವ । ಅಸ್ಮಿನ್ನ್ । ರುಚಮ್ । ದಧಾತಿ । ಕ್ಷೀರೇ । ಭವಂತಿ । ರುಚಮ್ । ಏವ । ಅಸ್ಮಿನ್ನ್ । ದಧತಿ । ಮಧ್ಯತಃ । ಧಾತಾರಮ್ । ಕರೋತಿ । ಮಧ್ಯತಃ । ಏವ । ಏನಮ್ । ರುಚಃ । ದಧಾತಿ ।

---

| | |
|---|---|
| ಅಸ್ಮಿನ್ ಛಂದೋಭಿಃ ಏವ ರುಚಮ್ ದಧಾತಿ | ಛಂದೋರೂಪವಾದ ದೇವಿಕೆಗಳಿಂದಲೇ ಅಧ್ವರ್ಯುವು ಈ ಯಜಮಾನನಲ್ಲಿ ಕಾಂತಿ ಯನ್ನು ನೆಲೆಗೊಳಿಸುತ್ತಾನೆ. |
| ಕ್ಷೀರೇ ಭವಂತಿ | [ಅನುಮತಿ, ರಾಕಾ, ಕುಹೂ, ಸಿನೀವಾಲಿ ಈ ನಾಲ್ಕು ಯಾಗಗಳ ಚರುಗಳನ್ನು] ಹಾಲಿನಲ್ಲಿ ಬೇಯಿಸಬೇಕು. |
| ಅಸ್ಮಿನ್ ರುಚಮ್ ಏವ ದಧತಿ | [ಈ ಕ್ಷೀರಪಕ್ವವಾದ ಚರುಗಳ ಯಾಗಗಳಿಂದ ಅಧ್ವರ್ಯುವು] ಈ ಯಜಮಾನನಲ್ಲಿ ಕಾಂತಿ ಯನ್ನು ನೆಲೆಗೊಳಿಸುತ್ತಾನೆ. |
| ಧಾತಾರಮ್ ಮಧ್ಯತಃ ಕರೋತಿ | ಧಾತೃಯಾಗವನ್ನು ದೇವಿಕಾಯಾಗಗಳ ಮಧ್ಯ ದಲ್ಲಿ ಅನುಷ್ಠಿಸಬೇಕು. |
| ಏನಮ್ ಮಧ್ಯತಃ ಏವ ರುಚಮ್ ದಧಾತಿ | [ಇದರಿಂದ] ಕಾಂತಿಯ ಮಧ್ಯದಲ್ಲಿಯೇ ಯಜಮಾನನನ್ನು ನೆಲೆಗೊಳಿಸುತ್ತಾನೆ. |

---

ಸಾಮಾನ್ಯವಾಗಿ ಒಮ್ಮೆ ಉಪಯೋಗಿಸಿದ ವಸ್ತುಗಳು ತಮ್ಮ ಶಕ್ತಿಯನ್ನು ಕಳೆದು ಕೊಳ್ಳುತ್ತವೆ. ಹಾಗೆಯೇ ಒಮ್ಮೆ ಯಾಗವನ್ನು ಅನುಷ್ಠಿಸಿದ ಅನಂತರ ಮೊದಲಿನ

ಗಾಯತ್ರೀ ವಾ ಅನುಮತಿಸ್ತ್ರಿಷ್ಟುಗ್ರಾಕಾ ಜಗತೀ

ಸಿನೀವಾಲ್ಯನುಷ್ಟುಪ್ಕುಹೂರ್ಧಾತಾ ವಷಟ್ಕಾರಃ

---

ಗಾಯತ್ರೀ । ವೈ । ಅನುಮತಿರಿತ್ಯನು–ಮತಿಃ । ತ್ರಿಷ್ಟುಕ್ । ರಾಕಾ । ಜಗತೀ । ಸಿನೀವಾಲೀ । ಅನುಷ್ಟುಬಿತ್ಯನು–ಸ್ತುಪ್ । ಕುಹೂಃ । ಧಾತಾ । ವಷಟ್ಕಾರ ಇತಿ ವಷಟ್–ಕಾರಃ ।

---

ಛಂದೋರೂಪವಾಗಿ ಅನುಮತ್ಯಾದಿಗಳ ಪ್ರಶಂಸೆ

| | |
|---|---|
| ಅನುಮತಿಃ ಗಾಯತ್ರೀ ವೈ | ಅನುಮತಿಯ ಗಾಯತ್ರೀಸ್ವರೂಪಳಾಗಿದ್ದಾಳೆ. |
| ರಾಕಾ ತ್ರಿಷ್ಟುಕ್ | ರಾಕೆಯು ತ್ರಿಷ್ಟುಪ್ ಸ್ವರೂಪಳು. |
| ಸಿನೀವಾಲೀ ಜಗತೀ | ಸಿನೀವಾಲೀದೇವತೆಯು ಜಗತೀಸ್ವರೂಪಳಾಗಿದ್ದಾಳೆ. |
| ಕುಹೂಃ ಅನುಷ್ಟುಪ್ | ಕುಹೂದೇವತೆಯು ಅನುಷ್ಟುಪ್ ಸ್ವರೂಪಳಾಗಿದ್ದಾಳೆ. |
| ಧಾತಾ ವಷಟ್ಕಾರಃ | ಧಾತೃದೇವನು ಸರ್ವಪ್ರವರ್ತಕನಾದ ವಷಟ್ಕಾರ ಸ್ವರೂಪನಾಗಿದ್ದಾನೆ. |

---

ಯಾಗದಲ್ಲಿ ಫಲವನ್ನು ನೀಡಿದ ಛಂದಸ್ಸುಗಳು ನಿಸ್ಸಾರವಾಗುತ್ತವೆ. ಆ ಛಂದಸ್ಸುಗಳು ಛಂದೋರೂಪವಾದ ದೇವಿಕಾಯಾಗಗಳನ್ನು ಅನುಷ್ಠಿಸುವುದರಿಂದ ಮತ್ತೆ ಸಾರವನ್ನು ಪಡೆದು ಫಲಪ್ರದವಾಗುತ್ತವೆ. ಹೀಗಾಗಿ ಒಮ್ಮೆ ಯಾಗವನ್ನು ಅನುಷ್ಠಿಸಿದವನು ಮತ್ತೊಂದು ಯಾಗವನ್ನು ಮಾಡುವ ಮೊದಲು ಈ ದೇವಿಕಾಯಾಗವನ್ನು ಅನುಷ್ಠಿಸಬೇಕು.

ಮೇಧಾಕಾಮನಾದವನು ಈ ದೇವಿಕಾಯಾಗಗಳನ್ನು ಅನುಷ್ಠಿಸಬೇಕು. ಗ್ರಹಣ–ಧಾರಣಶಕ್ತಿಯಿಲ್ಲದವನು ಛಂದಸ್ಸುಗಳನ್ನು ಹೇಗೆ ನೆನಪಿನಲ್ಲಿಡಬಲ್ಲನು?

ಪೂರ್ವಪಕ್ಷೋ ರಾಕಾಽಪರಪಕ್ಷಃ ಕುಹೂರಮಾವಾಸ್ಯಾ

ಸಿನೀವಾಲೀ ಪೌರ್ಣಮಾಸ್ಯನುಮತಿಶ್ಚಂದ್ರಮಾ ಧಾತಾ-

---

ಪೂರ್ವಪಕ್ಷ ಇತಿ ಪೂರ್ವ-ಪಕ್ಷಃ । ರಾಕಾ । ಅಪರಪಕ್ಷ ಇತ್ಯಪರ-ಪಕ್ಷಃ । ಕುಹೂಃ । ಅಮಾವಾಸ್ಯೇತ್ಯಮಾ-ವಾಸ್ಯಾ । ಸಿನೀವಾಲೀ । ಪೌರ್ಣಮಾಸೀತಿ ಪೌರ್ಣ-ಮಾಸೀ । ಅನುಮತಿರಿತ್ಯನು-ಮತಿಃ । ಚಂದ್ರಮಾಃ । ಧಾತಾ ।

---

ಪೂರ್ವಪಕ್ಷಾದಿ ಇನ್ನೊಂದು ರೂಪದಿಂದ ದೇವಿಕಾಸ್ತುತಿ

| | |
|---|---|
| ರಾಕಾ ಪೂರ್ವಪಕ್ಷಃ | ರಾಕೆಯು ಶುಕ್ಲಪಕ್ಷರೂಪವಾಗಿದೆ. |
| ಕುಹೂಃ ಅಪರಪಕ್ಷಃ | ಕುಹೂವು ಕೃಷ್ಣಪಕ್ಷರೂಪವಾಗಿದೆ. |
| ಸಿನೀವಾಲೀ ಅಮಾವಾಸ್ಯಾ | ಸಿನೀವಾಲಿಯು ಅಮಾವಾಸ್ಯಾರೂಪವಾಗಿದೆ. |
| ಅನುಮತಿಃ ಪೌರ್ಣಮಾಸೀ | ಅನುಮತಿಯು ಪೌರ್ಣಮಾಸೀರೂಪವಾಗಿದೆ. |
| ಧಾತಾ ಚಂದ್ರಮಾಃ | ಧಾತೃದೇವನು ಶುಕ್ಲಪಕ್ಷಾದಿನಿಷ್ಪಾದಕನಾದ ಚಂದ್ರಸ್ವರೂಪನಾಗಿದ್ದಾನೆ. |

---

ಓದಿದುದನ್ನು ಮರೆಯುವವನು ಆ ಧಾರಣಶಕ್ತಿಯನ್ನು ಪಡೆಯಲು ಈ ಯಾಗಗಳನ್ನು ಅನುಷ್ಠಿಸಬೇಕು. ಈ ಯಾಗಪಂಚಕದಲ್ಲಿ ಧಾತೃಯಾಗವನ್ನು ಮೊದಲು ಮಾಡುವುದರಿಂದ ಆರಂಭದಲ್ಲಿಯೇ ಛಂದಸ್ಸುಗಳು ಈ ಯಜಮಾನನನ್ನು ಸೇರುತ್ತವೆ. ಯಜಮಾನನು ದೇವಿಕಾದೇವತೆಗಳ ಅನುಗ್ರಹದಿಂದ ಮೇಧಾಶಕ್ತಿಯನ್ನು ಹೊಂದಿ ಯಾಗಗಳನ್ನು ಮಾಡಲು ಸಮರ್ಥನಾಗುತ್ತಾನೆ. ಹೀಗೆ ಅವನ ಇಷ್ಟಾರ್ಥವು ಫಲಿಸುತ್ತದೆ.

ಕಾಂತಿಕಾಮನಾದವನು ಈ ದೇವಿಕಾಯಾಗಗಳನ್ನು ಅನುಷ್ಠಿಸಬೇಕು. ಈ ಐದು ಯಾಗಗಳಲ್ಲಿ ಅನುಮತಿ, ರಾಕಾಗಳ ಬಳಿಕ ಧಾತೃಯಾಗವನ್ನೂ ಬಳಿಕ ಕುಹೂ ಸಿನೀವಾಲೀಯಾಗಗಳನ್ನೂ ಅನುಷ್ಠಿಸಬೇಕು. ಮಧ್ಯದಲ್ಲಿ ಧಾತೃಯಾಗವನ್ನು ಅನುಷ್ಠಿಸುವುದರಿಂದ ಕಾಂತಿಯ ಮಧ್ಯದಲ್ಲಿ ಯಜಮಾನನನ್ನು ನೆಲೆಗೊಳಿಸಿದಂತಾಗುತ್ತದೆ.

ಽಷ್ಟೌ[ಇಳ]ವಸವೋಽಷ್ಟಾಕ್ಷರಾ ಗಾಯತ್ರ್ಯೇಕಾದಶ ರುದ್ರಾ

ಏಕಾದಶಾಕ್ಷರಾ ತ್ರಿಷ್ಟುಬ್ದ್ವಾದಶಾದಿತ್ಯಾ ದ್ವಾದಶಾಕ್ಷರಾ

ಜಗತೀ ಪ್ರಜಾಪತಿರನುಷ್ಟುಬ್ಧಾತಾ ವಷಟ್ಕಾರ

---

ಅಷ್ಟೌ ।(ಇಳ)। ವಸವಃ । ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ । ಏಕಾದಶ । ರುದ್ರಾಃ । ಏಕಾದಶಾಕ್ಷರೇತ್ಯೇಕಾದಶ-ಅಕ್ಷರಾ । ತ್ರಿಷ್ಟುಪ್ । ದ್ವಾದಶ । ಆದಿತ್ಯಾಃ । ದ್ವಾದಶಾಕ್ಷರೇತಿ ದ್ವಾದಶ-ಅಕ್ಷರಾ । ಜಗತೀ । ಪ್ರಜಾಪತಿರಿತಿ ಪ್ರಜಾ-ಪತಿಃ । ಅನುಷ್ಟುಬಿತ್ಯನು-ಸ್ತುಪ್ । ಧಾತಾ । ವಷಟ್ಕಾರ ಇತಿ ವಷಟ್-ಕಾರಃ ।

---

## ದೇವತಾಸ್ವರೂಪವಾಗಿ ದೇವಿಕೆಗಳ ಸ್ತುತಿ

| | |
|---|---|
| ಅಷ್ಟೌ ವಸವಃ | ವಸುದೇವತೆಗಳು ಎಂಟು ಮಂದಿ. |
| ಗಾಯತ್ರೀ ಅಷ್ಟಾಕ್ಷರಾ | ಗಾಯತ್ರೀ ಛಂದಸ್ಸು ಎಂಟು ಅಕ್ಷರಗಳ ಪಾದಗಳುಳ್ಳದ್ದು. |
| ಏಕಾದಶ ರುದ್ರಾಃ | ರುದ್ರದೇವತೆಗಳು ಹನ್ನೊಂದು ಮಂದಿ. |
| ತ್ರಿಷ್ಟುಪ್ ಏಕಾದಶಾಕ್ಷರಾ | ತ್ರಿಷ್ಟುಪ್ ಛಂದಸ್ಸೂ ಹನ್ನೊಂದು ಅಕ್ಷರಗಳ ಪಾದಗಳುಳ್ಳದ್ದಾಗಿದೆ. |
| ದ್ವಾದಶ ಆದಿತ್ಯಾಃ | ಆದಿತ್ಯದೇವತೆಗಳು ಹನ್ನೆರಡು ಮಂದಿ. |
| ಜಗತೀ ದ್ವಾದಶಾಕ್ಷರಾ | ಜಗತೀಛಂದಸ್ಸು ಹನ್ನೆರಡು ಅಕ್ಷರಗಳ ಪಾದಗಳನ್ನು ಹೊಂದಿದೆ. |
| ಅನುಷ್ಟುಪ್ ಪ್ರಜಾಪತಿಃ | ಕುಹೂರೂಪವಾದ ಅನುಷ್ಟುಪ್ ಛಂದಸ್ಸು ಸರ್ವಕರ್ತನಾದ ಪ್ರಜಾಪತಿದೇವತಾರೂಪವಾದುದು. |
| ಧಾತಾ ವಷಟ್ಕಾರಃ | ಮುಖ್ಯವಾದ ವಷಟ್ಕಾರವು ಧಾತೃದೇವತಾ ಸ್ವರೂಪವಾಗಿದೆ. |

ಏತದ್ವೈ ದೇವಿಕಾಸ್ಸರ್ವಾಣಿ ಚ ಛಂದಾಗ್ಂಸಿ
ಸರ್ವಾಶ್ಚ ದೇವತಾ ವಷಟ್ಕಾರ–

---

ಏತತ್ । ವೈ । ದೇವಿಕಾಃ । ಸರ್ವಾಣಿ । ಚ । ಛಂದಾಗ್ಂಸಿ । ಸರ್ವಾಃ । ಚ ।
ದೇವತಾಃ । ವಷಟ್ಕಾರ ಇತಿ ವಷಟ್–ಕಾರಃ ।

---

ದೇವಿಕೆಗಳ ಪ್ರಶಂಸೆಯ ಉಪಸಂಹಾರ

| | |
|---|---|
| ಏತತ್ ವೈ ದೇವಿಕಾಃ | 'ಗಾಯತ್ರೀ ವಾ ಅನುಮತಿಃ' 'ಅಷ್ಟೌ ವಸವಃ' ಮೊದಲಾದ ಈ ವರ್ಣನೆಯೇ ದೇವಿಕೆಗಳ |
| ಸರ್ವಾಣಿ ಛಂದಾಗ್ಂಸಿ | ಸರ್ವಛಂದೋರೂಪವೂ |
| ಸರ್ವಾಃ ಚ ದೇವತಾಃ | ಸರ್ವದೇವತಾಸ್ವರೂಪತ್ವವೂ |
| ವಷಟ್ಕಾರಃ | ವಷಟ್ಕಾರರೂಪತ್ವವೂ [ಆಗಿದೆ.] |

---

ಧಾತ್ರ್ಯಯಾಗವು ಪುರೋಡಾಶಯಾಗ. ಅನುಮತ್ಯಾದಿಗಳು ಚರುಯಾಗಗಳು. ಹೀಗಾಗಿ ಕ್ಷೀರಪಾಕವು ಚರುಯಾಗಗಳಿಗೆ ಮಾತ್ರ ಅನ್ವಯಿಸುತ್ತದೆ.

ಅನುಮತ್ಯಾದಿಗಳನ್ನು ಈ ಬ್ರಾಹ್ಮಣದಲ್ಲಿ ಛಂದೋರೂಪದಿಂದ ಪ್ರಶಂಸಿಸಲಾಗಿದೆ. ಅನುಮತ್ಯಾದಿಗಳು ಗಾಯತ್ರ್ಯಾದಿಗಳಂತೆ ಫಲಪ್ರದವಾಗಿವೆ.

ಇನ್ನೊಂದು ವಿಧದಿಂದ ದೇವಿಕೆಗಳನ್ನು ಸ್ತುತಿಸಲಾಗಿದೆ. ರಾಕೆಯನ್ನು ಶುಕ್ಲಪಕ್ಷ ವನ್ನಾಗಿ ಸ್ತುತಿಸಲಾಗಿದೆ. * 'ಪೂರ್ಣೇ ರಾಕಾ ನಿಶಾಕರೇ' ಎಂಬ ವಚನದಂತೆ ಪೂರ್ಣ ಚಂದ್ರನನ್ನು ಹೊಂದಿರುವ ಹುಣ್ಣಿಮೆಯು 'ರಾಕಾ' ಎನ್ನಿಸಿಕೊಳ್ಳುತ್ತದೆ. ಕುಹೂವನ್ನು ಕೃಷ್ಣಪಕ್ಷವನ್ನಾಗಿ ಸ್ತುತಿಸಲಾಗಿದೆ. *'ಸಾ ನಷ್ಟೇಂದುಕಲಾ ಕುಹೂಃ' ಎಂಬಂತೆ ಸಂಪೂರ್ಣವಾಗಿ ಚಂದ್ರದರ್ಶನವೇ ಇಲ್ಲದ ಅಮಾವಾಸ್ಯೆಯು ಕುಹೂ ಎನ್ನಿಸಿಕೊಳ್ಳು ವುದು. ಸಿನೀವಾಲಿಯನ್ನು ಅಮಾವಾಸ್ಯೆಯ ರೂಪವನ್ನಾಗಿ ಸ್ತುತಿಸಲಾಗಿದೆ. *'ಸಾ ದೃಷ್ಟೇಂದುಃ ಸಿನೀವಾಲೀ' ಎಂಬಂತೆ ಸ್ವಲ್ಪ ಕಾಣಿಸಿಕೊಂಡ ಚಂದ್ರನುಳ್ಳ

---

*ಅಮರಕೋಶ, ಕಾಲವರ್ಗ.

ಸ್ತಾ ಯಥ್ಸಹ ಸರ್ವಾ ನಿರ್ವಪೇದೀಶ್ವರಾ ಏನಂ

ಪ್ರದಹೋ ದ್ವೇ ಪ್ರಥಮೇ ನಿರುಪ್ಯ ಧಾತುಸ್ತೃತೀಯಂ

ನಿರ್ವಪೇತ್ತಥೋ ಏವೋತ್ತರೇ ನಿರ್ವಪೇ-

---

ತಾಃ। ಯತ್। ಸಹ। ಸರ್ವಾಃ। ನಿರ್ವಪೇದಿತಿ ನಿಃ-ವಪೇತ್। ಈಶ್ವರಾಃ। ಏನಮ್। ಪ್ರದಹ ಇತಿ ಪ್ರ-ದಹಃ। ದ್ವೇ ಇತಿ। ಪ್ರಥಮೇ ಇತಿ। ನಿರುಪ್ಯೇತಿ ನಿಃ-ಉಪ್ಯ। ಧಾತುಃ। ತೃತೀಯಮ್। ನಿರಿತಿ। ವಪೇತ್। ತಥೋ ಇತಿ। ಏವ। ಉತ್ತರೇ ಇತ್ಯುತ್-ತರೇ। ನಿರಿತಿ। ವಪೇತ್।

---

ದೇವಿಕಾನಿರ್ವಾಪದಲ್ಲಿ ವಿಶೇಷವಿಧಿ;ಪ್ರಶಂಸೆ

| | |
|---|---|
| ಯತ್ ತಾಃ ಸಹ ಸರ್ವಾಃ ನಿರ್ವಪೇತ್ | ಆ ದೇವಿಕಾಯಾಗಗಳಿಗೆ ಒಟ್ಟಾಗಿ ಹವಿರ್ನಿರ್ವಾಪವನ್ನು ಮಾಡಿದರೆ |
| ಏನಮ್ ಪ್ರದಹಃ ಈಶ್ವರಾಃ | [ಆ ಯಾಗಗಳು] ಈ ಯಜಮಾನನನ್ನು ಸುಟ್ಟು ಹಾಕಲು ಸಮರ್ಥವಾಗುತ್ತವೆ. |
| ದ್ವೇ ಪ್ರಥಮೇ ನಿರುಪ್ಯ | [ಅದಕ್ಕಾಗಿ] ಮೊದಲನೆಯ ಚರುಯಾಗಗಳಾದ ಅನುಮತಿ-ರಾಕಾಯಾಗಗಳಿಗಾಗಿ ಹವಿರ್ನಿರ್ವಾಪವನ್ನು ಮಾಡಿ |
| ಧಾತುಃ ತೃತೀಯಮ್ ನಿರ್ವಪೇತ್ | ಧಾತೃಪುರೋಡಾಶಕ್ಕಾಗಿ ಮೂರನೆಯ ಹವಿರ್ನಿರ್ವಾಪವನ್ನು ಮಾಡಬೇಕು. |
| ತಥೋ ಏವ ಉತ್ತರೇ ನಿರ್ವಪೇತ್ | ಹಾಗೆಯೇ ಅನಂತರದ ಸಿನೀವಾಲೀ-ಕುಹೂ ಯಾಗಚರುಗಳ ನಿರ್ವಾಪವನ್ನು ಮಾಡಬೇಕು. |

---

ಅಮಾವಾಸ್ಯೆಯು ಸಿನೀವಾಲಿ ಎನ್ನಿಸಿಕೊಳ್ಳುತ್ತದೆ. ಅನುಮತಿಯನ್ನು ಪೂರ್ಣಿಮಾ

ತ್ತಥೈನಂ ನ ಪ್ರ ದಹಂತ್ಯಥೋ ಯಸ್ಮೈ ಕಾಮಾಯ

ನಿರುಪ್ಯಂತೇ ತಮೇವಾಭಿರುಪಾಪ್ನೋತಿ [೩೫-9]

[ಪಶುಕಾಮಶ್ಛಂದಾಗ್‌ಂಸಿ ವೈ ದೇವಿಕಾಶ್ಛನ್ದಾಗ್‌ಂಸಿ ಗ್ರಾಮಂ ಕಲ್ಪಯತ್ಯೇತಾ ಏವ

ನಿರುತ್ತಮಂ ಧಾತಾರಂ ಕರೋತಿ ಮೇಧಾ ಸಮತ್ಯೇತಾ ಏವ ನಿರ್ವಪೇದಷ್ಟೌ

ದಹಂತಿ ನವ ಚ ॥]

---

ತಥಾ । ಏನಮ್ । ನ । ಪ್ರೇತಿ । ದಹಂತಿ । ಅಥೋ ಇತಿ । ಯಸ್ಮೈ । ಕಾಮಾಯ ।

ನಿರುಪ್ಯಂತ ಇತಿ ನಿಃ-ಉಪ್ಯಂತೇ । ತಮ್ । ಏವ । ಆಭಿಃ । ಉಪೇತಿ । ಆಪ್ನೋತಿ । (೩೫) ।

---

| | |
|---|---|
| ತಥಾ ಏನಮ್ ನ ಪ್ರದಹಂತಿ | ಹೀಗೆ ಮಾಡುವುದರಿಂದ ದೇವಿಕೆಗಳು ಯಜಮಾನನನ್ನು ಸುಡುವುದಿಲ್ಲ. |
| ಅಥೋ ಯಸ್ಮೈ ಕಾಮಾಯ ನಿರುಪ್ಯಂತೇ | ಮತ್ತು ಯಾವ ಕಾಮನಾಪೂರ್ತಿಗಾಗಿ ನಿರ್ವಾಪ ಮಾಡಲ್ಪಟ್ಟಿರುತ್ತವೆಯೋ |
| ಆಭಿಃ ತಮ್ ಏವ ಉಪಾಪ್ನೋತಿ | ಈ ದೇವಿಕೆಗಳಿಂದ ಆ ಕಾಮವನ್ನೇ ಯಜಮಾನನು ಪಡೆಯುತ್ತಾನೆ. |

---

ರೂಪವನ್ನಾಗಿ ಸ್ತುತಿಸಲಾಗಿದೆ. * 'ಕಲಾಹೀನೇ ಸಾಽನುಮತಿಃ' ಎಂಬಂತೆ ಕಲಾಹೀನನಾದ ಚಂದ್ರನಿಂದ ಕೂಡಿದ ಹುಣ್ಣಿಮೆಯು ಅನುಮತಿ ಎನ್ನಿಸಿಕೊಳ್ಳುವುದು.

ಈ ಶುಕ್ಲಪಕ್ಷ-ಕೃಷ್ಣಪಕ್ಷ ಮತ್ತು ತಿಥಿಗಳನ್ನು ಉಂಟು ಮಾಡುವ ಚಂದ್ರನನ್ನು ಧಾತೃದೇವನನ್ನಾಗಿ ಸ್ತುತಿಸಲಾಗಿದೆ.

ಈ ಬ್ರಾಹ್ಮಣದಲ್ಲಿ ದೇವಿಕೆಗಳನ್ನು ಸರ್ವದೇವತಾಸ್ವರೂಪವೆಂದು ವರ್ಣಿಸಲಾಗಿದೆ. ಸಂಖ್ಯಾಸಾಮ್ಯದಿಂದ ಗಾಯತ್ರೀ, ತ್ರಿಷ್ಟುಪ್, ಜಗತೀ ಛಂದಸ್ಸುಗಳು, ವಸು-ರುದ್ರ-

---

*ಅಮರಕೋಶ, ಕಾಲವರ್ಗ.

ಆದಿತ್ಯಸ್ವರೂಪರೆಂದು ಹೇಳಲಾಗಿದೆ.

ಕುಹೂವನ್ನು ಅನುಷ್ಟುಪ್ಛಂದೋರೂಪವೆಂದು ಹೇಳಿ ಅನುಷ್ಟುಪ್ ಛಂದಸ್ಸನ್ನು ಪ್ರಜಾಪತಿರೂಪವೆಂದು ಹೇಳಿದೆ. ಶಾಖಾಂತರದಲ್ಲಿ 'ಅನುಷ್ಟುಭೋ ವಾ ಇಮಾನಿ ಭೂತಾನಿ ಜಾಯಂತೇ' [ನೃಸಿಂಹಪೂರ್ವತಾಪನೀಯೋಪನಿಷತ್ 1.1] ಎಂದು ಹೇಳಿ ಅನುಷ್ಟುಪ್ ಛಂದಸ್ಸಿನಿಂದಲೇ ಎಲ್ಲ ಪ್ರಾಣಿಗಳೂ ಉಂಟಾಗುತ್ತವೆ ಎಂದಿದೆ. ಹೀಗಾಗಿ ಅನುಷ್ಟುಪ್ ಛಂದಸ್ಸು ಪ್ರಜಾಪತಿಸ್ವರೂಪವೆಂದು ಇಲ್ಲಿ ಹೇಳಿದೆ. ಹೀಗೆ ದೇವಿಕೆಗಳು ಸರ್ವದೇವತಾಸ್ವರೂಪಗಳು.

'ಗಾಯತ್ರೀ ವಾ ಅನುಮತಿಃ' ಮೊದಲಾದ ಈ ವರ್ಣನೆಯಿಂದ ಈ ದೇವಿಕೆಗಳೇ ಎಲ್ಲ ಛಂದೋರೂಪಗಳು ಎಂದೂ, ಸರ್ವದೇವತಾರೂಪವೆಂದೂ ಅದು ವಷಟ್ಕಾರ ವಾಗಿದೆಯೆಂದೂ ತಿಳಿಯುತ್ತದೆ.

ಈ ದೇವಿಕಾಯಾಗಗಳ ಹವಿಸ್ಸಿಗಾಗಿ ಒಟ್ಟಿಗೆ ಧಾನ್ಯದ ಪೃಥಕ್ಕರಣ[ನಿರ್ವಾಪ]ವನ್ನು ಮಾಡಿದರೆ ಆ ಯಾಗಗಳು ಯಜಮಾನನನ್ನು ದಹಿಸಿಯಾವು. ಹೀಗಾಗಿ ಮೊದಲು ಎರಡು ಯಾಗಗಳಿಗಾಗಿ ನಿರ್ವಾಪ ಮಾಡಿ ಬಳಿಕ ಧಾತೃಯಾಗಕ್ಕಾಗಿ ನಿರ್ವಾಪವನ್ನು ಮಾಡಬೇಕು. ಅನಂತರ ಎರಡು ಯಾಗಗಳಿಗೆ ನಿರ್ವಾಪವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಯಜಮಾನನ ಅಭಿಲಾಷೆಯು ಪೂರ್ಣವಾಗುತ್ತದೆ.

## ॥ ದಶಮೋऽನುವಾಕಃ ॥

ವಾಸ್ತೋಷ್ಪತೇ ಪ್ರತಿ ಜಾನೀಹ್ಯಸ್ಮಾನ್ತ್ಸ್ವಾವೇಶೋ

ಅನಮೀವೋ ಭವಾ ನಃ ।

---

ವಾಸ್ತೋಃ । ಪತೇ । ಪ್ರತೀತಿ । ಜಾನೀಹಿ । ಅಸ್ಮಾನ್ । ಸ್ವಾವೇಶ ಇತಿ ಸು-ಆವೇಶಃ ।

ಅನಮೀವಃ । ಭವ । ನಃ ॥

---

ಒಂಬತ್ತನೆಯ ಅನುವಾಕದಲ್ಲಿ ದೇವಿಕಾಹವಿರ್ಯಾಗಗಳು ಹೇಳಲ್ಪಟ್ಟವೆ. ಈ ಹತ್ತನೆಯ ಅನುವಾಕದಲ್ಲಿ ಅಗ್ನಿಹೋತ್ರಿಯಾದವನು ಪ್ರಯಾಣವನ್ನು ಮಾಡುವಾಗ ಮಾಡಬೇಕಾದ ವಾಸ್ತೋಷ್ಪತಿಹೋಮ, ಅಗ್ನಿಸಮಾರೋಪಣಕ್ರಮಗಳು ಹೇಳಲ್ಪಟ್ಟವೆ.

---

| ಮಂತ್ರ | ವಿನಿಯೋಗ |
|---|---|
| ವಾಸ್ತೋಷ್ಪತೇ...ಚತುಷ್ಪದೇ ॥ | ಗಾರ್ಹಪತ್ಯಾಗ್ನಿಯಲ್ಲಿ ಅನುಷ್ಠಿಸುವ ವಾಸ್ತೋಷ್ಪತಿ ಹೋಮದ ಪುರೋನುವಾಕ್ಯೆ. |

---

✦ವಾಸ್ತೋಃ ಪತೇ=ಅಗ್ನಿಹೋತ್ರನಿವಾಸಸ್ಥಳದ ಪಾಲಕನಾದ ಗಾರ್ಹಪತ್ಯಾಗ್ನಿಯೇ! ಅಸ್ಮಾನ್=ನಮ್ಮನ್ನು; ಪ್ರತಿಜಾನೀಹಿ=ಹೊರಡುತ್ತಿರುವವರನ್ನಾಗಿ ತಿಳಿ/ಆತ್ಮೀಯರನ್ನಾಗಿ ತಿಳಿ; ನಃ=ನಮಗೆ; ಸ್ವಾವೇಶಃ=ಸುಖವಾಗಿ ವಾಸಗೊಳಿಸುವವನೂ; ಅನಮೀವಃ=ಒದಗಬಹುದಾದ ರೋಗಗಳನ್ನು ಸರಿಪಡಿಸುವವನೂ; ಭವ=ಆಗು;

---

ಎಲೈ! ಗಾರ್ಹಪತ್ಯನೇ! ನೀನು ನಮ್ಮ ಅಗ್ನಿಹೋತ್ರಗೃಹರಕ್ಷಕನು. ನಮ್ಮನ್ನು ನಿನ್ನವರೆಂದು ತಿಳಿದು ನೋಡಿಕೋ. ನಾವು ಮುಂದೆ ಹೋಗುವ ಸ್ಥಳಗಳನ್ನು ಸುಖಕರವಾದ ವಾಸಸ್ಥಳಗಳನ್ನಾಗಿ ಮಾಡು.

ಯತ್ತ್ವೇಮಹೇ ಪ್ರತಿ ತನ್ನೋ ಜುಷಸ್ವ ಶಂ ನ ಏಧಿ ದ್ವಿಪದೇ ಶಂ ಚತುಷ್ಪದೇ ॥ ವಾಸ್ತೋಷ್ಪತೇ ಶಗ್ಮಯಾ ಸಗ್ಂಸದಾ ತೇ ಸಕ್ಷೀಮಹಿ ರಣ್ವಯಾ ಗಾತುಮತ್ಯಾ ।

---

ಯತ್ । ತ್ವಾ । ಈಮಹೇ । ಪ್ರತೀತಿ । ತತ್ । ನಃ । ಜುಷಸ್ವ । ಶಮ್ । ನಃ । ಏಧಿ । ದ್ವಿಪದ ಇತಿ ದ್ವಿ-ಪದೇ । ಶಮ್ । ಚತುಷ್ಪದ ಇತಿ ಚತುಃ-ಪದೇ ॥ ವಾಸ್ತೋಃ । ಪತೇ । ಶಗ್ಮಯಾ । ಸಗ್ಂಸದೇತಿ ಸಂ-ಸದಾ । ತೇ । ಸಕ್ಷೀಮಹಿ । ರಣ್ವಯಾ । ಗಾತುಮತ್ಯೇತಿ ಗಾತು-ಮತ್ಯಾ ।

---

| ಮಂತ್ರ | ವಿನಿಯೋಗ |
|---|---|
| ವಾಸ್ತೋಷ್ಪತೇ...ಸದಾ ನಃ ॥ | ವಾಸ್ತೋಷ್ಪತಿಹೋಮದ ಯಾಜ್ಯಾನುವಾಕ್ಯೆ. |

---

ಯತ್ ತ್ವಾ ಈಮಹೇ=ಯಾವ ಕಾರ್ಯವನ್ನು ಉದ್ದೇಶಿಸಿ ನಿನ್ನ ಬಳಿಗೆ ಬಂದಿರುವೆವೋ/ಪ್ರಾರ್ಥಿಸುತ್ತೇವೆಯೋ; ನಃ=ನಮ್ಮನ್ನು; ತತ್=ಆ ಕಾರ್ಯವನ್ನು ಉದ್ದೇಶಿಸಿ; ಪ್ರತಿ ಜುಷಸ್ವ=ಪ್ರೀತಿಯಿಂದ ಸೇವಿಸು/ಸಫಲಗೊಳಿಸು; ನಃ ದ್ವಿಪದೇ=ನಮ್ಮವರಾದ ಮನುಷ್ಯರಿಗೆ; ಶಮ್ ಏಧಿ=ಸುಖಪ್ರದನಾಗಿ ಆಗು; ನಃ ಚತುಷ್ಪದೇ ಶಮ್ ಏಧಿ=ನಮ್ಮ ಪಶುಗಳಿಗೂ ಸುಖಕರನಾಗಿ ಆಗು. +ವಾಸ್ತೋಃ ಪತೇ=ಗೃಹರಕ್ಷಕನಾದ ಓ! ಗಾರ್ಹಪತ್ಯಾಗ್ನಿಯೇ! ಶಗ್ಮಯಾ=ಸರ್ವಶಕ್ತವಾದ; ರಣ್ವಯಾ=ರಮಣೀಯವಾದ; ಗಾತುಮತ್ಯಾ=ಎಲ್ಲವನ್ನೂ ತಿಳಿದಿರುವ; ತೇ ಸಗ್ಂಸದಾ=ನಿನ್ನ ಸಭೆಯೊಡನೆ; ಸಕ್ಷೀಮಹಿ=ನಾವೂ ಸೇರಿಕೊಳ್ಳುತ್ತೇವೆ./ನಿನ್ನವರಾಗುತ್ತೇವೆ.

---

ನಮಗೆ ಒದಗಬಹುದಾದ ರೋಗಗಳನ್ನು ಪರಿಹರಿಸು. ಯಾವ ಕಾರ್ಯಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತೇವೆಯೋ ಅದನ್ನು ಪ್ರೀತಿಯಿಂದ ನೆರವೇರಿಸಿಕೊಡು.

ಆವಃ ಕ್ಷೇಮ ಉತ ಯೋಗೇ ವರಂ ನೋ ಯೂಯಂ

ಪಾತ ಸ್ವಸ್ತಿಭಿಸ್ಸದಾ ನಃ ॥ ಯಥ್ಸಾಯಂ

ಪ್ರಾತರಗ್ನಿಹೋತ್ರಂ ಜುಹೋ-

---

ಆವಃ । ಕ್ಷೇಮೇ । ಉತ । ಯೋಗೇ । ವರಮ್ । ನಃ । ಯೂಯಮ್ । ಪಾತ । ಸ್ವಸ್ತಿಭಿರಿತಿ ಸ್ವಸ್ತಿ-ಭಿಃ । ಸದಾ । ನಃ ॥ ಯತ್ । ಸಾಯಂಪ್ರಾತರಿತಿ ಸಾಯಂ-ಪ್ರಾತಃ । ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್ । ಜುಹೋತಿ ।

---

ನಃ=ನಮ್ಮನ್ನು; ವರಮ್=ಚೆನ್ನಾಗಿ; *ಕ್ಷೇಮೇ=ಲಬ್ಧಪರಿಪಾಲನರೂಪವಾದ ಕ್ಷೇಮದ ವಿಷಯದಲ್ಲಿಯೂ; ಉತ=ಮತ್ತು *ಯೋಗೇ=ಅಪೇಕ್ಷಿತಪ್ರಾಪ್ತಿರೂಪವಾದ ಯೋಗದ ವಿಷಯದಲ್ಲಿಯೂ; ಆವಃ=ರಕ್ಷಿಸು. *ಯೂಯಮ್=ನೀವು; ಸದಾ =ಯಾವಾಗಲೂ; ನಃ=ನಮ್ಮನ್ನು; ಸ್ವಸ್ತಿಭಿಃ=ಶ್ರೇಯಸ್ಸುಗಳಿಂದ; ಪಾತ=ರಕ್ಷಿಸಿರಿ.

---

ವಾಸ್ತೋಷ್ಪತೀಯಹೋಮಕ್ಕಾಗಿ ಪ್ರಸ್ತಾವ

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ಸಾಯಂಪ್ರಾತಃ ಅಗ್ನಿಹೋತ್ರಮ್ ಜುಹೋತಿ | ಸಾಯಂಕಾಲ ಮತ್ತು ಪ್ರಾತಃಕಾಲ ಅಗ್ನಿಹೋತ್ರವನ್ನು ಮಾಡುತ್ತಾನೆಂಬುದು |

---

ನಮ್ಮವರಾದ ಪುತ್ರಾದಿಮನುಷ್ಯರಿಗೂ ಗವಾದಿಪಶುಗಳಿಗೂ ಸುಖಪ್ರದನಾಗು.

---

* ಅಲಬ್ಧಸ್ಯ ಅಪೇಕ್ಷಿತಸ್ಯ ಲಾಭಃ ಯೋಗಃ=ಬಯಸಿ ದೊರೆಯದೆ ಇರುವುದರ ದೊರಕುವಿಕೆ.
* ಲಬ್ಧಸ್ಯ ಪರಿಪಾಲನಮ್ ಕ್ಷೇಮಃ=ದೊರಕಿದ್ದನ್ನು ಉಳಿಸಿಕೊಳ್ಳುವಿಕೆ. ನಮಗೆ ಬೇಕಾದುದೆಲ್ಲವೂ ಇವೆರಡರಲ್ಲಿಯೇ ಸೇರಿಹೋಗುತ್ತವೆ.
* ಗೌರವಾರ್ಥವಾದ ಬಹುವಚನ.

-ತ್ಯಾಹುತೀಷ್ಟಕಾ ಏವ ತಾ ಉಪ ಧತ್ತೇ [..ಧತ್ತೇ(೩೭)]

ಯಜಮಾನೋಽಹೋರಾತ್ರಾಣಿ ವಾ ಏತಸ್ಯೇಷ್ಟಕಾ ಯ

ಆಹಿತಾಗ್ನಿರ್ಯತ್ಸಾಯಂ ಪ್ರಾತರ್ಜುಹೋ

ತ್ಯಹೋರಾತ್ರಾಣ್ಯೇವಾಽಽಪ್ತ್ವೇ-

---

ಆಹುತೀಷ್ಟಕಾ ಇತ್ಯಾಹುತಿ-ಇಷ್ಟಕಾಃ । ಏವ । ತಾಃ । ಉಪೇತಿ । ಧತ್ತೇ [೩೭]

ಯಜಮಾನಃ । ಅಹೋರಾತ್ರಾಣೀತ್ಯಹಃ-ರಾತ್ರಾಣಿ । ವೈ । ಏತಸ್ಯ । ಇಷ್ಟಕಾಃ । ಯಃ ।

ಆಹಿತಾಗ್ನಿರಿತ್ಯಾಹಿತ-ಅಗ್ನಿಃ । ಯತ್ । ಸಾಯಂಪ್ರಾತರಿತಿ ಸಾಯಂ-ಪ್ರಾತಃ ।

ಜುಹೋತಿ । ಅಹೋರಾತ್ರಾಣೀತ್ಯಹಃ -ರಾತ್ರಾಣಿ । ಏವ । ಆಪ್ತ್ವಾ ।

---

| | |
|---|---|
| ಯಜಮಾನಃ ತಾಃ ಆಹುತೀಷ್ಟಕಾಃ ಏವ ಉಪಧತ್ತೇ | ಯಜಮಾನನು ಆಹುತಿರೂಪವಾದ ಇಷ್ಟಕೆಗಳನ್ನೇ ಉಪಧಾನ ಮಾಡಿದಂತವನಾಗುತ್ತಾನೆ. |
| ಯಃ ಆಹಿತಾಗ್ನಿಃ | ಯಾರು ಆಹಿತಾಗ್ನಿಯಾಗಿರುವನೋ |
| ಏತಸ್ಯ ಅಹೋರಾತ್ರಾಣಿ ವೈ ಇಷ್ಟಕಾಃ | ಅವನಿಗೆ ಅಹೋರಾತ್ರರೂಪರಾದ ಕಾಲಗಳೇ ಇಷ್ಟಕಾರೂಪವಾಗಿವೆ. |
| ಯತ್ ಸಾಯಂಪ್ರಾತಃ ಜುಹೋತಿ | ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ [ಅಗ್ನಿಹೋತ್ರಹೋಮವನ್ನು] ಮಾಡುತ್ತಾನೆ ಎಂಬುದು ಯಾವುದುಂಟೋ |
| ಅಹೋರಾತ್ರಾಣಿ ಏವ ಆಪ್ತ್ವಾ | ಹಗಲು-ರಾತ್ರಿಗಳನ್ನೇ ಹೊಂದಿ |

---

ಗೃಹರಕ್ಷಕನಾದ ಗಾರ್ಹಪತ್ಯಾಗ್ನಿಯೇ! ಸರ್ವಶಕ್ತವಾದ, ರಮಣೀಯವಾದ ಎಲ್ಲವನ್ನೂ ತಿಳಿದಿರುವ ನಿನ್ನ ಸಭೆಯಲ್ಲಿ ನಿನ್ನವರಾಗಿ ನಾವೂ ಸೇರಿಕೊಳ್ಳುತ್ತೇವೆ.

ಷ್ಟಕಾಃ ಕೃತ್ವೋಪಧತ್ತೇ ದಶ ಸಮಾನತ್ರ ಜುಹೋತಿ

ದಶಾಕ್ಷರಾ ವಿರಾಡ್ವಿರಾಜಮೇವಾಽಽಪ್ತ್ವೇಷ್ಟಕಾಂ

ಕೃತ್ವೋಪಧತ್ತೇಽಥೋ

---

ಇಷ್ಟಕಾಃ । ಕೃತ್ವಾ । ಉಪೇತಿ । ಧತ್ತೇ । ದಶ । ಸಮಾನತ್ರ । ಜುಹೋತಿ । ದಶಾಕ್ಷರೇತಿ ದಶ-ಅಕ್ಷರಾ । ವಿರಾಡಿತಿ ವಿ-ರಾಟ್ । ವಿರಾಜಮಿತಿ ವಿ-ರಾಜಮ್ । ಏವ । ಆಪ್ತ್ವಾ । ಇಷ್ಟಕಾಮ್ । ಕೃತ್ವಾ । ಉಪೇತಿ । ಧತ್ತೇ । ಅಥೋ ಇತಿ ।

---

| | |
|---|---|
| ಇಷ್ಟಕಾಃ ಕೃತ್ವಾ ಉಪಧತ್ತೇ | [ಅವುಗಳನ್ನೇ] ಇಷ್ಟಕೆಗಳನ್ನು ಮಾಡಿಕೊಂಡು ಉಪಧಾನ ಮಾಡುತ್ತಾನೆ. |
| ದಶ ಸಮಾನತ್ರ ಜುಹೋತಿ | ಒಂದೇ ಕಡೆಯಲ್ಲಿ ಹತ್ತು ದಿನಗಳಿದ್ದು ಹೋಮ ಮಾಡಬೇಕು. |
| ದಶಾಕ್ಷರಾ ವಿರಾಟ್ | ವಿರಾಟ್ ಛಂದಸ್ಸು ಹತ್ತು ಅಕ್ಷರಗಳ ಪಾದ ದಿಂದ ಕೂಡಿದೆ. |
| ವಿರಾಜಮ್ ಆಪ್ತ್ವಾ ಏವ | ಆ ದಶಸಂಖ್ಯಾಯುತವಾದ ವಿರಾಜವನ್ನೇ ಹೊಂದಿ |
| ಇಷ್ಟಕಾಮ್ ಕೃತ್ವಾ ಉಪಧತ್ತೇ | ಅದನ್ನೇ ಇಷ್ಟಕೆಯನ್ನಾಗಿ ಮಾಡಿ ಉಪಧಾನ ಮಾಡಿದವನಾಗುತ್ತಾನೆ. |
| ಅಥೋ | ಮತ್ತೆ [ಹೀಗೆ ಮಾಡುವುದರಿಂದ] |

---

ನೀನು ನಮ್ಮ ಯೋಗಕ್ಷೇಮವಿಷಯದಲ್ಲಿ ಯಾವಾಗಲೂ ಚೆನ್ನಾಗಿ ರಕ್ಷಿಸು. ಯಾವಾಗಲೂ ನಾನಾವಿಧವಾದ ಶ್ರೇಯಸ್ಸುಗಳಿಂದ ನಮ್ಮನ್ನು ಕಾಪಾಡು.

ಸೋಮಯಾಗದಲ್ಲಿ ಮಣ್ಣಿನ ಇಟ್ಟಿಗೆಗಳನ್ನು ಮಾಡಿ ಮಂತ್ರಪೂರ್ವಕವಾಗಿ ಅವುಗಳನ್ನು ಉಪಧಾನ ಮಾಡಿ ಗೊತ್ತಾದ ಆಕಾರದಲ್ಲಿ ಜೋಡಿಸಿ ಹೋಮವನ್ನು ಮಾಡುತ್ತಾರೆ.

ವಿರಾಜ್ಯೇವ ಯಜ್ಞಮಾಪ್ನೋತಿ ಚಿತ್ಯಶ್ಚಿತ್ಯೋಽಸ್ಯ ಭವತಿ ತಸ್ಮಾದ್ಯತ್ರ ದಶೋಷಿತ್ವಾ ಪ್ರಯಾತಿ ತದ್ಯಜ್ಞವಾಸ್ತ್ವ–

---

ವಿರಾಜೀತಿ ವಿ–ರಾಜಿ । ಏವ । ಯಜ್ಞಮ್ । ಆಪ್ನೋತಿ । ಚಿತ್ಯಶ್ಚಿತ್ಯ ಇತಿ ಚಿತ್ಯಃ–ಚಿತ್ಯಃ । ಅಸ್ಯ । ಭವತಿ । ತಸ್ಮಾತ್ । ಯತ್ರ । ದಶ । ಉಷಿತ್ವಾ । ಪ್ರಯಾತೀತಿ ಪ್ರ–ಯಾತಿ । ತತ್ । ಯಜ್ಞವಾಸ್ತ್ವಿತಿ ಯಜ್ಞ–ವಾಸ್ತು ।

---

| | |
|---|---|
| ವಿರಾಜಿ ಏವ ಯಜ್ಞಮ್ ಆಪ್ನೋತಿ | ವಿರಾಜದಲ್ಲಿಯೇ ಅಗ್ನಿಷ್ಟೋಮಯಾಗ ವನ್ನು ಮಾಡಿದಂತಾಗುತ್ತದೆ. |
| ಚಿತ್ಯಶ್ಚಿತ್ಯಃ ಅಸ್ಯ ಭವತಿ | ಈ ಯಜಮಾನನಿಗೆ ಮತ್ತೆ ಮತ್ತೆ ಚಿತಿಗಳಾ ದಂತಾಗುತ್ತದೆ. |

### ವಾಸ್ತೋಷ್ಪತೀಯಹೋಮವಿಧಿ; ಪ್ರಶಂಸೆ

| | |
|---|---|
| ತಸ್ಮಾತ್ ಯತ್ರ | ಆದುದರಿಂದ ಎಲ್ಲಿ |
| ದಶ ಉಷಿತ್ವಾ | ಹತ್ತು ದಿನಗಳ ಕಾಲ ಇದ್ದು |
| ಪ್ರಯಾತಿ | ಪ್ರಯಾಣ ಮಾಡುತ್ತಾನೆಯೋ |
| ತತ್ ಯಜ್ಞವಾಸ್ತು | ಆ ಪ್ರದೇಶವೇ ಯಜ್ಞಭೂಮಿಯಾಗುತ್ತದೆ. |

---

ಇದನ್ನೇ ಚಯನವೆಂದು ಹೇಳುತ್ತಾರೆ. ಅಲ್ಲಿ 'ಏಕಚಿತೀಕಂ ಚಿನ್ವೀತ' 'ತ್ರಿಚಿತೀಕಂ ಚಿನ್ವೀತ' 'ಪಂಚಚಿತೀಕಂ ಚಿನ್ವೀತ' ಎಂಬ ಪ್ರಕಾರಭೇದಗಳನ್ನು ಹೇಳಿರುತ್ತಾರೆ. ಇಲ್ಲಿ ಆ ಚಿತಿಯ ಉಪಧಾನದಂತೆ ಎಂಬುದಾಗಿ ಹೇಳಿ ವಾಸ್ತುಹೋಮದ ಪ್ರಶಂಸೆಯನ್ನು ಮಾಡಿರುತ್ತಾರೆ.

ಅಗ್ನಿಷ್ಟೋಮಯಾಗದ ಮೂರು ಚಿತಿಗಳಂತೆ ಸಾಯಂ ಪ್ರಾತಃಕಾಲದಲ್ಲಿ ಮಾಡುವ ಅಗ್ನಿಹೋತ್ರಹೋಮಗಳೇ ಒಂದು ಚಿತಿ. ಹಗಲು–ರಾತ್ರಿಗಳೆಂಬ ಕಾಲಗಳೇ ಒಂದು ಚಿತಿ. ಒಂದೇ ಸ್ಥಳದಲ್ಲಿ ಹತ್ತು ದಿನಗಳು ಇದ್ದು ಹೋಮವನ್ನು ಮಾಡುವುದರಿಂದ

-ವಾಸ್ತ್ವೇವ ತದ್ಯತ್ತತೋಽರ್ವಾಚೀನಗ್ಂ

[ರ್ವಾಚೀನಮ್(೩೭)]ರುದ್ರಃ ಖಲು ವೈ ವಾಸ್ತೋಷ್ಪತಿ

ರ್ಯದಹುತ್ವಾ ವಾಸ್ತೋಷ್ಪತೀಯಂ ಪ್ರಯಾಯಾ-

---

ಅವಾಸ್ತು । ಏವ । ತತ್ । ಯತ್ । ತತಃ । ಅರ್ವಾಚೀನಮ್ [೩೭] ರುದ್ರಃ । ಖಲು ।

ವೈ । ವಾಸ್ತೋಷ್ಪತಿರಿತಿ ವಾಸ್ತೋಃ -ಪತಿಃ । ಯತ್ । ಅಹುತ್ವಾ । ವಾಸ್ತೋಷ್ಪತೀಯ

ಮಿತಿ ವಾಸ್ತೋಃ-ಪತೀಯಮ್ । ಪ್ರಯಾಯಾದಿತಿ ಪ್ರ-ಯಾಯಾತ್ ।

---

| | |
|---|---|
| **ತತಃ ಅರ್ವಾಚೀನಮ್ ಯತ್ ತತ್** | [ಹತ್ತು ದಿನಗಳಿಗಿಂತಲೂ] ಅದಕ್ಕಿಂತಲೂ ಹಿಂದಿನ ದ್ದಿನಗಳಷ್ಟಿದ್ದು ಹೊರಡುವ ಯಾವ ಪ್ರದೇಶವಿದೆಯೋ ಅದು |
| **ಅವಾಸ್ತು ಏವ** | ಯಜ್ಞಭೂಮಿಯೇ ಆಗುವುದಿಲ್ಲ. |
| **ರುದ್ರಃ ಖಲು ವೈ ವಾಸ್ತೋಷ್ಪತಿಃ** | ಭಯಂಕರನಾದ ರುದ್ರನೇ ವಾಸ್ತೋಷ್ಪತಿಯಾಗಿರುತ್ತಾನೆ. |
| **ಯತ್ ವಾಸ್ತೋಷ್ಪತೀಯಮ್ ಅಹುತ್ವಾ ಪ್ರಯಾಯಾತ್** | ಒಮ್ಮೆ ಅಗ್ನಿಹೋತ್ರಿಯು ವಾಸ್ತೋಷ್ಪತೀಯ ಹೋಮವನ್ನು ಮಾಡದೆ ಪ್ರದೇಶಾಂತರಕ್ಕೆ ಪ್ರಯಾಣವನ್ನು ಮಾಡಿದರೆ |

---

ಹತ್ತು ಸಂಖ್ಯೆಯಿಂದ ಕೂಡಿದ ಆ ವಿರಾಟ್ಸಂಖ್ಯೆಯೇ ಒಂದು ಚಿತಿ. ಹೀಗೆ ಯಜಮಾನನು 'ತ್ರಿಚಿತೀಕಂ ಚಿನ್ವೀತ' ಎಂದು ಹೇಳಿರುವಂತೆ ಮೂರು ಚಿತಿಗಳುಳ್ಳ ಇಷ್ಟಕೋಪಧಾನದಿಂದ ಕೂಡಿದ ಅಗ್ನಿಷ್ಟೋಮವನ್ನೇ ಮಾಡಿದಂತಾಯಿತು ಎಂದು ವಾಸ್ತೋಷ್ಪತೀಯಹೋಮದ ಪ್ರಶಂಸೆಯು ಇಲ್ಲಿ ಇದೆ.

ದ್ರುದ್ರ ಏನಂ ಭೂತ್ವಾಽಗ್ನಿರನೂತ್ಥಾಯ ಹನ್ಯಾ
ದ್ವಾಸ್ತೋಷ್ಪತೀಯಂ ಜುಹೋತಿ ಭಾಗಧೇಯೇ
ನೈವೈನಗ್‍ಂ ಶಮಯತಿ ನಾರ್ತಿಮಾರ್ಛತಿ ಯಜಮಾನೋ

---

ರುದ್ರಃ । ಏನಮ್ । ಭೂತ್ವಾ । ಅಗ್ನಿಃ । ಅನೂತ್ಥಾಯೇತ್ಯನು-ಉತ್ಥಾಯ । ಹನ್ಯಾತ್ । ವಾಸ್ತೋಷ್ಪತೀಯಮಿತಿ ವಾಸ್ತೋಃ-ಪತೀಯಮ್ । ಜುಹೋತಿ । ಭಾಗಧೇಯೇನೇತಿ ಭಾಗ-ಧೇಯೇನ । ಏವ । ಏನಮ್ । ಶಮಯತಿ । ನ । ಆರ್ತಿಮ್ । ಏತಿ । ಋಚ್ಛತಿ । ಯಜಮಾನಃ ।

---

| | |
|---|---|
| **ಅಗ್ನಿಃ ರುದ್ರಃ ಭೂತ್ವಾ ಏನಮ್ ಅನೂತ್ಥಾಯ ಹನ್ಯಾತ್** | ಅಗ್ನಿಯೇ ಕ್ರೂರನಾದ ರುದ್ರನಾಗಿ ಆಹಿತಾಗ್ನಿಯನ್ನು ಅನುಸರಿಸಿ ಎದ್ದು ನಿಂತು ಕೊಂದಾನು. |
| **ವಾಸ್ತೋಷ್ಪತೀಯಮ್ ಜುಹೋತಿ** | [ಆದುದರಿಂದ] ವಾಸ್ತೋಷ್ಪತೀಯಹೋಮವನ್ನು ಅನುಷ್ಠಿಸಬೇಕು. |
| **ಏನಮ್ ಭಾಗಧೇಯೇನ ಏವ ಶಮಯತಿ** | ಹವಿರ್ಭಾಗದಿಂದಲೇ ಆತನನ್ನು ಶಾಂತಗೊಳಿಸುತ್ತಾನೆ. |
| **ಯಜಮಾನಃ ಆರ್ತಿಮ್ ನ ಋಚ್ಛತಿ** | ಯಜಮಾನನು[ಅಗ್ನಿಯ ಕೋಪದಿಂದ] ತೊಂದರೆಯನ್ನು ಹೊಂದುವುದಿಲ್ಲ. |

---

ಅಗ್ನಿಹೋತ್ರಿಯು ಒಂದೆಡೆ ಹತ್ತು ದಿನಗಳು ಇದ್ದರೆ ಆ ಪ್ರದೇಶವು ಯಜ್ಞಭೂಮಿಯಾಗುತ್ತದೆ. ಅದಕ್ಕಿಂತಲೂ ಕಡಿಮೆ ದಿನಗಳು ವಾಸಿಸುವ ಪ್ರದೇಶವು ಯಜ್ಞಭೂಮಿಯೇ ಆಗುವುದಿಲ್ಲ. ಆದುದರಿಂದ ಅಂತಹ ಕಡೆ ವಾಸ್ತೋಷ್ಪತೀಯ ಹೋಮವನ್ನು ಮಾಡಬೇಕಾಗಿಲ್ಲ.

ಯದ್ಯುಕ್ತೇ ಜುಹುಯಾದ್ಯಥಾ ಪ್ರಯಾತೇ ವಾಸ್ತಾವಾಹುತಿಂ

ಜುಹೋತಿ ತಾದೃಗೇವ ತದ್ಯದಯುಕ್ತೇ ಜುಹುಯಾದ್ಯಥಾ

ಕ್ಷೇಮ ಆಹುತಿಂ ಜುಹೋತಿ ತಾದೃಗೇವ ತ–

---

ಯತ್ । ಯುಕ್ತೇ । ಜುಹುಯಾತ್ । ಯಥಾ । ಪ್ರಯಾತ ಇತಿ ಪ್ರ–ಯಾತೇ । ವಾಸ್ತೌ ।

ಆಹುತಿಮಿತ್ಯಾ–ಹುತಿಮ್ । ಜುಹೋತಿ । ತಾದೃಕ್ । ಏವ । ತತ್ । ಯತ್ ।

ಅಯುಕ್ತೇ । ಜುಹುಯಾತ್ । ಯಥಾ । ಕ್ಷೇಮೇ । ಆಹುತಿಮಿತ್ಯಾ–ಹುತಿಮ್ ।

ಜುಹೋತಿ । ತಾದೃಕ್ । ಏವ । ತತ್ ।

---

## ಹೋಮಕ್ಕೆ ಸಂಬಂಧಿಸಿದ ವಿಶೇಷವಿಧಿ; ಬ್ರಾಹ್ಮಣ

| | |
|---|---|
| **ಯುಕ್ತೇ** [ಸತಿ] **ಯತ್ ಜುಹುಯಾತ್** | ಎತ್ತುಗಳು ಗಾಡಿಗೆ ಕಟ್ಟಲ್ಪಡಲಾಗಿ ಹೋಮ ಮಾಡಿದರೆ |
| **ಯಥಾ ವಾಸ್ತೌ ಪ್ರಯಾತೇ** [ಸತಿ]**ಆಹುತಿಮ್ ಜುಹೋತಿ** | ಯಜ್ಞಪ್ರದೇಶವೇ ಹೊರಟು ಹೋದ ಮೇಲೆ ಹೋಮ ಮಾಡಿದರೆ ಹೇಗೋ |
| **ತಾದೃಕ್ ಏವ ತತ್** | ಅದರಂತೆ ಆಗುತ್ತದೆ. |
| **ಯತ್ ಅಯುಕ್ತೇ** [ಸತಿ] **ಜುಹುಯಾತ್** | ಎತ್ತುಗಳನ್ನು ಕಟ್ಟದೇ ಇರುವಾಗಲೇ ಹೋಮ ಮಾಡಿದರೆ |
| **ಯಥಾ ಕ್ಷೇಮೇ ಆಹುತಿಮ್ ಜುಹೋತಿ ತಾದೃಕ್ ಏವ ತತ್** | ಪ್ರಯಾಣವಿಲ್ಲದಿರುವಾಗ ಹೋಮ ಮಾಡಿದಂತಾಗುತ್ತದೆ. [ಹೀಗಾಗಿ ಹೇಗೆ ಮಾಡಿದರೂ] |

---

ರುದ್ರನೇ ವಾಸ್ತೋಷ್ಪತಿಯಾಗಿರುತ್ತಾನೆ. ಹೀಗಾಗಿ ವಾಸ್ತೋಷ್ಪತಿಹೋಮವನ್ನು ಅನುಷ್ಠಿಸದೇ ಪ್ರದೇಶಾಂತರಕ್ಕೆ ಪ್ರಯಾಣವನ್ನು ಮಾಡಿದರೆ ಅಗ್ನಿಯೇ ರುದ್ರನಾಗಿ ಆಹಿತಾಗ್ನಿಯನ್ನು ಹಿಂಸಿಸಿಯಾನು. ವಾಸ್ತೋಷ್ಪತಿಯ ಹವಿಸ್ಸಿನ ಭಾಗವನ್ನು ಕೊಟ್ಟರೆ ಅಗ್ನಿಯು ಶಾಂತನಾಗುವನು. ಯಜಮಾನನು ತೊಂದರೆಯನ್ನು ಪಡೆಯುವುದಿಲ್ಲ.

ದಹುತಮಸ್ಯ ವಾಸ್ತೋಷ್ಪತೀಯಗ್ಂಸ್ಯಾದ್ದ[ಸ್ಯಾತ್(೩೮)

ದಕ್ಷಿಣೋ]ಕ್ಷಿಣೋ ಯುಕ್ತೋ ಭವತಿ ಸವ್ಯೋಽಯುಕ್ತೋಽಥ

ವಾಸ್ತೋಷ್ಪತೀಯಂ ಜುಹೋತ್ಯುಭಯಮೇವಾಕರಪರಿವರ್ಗ

ಮೇವೈನಗ್ಂ ಶಮಯತಿ

---

ಆಹುತಮ್ । ಅಸ್ಯ । ವಾಸ್ತೋಷ್ಪತೀಯಮಿತಿ ವಾಸ್ತೋಃ – ಪತೀಯಮ್ । ಸ್ಯಾತ್ । [೩೮] ದಕ್ಷಿಣಃ । ಯುಕ್ತಃ । ಭವತಿ । ಸವ್ಯಃ । ಅಯುಕ್ತಃ । ಅಥ । ವಾಸ್ತೋಷ್ಪತೀಯಮಿತಿ ವಾಸ್ತೋಃ–ಪತೀಯಮ್ । ಜುಹೋತಿ । ಉಭಯಮ್ । ಏವ । ಅಕಃ । ಅಪರಿವರ್ಗಮಿತ್ಯಪರಿ–ವರ್ಗಮ್ । ಏವ । ಏನಮ್ । ಶಮಯತಿ ।

---

| | |
|---|---|
| ಅಸ್ಯ ವಾಸ್ತೋಷ್ಪತೀಯಮ್ ಆಹುತಮ್ ಸ್ಯಾತ್ | ವಾಸ್ತೋಷ್ಪತೀಯಹೋಮವು ಮಾಡಿದಂತೆಯೇ ಆಗುವುದಿಲ್ಲ. |
| ದಕ್ಷಿಣಃ ಯುಕ್ತಃ ಭವತಿ | ಬಲಗಡೆಯ ಎತ್ತು ಗಾಡಿಗೆ ಕಟ್ಟಲ್ಪಟ್ಟಿರಬೇಕು. |
| ಸವ್ಯಃ ಅಯುಕ್ತಃ [ಭವತಿ] | ಎಡಗಡೆಯ ಎತ್ತು ಕಟ್ಟಲ್ಪಟ್ಟಿರಬಾರದು. |
| ಅಥ ವಾಸ್ತೋಷ್ಪತೀಯಮ್ ಜುಹೋತಿ | ಈ ಸಮಯದಲ್ಲಿ ವಾಸ್ತೋಷ್ಪತೀಯಹೋಮವನ್ನು ಮಾಡಬೇಕು.[ವಿಧಿ] |
| ಉಭಯಮ್ ಏವ ಅಕಃ | ಹೀಗೆ ಮಾಡುವುದರಿಂದ ಎರಡನ್ನೂ ಮಾಡಿದಂತಾಯಿತು. |
| ಏನಮ್ ಅಪರಿವರ್ಗಮ್ ಏವ ಶಮಯತಿ | ಅಗ್ನಿಯನ್ನು ಸರ್ವಪ್ರಕಾರದಿಂದಲೂ ಶಾಂತಗೊಳಿಸಿದಂತಾಯಿತು. |

---

ವಾಸ್ತೋಷ್ಪತೀಯಹೋಮವನ್ನು ಅನುಷ್ಠಿಸಬೇಕಾದ ಕಾಲವನ್ನು ಕುರಿತು ಇಲ್ಲಿ

# ಯದೇಕಯಾ ಜುಹುಯಾದ್ದರ್ವಿಹೋಮಂ

# ಕುರ್ಯಾತ್ಪುರೋಽನುವಾಕ್ಯಾಮನೂಚ್ಯ ಯಾಜ್ಯಯಾ

# ಜುಹೋತಿ ಸದೇವತ್ವಾಯ

---

ಯತ್ । ಏಕಯಾ । ಜುಹುಯಾತ್ । ದರ್ವಿಹೋಮಮಿತಿ ದರ್ವಿ–ಹೋಮಮ್ । ಕುರ್ಯಾತ್ । ಪುರೋಽನುವಾಕ್ಯಾಮಿತಿ ಪುರಃ–ಅನುವಾಕ್ಯಾಮ್ । ಅನೂಚ್ಯೇತ್ಯನು–ಉಚ್ಯ । ಯಾಜ್ಯಯಾ । ಜುಹೋತಿ । ಸದೇವತ್ವಾಯೇತಿ ಸದೇವ–ತ್ವಾಯ ।

---

## ಪುರೋನುವಾಕ್ಯೆಯನ್ನು ಹೇಳಿ ಯಾಜ್ಯೆಯಿಂದ ಹೋಮ ಮಾಡಬೇಕೆಂಬ ವಿಧಿ; ಪ್ರಶಂಸೆ

| | |
|---|---|
| ಯತ್ ಏಕಯಾ ಜುಹುಯಾತ್ | ಒಂದು ಋಕ್ಕಿನಿಂದಲೇ ಹೋಮವನ್ನು ಮಾಡಿದರೆ |
| ದರ್ವಿಹೋಮಮ್ ಕುರ್ಯಾತ್ | ದರ್ವಿಹೋಮವನ್ನು ಮಾಡಿದಂತಾಗುತ್ತದೆ. |
| ಪುರೋನುವಾಕ್ಯಾಮ್ ಅನೂಚ್ಯ | ಪುರೋನುವಾಕ್ಯವನ್ನು ಮೊದಲು ಹೇಳಿ ಬಳಿಕ |
| ಯಾಜ್ಯಯಾ ಜುಹೋತಿ | ಯಾಜ್ಯೆಯಿಂದ ಹೋಮ ಮಾಡಬೇಕು. ಇದು |
| ಸದೇವತ್ವಾಯ | ದೇವತೆಗಳ ಅತ್ಯಂತ ಪ್ರೀತಿಗೆ ಕಾರಣವಾಗುತ್ತದೆ. |

---

ಹೇಳಲಾಗಿದೆ. 'ಪ್ರಯಾಸ್ಯನ್ ಜುಹೋತಿ' ಎಂದು ಹೇಳಿರುವುದರಿಂದ ಎತ್ತುಗಳನ್ನು ಕಟ್ಟಿದ ಮೇಲೆ ಹೋಮವನ್ನು ಅನುಷ್ಠಿಸಿದರೆ ಯಜ್ಞಭೂಮಿಯೇ ಇಲ್ಲದ ಕಡೆಯಲ್ಲಿ ಹೋಮವನ್ನು ಮಾಡಿದಂತಾಗುತ್ತದೆ. ಎತ್ತುಗಳನ್ನು ಕಟ್ಟುವ ಮೊದಲೇ ಹೋಮವನ್ನು ಮಾಡಿದರೆ ಆಗಲೂ 'ಪ್ರಯಾಸ್ಯನ್' ಎಂಬುದನ್ನು ಅನುಸರಿಸದಿರುವುದರಿಂದ ಪ್ರಯಾಣವಿಲ್ಲದಿರುವಾಗಲೇ ಹೋಮ ಮಾಡಿದಂತಾಗುತ್ತದೆ. ಹೀಗಾಗಿ ಹೇಗೆ ಮಾಡಿದರೂ 'ಅವಿಧಿನಾ ಕೃತಮ್ ಅಕೃತಮ್' [ವಿಧಿವಚನವಿಲ್ಲದೇ ಮಾಡಿದರೂ ಮಾಡಿದಂತಾಗುವುದಿಲ್ಲ]ಎಂಬಂತೆ ವಾಸ್ತೋಷ್ಪತೀಯಹೋಮವನ್ನು ಮಾಡಿದಂತೆಯೇ ಆಗುವುದಿಲ್ಲ.

ಯದ್ಧುತ ಆದಧ್ಯಾದ್ರುದ್ರಂ ಗೃಹಾನನ್ವಾರೋಹಯೇದ್ಯದವ
ಕ್ಷಾಣಾನ್ಯಸಂಪ್ರಕ್ಷಾಪ್ಯ ಪ್ರಯಾಯಾದ್ಯಥಾ ಯಜ್ಞವೇಶಸಂ
ವಾಽಽದಹನಂ ವಾ ತಾದೃಗೇವ ತ-

---

ಯತ್ । ಹುತೇ । ಆದಧ್ಯಾದಿತ್ಯಾ-ದಧ್ಯಾತ್ । ರುದ್ರಮ್ । ಗೃಹಾನ್ । ಅನ್ವಾರೋಹಯೇದಿತ್ಯನು-ಆರೋಹಯೇತ್ । ಯತ್ । ಅವಕ್ಷಾಣಾನೀತ್ಯವ-ಕ್ಷಾಣಾನಿ । ಅಸಂಪ್ರಕ್ಷಾಪ್ಯೇತ್ಯಸಮ್-ಪ್ರಕ್ಷಾಪ್ಯ । ಪ್ರಯಾಯಾದಿತಿ ಪ್ರ-ಯಾಯಾತ್ । ಯಥಾ । ಯಜ್ಞವೇಶಸಮಿತಿ ಯಜ್ಞ-ವೇಶಸಮ್ । ವಾ । ಆದಹನಮಿತ್ಯಾ-ದಹನಮ್ । ವಾ । ತಾದೃಕ್ । ಏವ । ತತ್ ।

---

ಬಂಡಿಯಲ್ಲಿ ಉಪಕರಣವನ್ನು ತುಂಬುವ ವಿಧಿ; ಬ್ರಾಹ್ಮಣ

| | |
|---|---|
| **ಯತ್ ಹುತೇ[ಸತಿ] ಆದಧ್ಯಾತ್** | ಅಗ್ನಿಹೋತ್ರಹೋಮವನ್ನು ಮಾಡಿದ ಮೇಲೆ ಗೃಹೋಪಕರಣಗಳನ್ನು ಬಂಡಿಯಲ್ಲಿ ಹಾಕುವುದು ಯಾವುದುಂಟೋ ಅದರಿಂದ |
| **ರುದ್ರಮ್ ಗೃಹಾನ್** | ರುದ್ರರೂಪನಾದ ಅಗ್ನಿಯನ್ನು ಗೃಹವಸ್ತುಗಳನ್ನು |
| **ಅನ್ವಾರೋಹಯೇತ್** | ಅನುಸರಿಸಿ ಬಂಡಿಯಲ್ಲಿ ಏರಿಸಿದಂತಾಗುತ್ತದೆ. |
| **ಯತ್ ಅವಕ್ಷಾಣಾನಿ ಅಸಂಪ್ರಕ್ಷಾಪ್ಯ** | ಉರಿಯುತ್ತಿರುವ ಕೊಳ್ಳಿಗಳನ್ನು ಆರಿಸದೇ |
| **ಪ್ರಯಾಯಾತ್** | ಹೊರಡುವುದೆಂಬುದು ಯಾವುದೋ |
| **ತತ್ ಯಥಾ ಯಜ್ಞವೇಶಸಮ್ ವಾ** | ಅದು ಯಜ್ಞವಿಘಾತವು ಹೇಗೋ |
| **ಆದಹನಮ್ ವಾ ತಾದೃಕ್ ಏವ** | ಸಂಪೂರ್ಣಗೃಹದಹನವೋ ಹೇಗೋ ಹಾಗೆಯೇ [ಆಗುತ್ತದೆ] |

–ದಯಂ ತೇ ಯೋನಿರ್ ಋತ್ವಿಯ ಇತ್ಯರಣ್ಯೋ
ಸ್ಸಮಾರೋಹಯತ್ಯೇ[ರೋಹಯತಿ(೩೯)ಏಷ]ಷ ವಾ
ಅಗ್ನೇರ್ಯೋನಿಸ್ಸ್ವ ಏವೈನಂ ಯೋನೌ ಸಮಾರೋಹಯತ್ಯ

---

ಅಯಮ್ । ತೇ । ಯೋನಿಃ । ಋತ್ವಿಯಃ । ಇತಿ । ಅರಣ್ಯೋಃ । ಸಮಾರೋಹಯತೀತಿ ಸಮ್–ಆರೋಹಯತಿ ।[೩೯]। ಏಷಃ । ವೈ । ಅಗ್ನೇಃ । ಯೋನಿಃ । ಸ್ವೇ । ಏವ । ಏನಮ್ । ಯೋನೌ । ಸಮಾರೋಹಯತೀತಿ ಸಮ್–ಆರೋಹಯತಿ ।

---

ಹಿಂದಿನ ದೋಷಪರಿಹಾರಕ್ಕಾಗಿ ಅಗ್ನಿಸಮಾರೋಪದ ವಿಧಿ; ಬ್ರಾಹ್ಮಣ

| | |
|---|---|
| ಅಯಮ್ ತೇ ಯೋನಿಃ ಋತ್ವಿಯಃ ಇತಿ | * 'ಅಯಂ ತೇ ಯೋನಿಃ' ಎಂಬ ಮಂತ್ರದಿಂದ |
| ಅರಣ್ಯೋಃ ಸಮಾರೋಹಯತಿ | ಅರಣಿಗಳಲ್ಲಿ [ಅಗ್ನಿಯ] ಸಮಾರೋಪ ಮಾಡಬೇಕು. |
| ಏಷಃ ವೈ ಅಗ್ನೇಃ ಯೋನಿಃ | ಆ ಅರಣಿದ್ವಯವೇ ಅಗ್ನಿಯ ಉತ್ಪತ್ತಿಸ್ಥಾನವಾಗಿದೆ. |
| ಸ್ವೇ ಯೋನೌ ಏವ ಏನಮ್ ಸಮಾರೋಹಯತಿ | ಈ ಅಗ್ನಿಯನ್ನು ತನ್ನ ಉತ್ಪತ್ತಿಸ್ಥಾನದಲ್ಲಿಯೇ ಸಮಾರೋಪ ಮಾಡಿದವನಾಗುತ್ತಾನೆ. |

---

* ಅಯಂ ತೇ ಯೋನಿರ್ ಋತ್ವಿಯೋ ಯತೋ ಜಾತೋ ಅರೋಚಥಾಃ ।
ತಂ ಜಾನನ್ನಗ್ನ ಆರೋಹಾಥಾ ನೋ ವರ್ಧಯಾ ರಯಿಮ್ ॥ (ತೈ. ಸಂ. ೧.೫.೫)

-ಥೋ ಖಲ್ವಾಹುರ್ಯದರಣ್ಯೋಸ್ಸಮಾರೂಢೋ

ನಶ್ಯೇದುದಸ್ಯಾಗ್ನಿಸ್ಸೀದೇತ್ಪುನರಾಧೇಯಸ್ಸ್ಯಾದಿತಿ

---

ಅಥೋ ಇತಿ । ಖಲು । ಆಹುಃ । ಯತ್ । ಅರಣ್ಯೋಃ । ಸಮಾರೂಢ ಇತಿ ಸಮ್-ಆರೂಢಃ । ನಶ್ಯೇತ್ । ಉದಿತಿ । ಅಸ್ಯ । ಅಗ್ನಿಃ । ಸೀದೇತ್ । ಪುನರಾಧೇಯ ಇತಿ ಪುನಃ -ಆಧೇಯಃ । ಸ್ಯಾತ್ । ಇತಿ ।

---

**ಪಕ್ಷಾಂತರವಾಗಿ ಅತ್ಮಸಮಾರೋಪಣವಿಧಿ; ಬ್ರಾಹ್ಮಣ**

| | |
|---|---|
| **ಅಥೋ ಖಲು ಆಹುಃ** | ಕೆಲವು ವಿದ್ವಾಂಸರು ಹೀಗೆ ಹೇಳುತ್ತಾರೆ. |
| **ಯತ್ ಅರಣ್ಯೋಃ ಸಮಾರೂಢಃ** | ಅರಣಿಸಮಾರೋಪವನ್ನು ಮಾಡಿದಾಗ ಅರಣಿ |
| **ನಶ್ಯೇತ್** | ನಾಶದಿಂದ ಅಗ್ನಿಯು ನಷ್ಟವಾದರೆ |
| **ಅಸ್ಯ ಅಗ್ನಿಃ ಉತ್ ಸೀದೇತ್** | ಈ ಯಜಮಾನನು ಮೊದಲು ಆಧಾನ ಮಾಡಿರುವ ಅಗ್ನಿಯು ನಾಶ ಹೊಂದುತ್ತಾನೆ. |
| **ಪುನರಾಧೇಯಃ ಸ್ಯಾತ್ ಇತಿ** | ಆದುದರಿಂದ ಪುನರಾಧಾನ ಮಾಡಬೇಕಾಗುತ್ತದೆ. [ಎಂದು ಹೇಳುತ್ತಾರೆ] [ಈ ದೋಷ ನಿವೃತ್ತಿಗಾಗಿ] |

---

ಆಗುವುದಿಲ್ಲ.ಹೀಗಾಗಿ ಬಲಗಡೆಯ ಎತ್ತನ್ನು ಕಟ್ಟಿದ ಮೇಲೆ, ಎಡಗಡೆಯ ಎತ್ತನ್ನು ಕಟ್ಟದೇ ಇರುವಾಗ ವಾಸ್ತೋಷ್ಪತೀಯಹೋಮವನ್ನು ಮಾಡಬೇಕು. ಒಂದು ಎತ್ತನ್ನು ಕಟ್ಟಿರುವುದರಿಂದ ಪ್ರಯಾಣವನ್ನು ಆರಂಭಿಸಿದಂತೆಯೂ ಆಯಿತು. ಮತ್ತೊಂದು ಎತ್ತನ್ನು ಕಟ್ಟದಿರುವುದರಿಂದ ಪ್ರಯಾಣಾರಂಭವು ಮುಗಿದಂತೆಯೂ ಆಗಲಿಲ್ಲ. 'ಪ್ರಯಾಸ್ಯನ್' ಎಂಬ ವಚನವನ್ನು ಅನುಸರಿಸಿದಂತೆಯೂ ಆಯಿತು. ಬಲಗಡೆಯ ಎತ್ತನ್ನು ಕಟ್ಟಿ ಎಡಗಡೆಯ ಎತ್ತನ್ನು ಕಟ್ಟದಿರುವ ಕಾಲವೇ ವಾಸ್ತೋಷ್ಪತೀಯ ಹೋಮದ ಕಾಲ. ಈ ರೀತಿ ಅನುಷ್ಠಿಸುವುದರಿಂದ ಯಜಮಾನನಿಗೆ ಯಾವ ದೋಷವೂ ಸಂಭವಿಸದೆ ಸರ್ವಪ್ರಕಾರದಿಂದಲೂ ಅಗ್ನಿಯನ್ನು ಶಾಂತನನ್ನಾಗಿ ಮಾಡುತ್ತಾನೆ.

## ಯಾ ತೇ ಅಗ್ನೇ ಯಜ್ಞಿಯಾ ತನೂಸ್ತಯೇಹ್ಯಾ ರೋಹೇತ್ಯಾ
## ತ್ಮನ್ತ್ಸಮಾರೋಹಯತೇ ಯಜಮಾನೋ ವಾ ಅಗ್ನೇರ್ಯೋನಿಃ

---

ಯಾ । ತೇ । ಅಗ್ನೇ । ಯಜ್ಞಿಯಾ । ತನೂಃ । ತಯಾ । ಏತಿ । ಇಹಿ । ಏತಿ । ರೋಹ । ಇತಿ । ಆತ್ಮನ್ನ್ । ಸಮಾರೋಹಯತ ಇತಿ ಸಮ್–ಆರೋಹಯತೇ । ಯಜಮಾನಃ । ವೈ । ಅಗ್ನೇಃ । ಯೋನಿಃ ।

---

| | |
|---|---|
| ಯಾ ತೇ ಅಗ್ನೇ ಯಜ್ಞಿಯಾ ತನೂಃ ತಯಾ ಆ ಇಹಿ ಆ ರೋಹ ಇತಿ | * 'ಯಾ ತೇ ಅಗ್ನೇ ಯಜ್ಞಿಯಾ ತನೂಃ ತಯಾ ಏಹಿ ಆ ರೋಹ' ಎಂಬ ಮಂತ್ರದಿಂದ |
| ಆತ್ಮನ್ ಸಮಾರೋಹಯತೇ | ಆತ್ಮನಲ್ಲಿ ಅಗ್ನಿಯ ಸಮಾರೋಪವನ್ನು ಮಾಡಬೇಕು. |
| ಯಜಮಾನಃ ವೈ ಅಗ್ನೇಃ ಯೋನಿಃ | ಯಜಮಾನನೂ ಕೂಡ ಆಧಾನದ ಮೂಲಕ ಅಗ್ನಿಯ ಉತ್ಪತ್ತಿಗೆ ಕಾರಣನಷ್ಟೆ. |

---

ಇದು ವಾಸ್ತೋಷ್ಪತೀಯ ಹೋಮಕಾಲದ ವಿಧಿ.

ಹೋಮಗಳಲ್ಲಿ ಎರಡು ಬಗೆಗಳು ಇವೆ. 'ಆಶ್ರಾವಯ' ಮೊದಲಾಗಿ 'ವೌಷಟ್' ಎಂದು ಮುಗಿಯುವ ಪುರೋನುವಾಕ್ಯಾಸಹಿತವಾದ ಮಂತ್ರಸಮೂಹದಿಂದ ಹೋಮ

---

* ಯಾ ತೇ ಅಗ್ನೇ ಯಜ್ಞಿಯಾ ತನೂಸ್ತಯೇಹ್ಯಾರೋಹಾತ್ಮಾಽಽತ್ಮಾನಮ್ । ಅಚ್ಛಾ ವಸೂನಿ ಕೃಣ್ವನ್ನಸ್ಮೇ ನರ್ಯಾ ಪುರೂಣಿ । ಯಜ್ಞೋ ಭೂತ್ವಾ ಯಜ್ಞಮಾಸೀದ ಸ್ವಾಂ ಯೋನಿಮ್ । ಜಾತವೇದೋ ಭುವ ಆಜಾಯಮಾನಃ ಸಕ್ಷಯ ಏಹಿ ॥ (ತೈ.ಬ್ರಾ. ೨.೫.೮)

## ಸ್ವಾಯಾಮೇವೈನಂ ಯೋನ್ಯಾಗ್ಂ ಸಮಾರೋಹಯತೇ

|| ೪೦–10 ||

[ಧತ್ತೇಽರ್ವಾಚೀನಗ್ಗ್ಂ ಸ್ಯಾತ್ಸಮಾರೋಹಯತಿ ಪಂಚಚತ್ವಾರಿಗ್ಂಶಚ್ಚ ||]

---

ಸ್ವಾಯಾಮ್ । ಏವ । ಏನಮ್ । ಯೋನ್ಯಾಮ್ । ಸಮಾರೋಹಯತ ಇತಿ ಸಮ್–

ಆರೋಹಯತೇ || ೪೦ ||

---

**ಸ್ವಾಯಾಮ್ ಯೋನ್ಯಾಮ್ ಏವ ಏನಮ್ ಸಮಾರೋಹಯತೇ** [ಈ ಆತ್ಮಸಮಾರೋಪಣದಿಂದ] ತನ್ನದಾದ ಉತ್ಪತ್ತಿಸ್ಥಾನದಲ್ಲಿಯೇ ಅಗ್ನಿಯನ್ನು ಸಮಾರೋಪಣ ಮಾಡಿದಂತಾಗುತ್ತದೆ.

---

ಮಾಡುವುದು ಒಂದು ಬಗೆ. ಇದರಲ್ಲಿ ಯಾಜ್ಯಾ–ಪುರೋನುವಾಕ್ಯೆಗಳು ಮುಖ್ಯವಾದವುಗಳು. ಈ ರೀತಿಯ ಹೋಮವು ದೇವತೆಗಳಿಗೆ ಅತಿಪ್ರಿಯವಾದುದು. ನಾಮಮಂತ್ರದಿಂದಲೋ ಅಥವಾ ಕೇವಲ ಒಂದು ಮಂತ್ರದಿಂದಲೋ ಮಾಡುವ ಹೋಮವು ಇನ್ನೊಂದು ಬಗೆಯದು. ಇದು ದೇವತೆಗಳಿಗೆ ಹೆಚ್ಚು ಪ್ರಿಯವಲ್ಲ.
* ದೇವತೆಗಳ ಹೆಚ್ಚಿನ ಪ್ರೀತಿಗಾಗಿ 'ವಾಸ್ತೋಷ್ಪತೇ ಪ್ರತಿ....' ಎಂಬ ಪುರೋನುವಾಕ್ಯೆಯನ್ನು ಹೇಳಿ 'ವಾಸ್ತೋಷ್ಪತೇ ಶಗ್ಮಯಾ' ಎಂಬ ಯಾಜ್ಯಾನುವಾಕ್ಯೆಯಿಂದ ಹೋಮವನ್ನು ಮಾಡಬೇಕು. [ವಿಧಿ]. ಇದು ದೇವತೆಗಳಿಗೆ ಅತಿಪ್ರೀತಿಯನ್ನು ಉಂಟುಮಾಡುತ್ತದೆ.

ಅಗ್ನಿಹೋತ್ರಿಯು ಪ್ರಯಾಣ ಮಾಡುವಾಗ ಅಗ್ನಿಹೋತ್ರಹೋಮಕ್ಕೆ ಮೊದಲೇ ಮನೆಯ ಉಪಕರಣಗಳನ್ನು ಬಂಡಿಯಲ್ಲಿ ತುಂಬಬೇಕು. ಅಗ್ನಿಹೋತ್ರಹೋಮದ

---

* ಇಲ್ಲಿ 'ಆಶ್ರಾವಯ' ಮುಂತಾದ ಮಂತ್ರಸಂಘದಿಂದ ಮಾಡುವ ಹೋಮವು ಪ್ರಶಸ್ತವಾದುದೆಂಬುದು ತಾತ್ಪರ್ಯ. ದರ್ವಿಹೋಮದ ನಿಂದೆಯಲ್ಲ. 'ನ ಹಿ ನಿಂದಾ ನಿಂದಿತುಂ ಪ್ರವೃತ್ತಾ ಅಪಿ ತು ವಿಧೇಯಮ್ ಸ್ತೋತುಮ್' [ನಿಂದಾವಚನವು ನಿಂದೆಗಾಗಿ ಹೇಳಿದುದಲ್ಲ, ವಿಧಿಸಿರುವ ಇನ್ನೊಂದು ಕರ್ಮದ ಪ್ರಶಂಸೆಗಾಗಿ] ಎಂಬ 'ನ ಹಿ ನಿಂದಾ' ನ್ಯಾಯವನ್ನು ಅನುಸರಿಸಿ ಹೀಗೆ ಹೇಳಲಾಗಿದೆ.

ಅನಂತರ ತುಂಬಿದರೆ ಅಗ್ನಿಯನ್ನು ಬಂಡಿಯಲ್ಲಿ ಏರಿಸಿದಂತಾಗುತ್ತದೆ. ಉರಿಯುತ್ತಿರುವ ಕೊಳ್ಳಿಗಳನ್ನು ಆರಿಸದೇ ಹೊರಟರೆ ಯಜ್ಞವಿಘಾತವೇ ಗೃಹದಹನವಾದಂತೆಯೇ ಆಗುತ್ತದೆ. ಹೀಗಾಗಿ ಈ ಬ್ರಾಹ್ಮಣವಚನಗಳಿಂದ ಅಥವಾ **'ಅಹುತೇ ಆದಧ್ಯಾತ್' 'ಸಂಪ್ರಕ್ಷಾಪ್ಯ ಪ್ರಯಾಯಾತ್'** ಎಂಬ ವಿಧಿವಾಕ್ಯಗಳನ್ನು ಇಟ್ಟುಕೊಂಡು ಅನುಷ್ಠಿಸಬೇಕು.

ಈ ಯಜ್ಞವಿಘಾತ ಅಥವಾ ಗೃಹದಾಹದೋಷಗಳ ಪರಿಹಾರಕ್ಕಾಗಿ ಅರಣಿಯಲ್ಲಿ ಅಗ್ನಿಸಮಾರೋಪವನ್ನು ಮಾಡಬೇಕು. ಅರಣಿಗಳೇ ಅಗ್ನಿಯ ಉತ್ಪತ್ತಿಸ್ಥಾನವಾದುದರಿಂದ ತನ್ನ ಉತ್ಪತ್ತಿಸ್ಥಾನದಲ್ಲಿಯೇ ಅಗ್ನಿಯನ್ನು ಸಮಾರೋಪ ಮಾಡಿದಂತಾಗುತ್ತದೆ. ಇದರಿಂದ ಯಜ್ಞವಿಘಾತದೋಷವಾಗಲೀ ಗೃಹದಾಹದೋಷವಾಗಲೀ ಸಂಭವಿಸುವುದಿಲ್ಲ.

ಅರಣಿಯಲ್ಲಿ ಅಗ್ನಿಸಮಾರೋಪಣವನ್ನು ಮಾಡಿದ ಬಳಿಕ ಅರಣಿಯು ನಷ್ಟವಾದರೆ ಯಜಮಾನನು ಆಧಾನ ಮಾಡಿರುವ ಅಗ್ನಿಯೇ ನಷ್ಟವಾದಂತಾಗುತ್ತದೆ. ಅಲ್ಲದೆ ಪುನರಾಧಾನ ಮಾಡುವ ಪ್ರಸಂಗವು ಬರುತ್ತದೆ. ಆದುದರಿಂದ ಯಜಮಾನನು **'ಯಾ ತೇ ಅಗ್ನೇ...'** ಎಂಬ ಮಂತ್ರದಿಂದ ತನ್ನಲ್ಲಿಯೇ ಅಗ್ನಿಸಮಾರೋಪಣವನ್ನು ಮಾಡಬೇಕೆಂದು ಕೆಲವರು ಹೇಳುತ್ತಾರೆ. ಯಜಮಾನನೂ ಆಧಾನದ ಮೂಲಕ ಅಗ್ನಿಯ ಉತ್ಪತ್ತಿಗೆ ಕಾರಣನಾದುದರಿಂದ ಈ ಪಕ್ಷದಲ್ಲಿಯೂ ಅಗ್ನಿಯನ್ನು ಅದರ ಉತ್ಪತ್ತಿಸ್ಥಾನದಲ್ಲಿಯೇ ಸಮಾರೋಪ ಮಾಡಿದಂತಾಗುತ್ತದೆ.

## ವಿನಿಯೋಗಸಂಗ್ರಹ

ಅಗ್ನಿಹೋತ್ರೀ ತು ಸಗೃಹಃ ಪ್ರಯಾಸ್ಯನ್ ಜುಹುಯಾದ್ದ್ವಯಮ್ ।
[1]ವಾಸ್ತೋಃ ಪುರೋನುವಾಕ್ಯೈಕಾ ಯಾಜ್ಯಾ[2]ಚಾನ್ಯೇತಿ ತದ್ದ್ವಯಮ್ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–2

## ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

1) ದರ್ವಿಹೋಮವೆಂಬುದು ಏನು? [ಜೈ. ಸೂ. 8.4]

**'ಯದೇಕಯಾ ಜುಹುಯಾದ್ದರ್ವಿಹೋಮಂ ಕುರ್ಯಾತ್'** ಎಂಬ ಶ್ರುತಿವಾಕ್ಯವಿದೆ. ಇಲ್ಲಿ ಹೇಳಿರುವ ದರ್ವಿಹೋಮವು ಗುಣವಿಧಿಯೇ? ಅಥವಾ ನಾಮಧೇಯವೇ? ಇದು ಇಲ್ಲಿನ ಸಂಶಯ.

**'ದಧ್ನಾ ಜುಹೋತಿ'** ಮುಂತಾದ ವಾಕ್ಯಗಳಲ್ಲಿ ಹೋಮವು ಪ್ರಾಪ್ತವಾಗಿರುವಾಗ ಕೇವಲ ದಧಿಯೆಂಬ ಗುಣವನ್ನು ತಿಳಿಸುವ ಗುಣವಿಧಿಯಂತೆಯೇ ಇಲ್ಲಿಯೂ ದರ್ವೀಗುಣವನ್ನು ಮಾತ್ರವನ್ನು ವಿಧಿಸುತ್ತಿರುವುದರಿಂದ ಇದೂ ಸಹ ಗುಣವಿಧಿ ಯಾಗುತ್ತದೆ. ಇದು ಇಲ್ಲಿನ ಪೂರ್ವಪಕ್ಷ.

ಲೌಕಿಕವಾದ ಹೋಮದಲ್ಲಿ ಶಿಷ್ಟಾಚಾರದಿಂದಲೇ ದರ್ವಿಯು ಪ್ರಾಪ್ತವಾಗುತ್ತದೆ. ಅಗ್ನಿಹೋತ್ರ ಮುಂತಾದ ಕರ್ಮಗಳಲ್ಲಿ ಜುಹೂವಿನಿಂದಲೇ ಮಾಡಬೇಕೆಂದಿರುವುದ ರಿಂದ ಅಲ್ಲಿ ಜುಹೂ ಮುಂತಾದವುಗಳ ಪ್ರಾಪ್ತಿಯಿದೆ. ಇದು ಗುಣವಿಧಿಯಾದರೆ ಅಗ್ನಿಹೋತ್ರ ಮುಂತಾದ ಕಡೆ ಇರುವ ಜುಹೂವನ್ನು ಬಾಧಿಸಿ ಅಲ್ಲಿಯೂ ದರ್ವಿ ಯಿಂದ ಹೋಮವು ಪ್ರಾಪ್ತವಾದೀತು. ಆದುದರಿಂದ ದರ್ವಿಹೋಮವೆಂಬುದು ಕರ್ಮನಾಮಧೇಯವಾಗಿದೆ. ಗುಣವಿಧಿಯಲ್ಲ. ಇದು ಇಲ್ಲಿನ ಸಿದ್ಧಾಂತ.

* ಈ ದರ್ವಿಹೋಮವು ಸರ್ವಹೋಮಪರವಾದುದೇ? [ಜೈ.ಸೂ.8.4.2]

ಈ ದರ್ವಿಹೋಮವು ಲೌಕಿಕಹೋಮಮಾತ್ರಪರವಾದುದೇ ಅಥವಾ ಶ್ರೌತ-ಸ್ಮಾರ್ತಸರ್ವಹೋಮಪರವಾದುದೇ? ಎಂಬುದು ಇಲ್ಲಿನ ಸಂಶಯ.

**'ಅಂಬಷ್ಠಾನಾಂ ದಾರ್ವಿಹೋಮಿಕೋ ಬ್ರಾಹ್ಮಣಃ'** ಎಂದು ಅಂಬಷ್ಠಸ್ವಾಮಿಕವಾದ ಹೋಮದಲ್ಲಿ ದಾರ್ವಿಹೋಮಿಕವಿಧಿಯನ್ನು ಹೇಳಿರುವುದರಿಂದ ಸ್ಮಾರ್ತಕರ್ಮ ಗಳಿಗೆ ಮಾತ್ರ ಈ ದರ್ವಿಹೋಮವೆಂಬ ನಾಮಧೇಯ. ಇದು ಇಲ್ಲಿನ ಪೂರ್ವಪಕ್ಷ.

**'ದರ್ವ್ಯಾ ಹೋಮಃ'** ಎಂಬುದಾಗಿ ವಿವರಣೆಯೂ, **'ಯದೇಕಯಾ ಜುಹುಯಾ ದ್ದರ್ವಿಹೋಮಂ ಕುರ್ಯಾತ್'** ಎಂಬ ಶ್ರುತಿವಚನದಿಂದಲೂ ಇದು ಲೌಕಿಕ-ವೈದಿಕ

ಸಾಧಾರಣವಾದುದಾಗಿದೆ. ಇದು ಇಲ್ಲಿನ ಸಿದ್ಧಾಂತ.

* ಈ ನಾಮಧೇಯವು ಯಾಗ-ಹೋಮ ಸಾಧಾರಣವಾದುದಾಗಿದೆಯೇ?

[ಜೈ.ಸೂ.8.4.3]

ಈ ದರ್ವಿಹೋಮವೆಂಬ ನಾಮಧೇಯವು ಯಾಗ ಮತ್ತು ಹೋಮಗಳಿಗೆ ಸಮಾನವಾದುದೇ? ಇದು ಇಲ್ಲಿನ ಸಂಶಯ.

ಯಾಗ-ಹೋಮಗಳೆರಡರಲ್ಲಿಯೂ ದೇವತೆಗಳನ್ನುದ್ದೇಶಿಸಿ ಹವಿಸ್ಸನ್ನು ಸಮರ್ಪಿಸುವುದು ಸಮಾನವಾದುದರಿಂದ ಈ ನಾಮಧೇಯವೂ ಸಾಧಾರಣವಾದುದೇ. ಇದು ಇಲ್ಲಿನ ಪೂರ್ವಪಕ್ಷ.

**'ಜುಹೋತಿ'** ಎಂದು ವಿಧಾನ ಮಾಡಿರುವ ಕಡೆಗಳಲ್ಲಿ ಹವಿಸ್ಸಿನ ಪ್ರಕ್ಷೇಪವು ಮುಖ್ಯವಾದದ್ದು. **'ಯಜತಿ'** ಎಂದು ಹೇಳಿ ವಿಧಾನ ಮಾಡಿರುವ ಕಡೆಯಲ್ಲಿ ಹವಿಸ್ಸಿನ ಪ್ರಕ್ಷೇಪವಿದ್ದರೂ ಅದು ಮುಖ್ಯವಲ್ಲ. ಲಾಕ್ಷಣಿಕವಾದುದು. ಆದುದರಿಂದ **'ಜುಹೋತಿ'** ಎಂದು ಹೇಳಿ ವಿಧಾನ ಮಾಡಿರುವ ಹೋಮಗಳಿಗೇ ಈ ದರ್ವಿಹೋಮವೆಂಬ ಕರ್ಮನಾಮಧೇಯವಿರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

* ದರ್ವಿಹೋಮದಲ್ಲಿ ಬೇರೆ ವಿಧಿಯ ಅತಿದೇಶವಿದೆಯೇ? [ಜೈ.ಸೂ.8.4.4]

ದರ್ವಿಹೋಮಗಳಲ್ಲಿ ಸಾಧಾರಣವಾಗಿ ದೇವತಾವಾಚಕಗಳು ಇಲ್ಲದಿರುವುದರಿಂದ ಅವು ಅವ್ಯಕ್ತಲಿಂಗಕಗಳೆನಿಸುತ್ತವೆ. ಹೀಗಾಗಿ **'ಸೋಮೇನ ಯಜೇತ'** ಎಂಬ ದೇವತಾ ವಿಧಾಯಕವಿಧಿಯಿರುವ ಆ ಯಾಗಗಳಂತೆ ಈ ದರ್ವಿಹೋಮಕ್ಕೂ ಸೋಮಧರ್ಮಗಳು ಬರುತ್ತವೆ. ಇದು ಇಲ್ಲಿನ **ಪೂರ್ವಪಕ್ಷ.**

ಈ ದರ್ವಿಹೋಮದಲ್ಲಿಯೂ **'ಅಗ್ನಯೇ ಸ್ವಾಹಾ'** ಮೊದಲಾಗಿ ದೇವತಾ ಪ್ರಾಪ್ತಿಯು ಇದೆ. ಸ್ವಾಹಾಕಾರಪ್ರಯೋಗವೂ ಇದೆ. ಸೋಮಯಾಗದಲ್ಲಿ ವಷಟ್ಕಾರವು ಇದೆ. ಸೋಮಧರ್ಮಗಳನ್ನು ಅತಿದೇಶ ಮಾಡಿದರೆ ಇಲ್ಲಿಯೂ ವಷಟ್ಕಾರವು ಅತಿದೇಶದಿಂದ ಬಂದೀತು.

ಹೀಗಾಗಿ ಈ ದರ್ವಿಹೋಮಗಳು ಅಪೂರ್ವಕರ್ಮಗಳು. **'ಅಪೂರ್ವಾಣಿ ಯಾವದುಕ್ತ ಧರ್ಮಾಣಿ'** ಎಂಬ ವಚನದಂತೆ ಅವುಗಳ ಧರ್ಮಮಾತ್ರವಿರುತ್ತದೆ. ಅತಿದೇಶದಿಂದ ಬೇರೆ ವಿಧಿಗಳ ಅತಿದೇಶವಿರುವುದಿಲ್ಲ. ಇದು ಇಲ್ಲಿನ ಸಿದ್ಧಾಂತ.

ಐ❀ಔಐ❀ಔ

## ॥ ಏಕಾದಶೋಽನುವಾಕಃ ॥

ತ್ವಮಗ್ನೇ ಬೃಹದ್ವಯೋ ದಧಾಸಿ ದೇವ ದಾಶುಷೇ ।

ಕವಿರ್ಗೃಹಪತಿರ್ಯುವಾ ॥

---

ತ್ವಮ್ । ಅಗ್ನೇ । ಬೃಹತ್ । ವಯಃ । ದಧಾಸಿ । ದೇವ । ದಾಶುಷೇ ॥ ಕವಿಃ । ಗೃಹಪತಿರಿತಿ ಗೃಹ-ಪತಿಃ । ಯುವಾ ॥

---

ಹತ್ತನೆಯ ಅನುವಾಕದಲ್ಲಿ ವಾಸ್ತೋಷ್ಪತೀಯಹೋಮವು ಹೇಳಲ್ಪಟ್ಟಿತು. ಈ ಹನ್ನೊಂದನೆಯ ಅನುವಾಕದಲ್ಲಿ ಕಾಮ್ಯೇಷ್ಟಿ ಯಾಜ್ಯಾ-ಪುರೋನುವಾಕ್ಯೆಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ತ್ವಮಗ್ನೇ...ಯುವಾ ॥ | ದೇವಸುವ ಹವಿಸ್ಸುಗಳಲ್ಲಿ ಮೊದಲನೆಯದಾದ ಆಗ್ನೇಯಯಾಗದ ಪುರೋನುವಾಕ್ಯೆ. |

---

✦ ಅಗ್ನೇ ದೇವ=ಹೇ! ಅಗ್ನಿದೇವನೇ! ತ್ವಮ್=ನೀನು; ಕವಿಃ=ವಿದ್ವಾಂಸನು; ಗೃಹಪತಿಃ =ಮನೆಯ ರಕ್ಷಕನು. ಯುವಾ=ನಿತ್ಯತರುಣನು[ಇಂತಹ ನೀನು]ದಾಶುಷೇ=[ನಿನಗೆ] ಹವಿಸ್ಸನ್ನರ್ಪಿಸುವ ಯಜಮಾನನಿಗೆ; ಬೃಹತ್ ವಯಃ=ಹೆಚ್ಚಾದ ಅನ್ನವನ್ನು ಅಥವಾ ದೀರ್ಘಾಯುಸ್ಸನ್ನು; ದಧಾಸಿ=ಕೊಡುತ್ತೀಯೆ/ಕೊಡಲು ಧರಿಸಿರುತ್ತೀಯೆ/ಕೊಡು;

---

ದೇವಸುವಹವಿಸ್ಸುಗಳಲ್ಲಿ ಮೊದಲನೆಯದಾಗಿ **'ಅಗ್ನಯೇ ಗೃಹಪತಯೇ ಪುರೋಡಾಶಮಷ್ಟಾಕಪಾಲಂ ನಿರ್ವಪತಿ ಕೃಷ್ಣಾನಾಂ ವ್ರೀಹೀಣಾಮ್'** ಎಂದು

ಹವ್ಯವಾಡಗ್ನಿರಜರಃ ಪಿತಾ ನೋ ವಿಭುರ್ವಿಭಾವಾ
ಸುದೃಶೀಕೋ ಅಸ್ಮೇ । ಸುಗಾರ್ಹಪತ್ಯಾಸ್ಸಮಿಷೋ
ದಿದೀಹ್ಯಸ್ಮದ್ರಿಯಕ್ಸಂ ಮಿಮೀಹಿ ಶ್ರವಾಗ್ಂಸಿ ॥

---

ಹವ್ಯವಾಡಿತಿ ಹವ್ಯ-ವಾಟ್ । ಅಗ್ನಿಃ । ಅಜರಃ । ಪಿತಾ । ನಃ । ವಿಭುರಿತಿ ವಿ-ಭುಃ । ವಿಭಾವೇತಿ ವಿ-ಭಾವಾ । ಸುದೃಶೀಕ ಇತಿ ಸು-ದೃಶೀಕಃ । ಅಸ್ಮೇ ಇತಿ ॥ ಸುಗಾರ್ಹಪತ್ಯಾ ಇತಿ ಸು-ಗಾರ್ಹಪತ್ಯಾಃ । ಸಮಿತಿ । ಇಷಃ । ದಿದೀಹಿ । ಅಸ್ಮದ್ರಿಯಗಿತ್ಯಸ್ಮ-ದ್ರಿಯಕ್ । ಸಮಿತಿ । ಮಿಮೀಹಿ । ಶ್ರವಾಗ್ಂಸಿ ॥

---

| ಮಂತ್ರ | ವಿನಿಯೋಗ |
|---|---|
| ಹವ್ಯವಾಡಗ್ನಿಃ...ಶ್ರವಾಗ್ಂಸಿ ॥ | ಮೇಲಿನ ಯಾಗದ ಯಾಜ್ಯಾನುವಾಕ್ಯೆ. |

---

+**ಹವ್ಯವಾಟ್ ಅಗ್ನಿಃ**=ದೇವತೆಗಳಿಗೆ ಹವ್ಯವನ್ನು ಒಯ್ಯುವ ಅಗ್ನಿದೇವನು; **ಅಜರಃ**=ಮುಪ್ಪೇ ಇಲ್ಲದ; **ನಃ ಪಿತಾ**=ನಮ್ಮ ಉತ್ಪಾದಕನೂ ರಕ್ಷಕನೂ ಆಗಿರುವ; **ವಿಭುಃ**=ಸರ್ವವ್ಯಾಪಕನಾದ; **ವಿಭಾವಾ**=ಹೆಚ್ಚಾಗಿ ಪ್ರಕಾಶಿಸತಕ್ಕ; **ಅಸ್ಮೇ**=ನಮಗೆ; **ಸುದೃಶೀಕಃ**=ಒಳ್ಳೆಯ ದರ್ಶನವುಳ್ಳ/ಸುಖದರ್ಶನನಾದ ದೇವನಾಗಿದ್ದಾನೆ. [ಇಂತಹ ಅಗ್ನಿದೇವನೇ!] **ಸುಗಾರ್ಹಪತ್ಯಾಃ**=ಒಳ್ಳೆಯ ಗಾರ್ಹಪತ್ಯಾಗ್ನಿಯಿರುವಂತೆ ಮಾಡುವ /ಅಗ್ನಿಧಾರಣೆಗೆ ಬೇಕಾದ; **ಇಷಃ**=ಅನ್ನಗಳನ್ನು; **ಸಮ್ ದಿದೀಹಿ**=ಚೆನ್ನಾಗಿ ಕೊಡು. **ಅಸ್ಮದ್ರಿಯಕ್**=ನಮಗೆ ಅಭಿಮುಖವಾಗಿ ಬಂದವನಾಗಿ, **ಶ್ರವಾಗ್ಂಸಿ**=ಸ್ತೋತ್ರಗಳನ್ನು; **ಸಂಮಿಮೀಹಿ**=ಚೆನ್ನಾಗಿ ಹೇಳುವಂತೆ ಅನುಗ್ರಹಿಸು.

---

ವಿಹಿತವಾದ ಆಗ್ನೇಯಯಾಗದ ಪುರೋನುವಾಕ್ಯೆಯು ಇದಾಗಿದೆ.

ಅಗ್ನಿದೇವನು ವಿದ್ವಾಂಸನು. ಮನೆಯನ್ನು ರಕ್ಷಿಸತಕ್ಕವನು. ನಿತ್ಯಯುವಕನು.

## ತ್ವಂ ಚ ಸೋಮ ನೋ ವಶೋ ಜೀವಾತುಂ ನ ಮರಾಮಹೇ । ಪ್ರಿಯಸ್ತೋತ್ರೋ ವನಸ್ಪತಿಃ ॥

---

ತ್ವಮ್ । ಚ । ಸೋಮ । ನಃ । ವಶಃ । ಜೀವಾತುಮ್ । ನ । ಮರಾಮಹೇ ॥ ಪ್ರಿಯಸ್ತೋತ್ರ ಇತಿ ಪ್ರಿಯ–ಸ್ತೋತ್ರಃ । ವನಸ್ಪತಿಃ ॥

---

| ಮಂತ್ರ | ವಿನಿಯೋಗ |
|---|---|
| ತ್ವಂ ಚ ಸೋಮ...ವನಸ್ಪತಿಃ ॥ | **'ಸೋಮಾಯ ವನಸ್ಪತಯೇ ಶ್ಯಾಮಾಕಂ ಚರುಮ್'** ಎಂಬ ಚರುಯಾಗದ ಪುರೋನುವಾಕ್ಯೆ. |

---

✦ಸೋಮ=[ಸೋಮದೇವನೇ! ನೀನು]; ಪ್ರಿಯಸ್ತೋತ್ರಃ=ಪ್ರಿಯವಾದ ಸ್ತೋತ್ರವುಳ್ಳವನು; ವನಸ್ಪತಿಃ=ವನಗಳ ರಕ್ಷಕನಾಗಿರುವೆ. ತ್ವಮ್ ಚ=ನೀನೂ; ನಃ=ನಮಗೆ; ಜೀವಾತುಮ್=ಬದುಕುವುದಕ್ಕೆ/ಬದುಕಿಸುವುದಕ್ಕೆ; ವಶಃ=ಇಷ್ಟನಾಗಿದ್ದೀಯೆ; ನ ಮರಾಮಹೇ=[ನಿನ್ನ ಅನುಗ್ರಹದಿಂದ] ನಾವು ಸಾಯುವುದಿಲ್ಲ.

---

ದಯಾಮಯನಾದ ಅಗ್ನಿದೇವನು ಹವಿಸ್ಸನ್ನು ಕೊಡುವ ಯಜಮಾನನಿಗೆ ಹೆಚ್ಚಾದ ಅನ್ನವನ್ನೂ ದೀರ್ಘಾಯುಸ್ಸನ್ನೂ ಕೊಡುತ್ತಾನೆ. ಅವನು ಅದನ್ನು ಕೊಡಲಿ.

ಅಗ್ನಿದೇವನು ದೇವತೆಗಳಿಗೆ ಹವ್ಯಗಳನ್ನು ಕೊಡುವವನು. ಆತನಿಗೆ ಮುಪ್ಪೇ ಇಲ್ಲ. ಆತನು ನಮ್ಮನ್ನು ಉತ್ಪಾದಿಸಿದವನಾಗಿದ್ದಾನೆ. ರಕ್ಷಕನೂ ಆಗಿದ್ದಾನೆ. ಅವನು ಸರ್ವವ್ಯಾಪಕನು. ಪ್ರಕಾಶಮಾನನಾಗಿರುವವನು. ಆತನನ್ನು ಸುಖವಾಗಿ ನೋಡಬಹುದು. ಇಂತಹ ಪ್ರಭಾವಶಾಲಿಯಾದ ಅಗ್ನಿದೇವನೇ! ಅಗ್ನಿಚರ್ಯೆಗೆ ಬೇಕಾದ ಅನ್ನಸಂಪತ್ತನ್ನು ಕೊಡು. ಎದುರಾಗಿ ಬಂದು ನಿನ್ನನ್ನು ಚೆನ್ನಾಗಿ ಸ್ತೋತ್ರ ಮಾಡುವ ಶಕ್ತಿಯನ್ನು ನಮಗೆ ಕೊಡು.

ಸೋಮದೇವನೇ! ನೀನು ಸ್ತೋತ್ರಪ್ರಿಯನು. ವನಗಳ ಪಾಲಕನು. ನಾವು ಬದುಕುವುದಕ್ಕೆ ನಿನ್ನನ್ನು ಅಪೇಕ್ಷಿಸುತ್ತೇವೆ. ಸ್ತೋತ್ರಗಳಿಂದ ಪ್ರೀತನಾದ ನೀನು ನಾವುಗಳು ಬಾಳಿ ನಿನ್ನನ್ನು ಸೇವಿಸುವುದಕ್ಕೆ ಅಪೇಕ್ಷಿಸುವೆ. ನಿನ್ನ ಅನುಗ್ರಹದಿಂದ ನಾವು ಸಾಯದೆ

ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಮ್ । ಶ್ಯೇನೋ ಗೃಧ್ರಾಣಾಗ್‌ಂ ಸ್ವಧಿತಿರ್ವನಾನಾಗ್‌ಂ ಸೋಮಃ[೪೧]ಪವಿತ್ರಮತ್ಯೇತಿ ರೇಭನ್ನ್ ॥

---

ಬ್ರಹ್ಮಾ । ದೇವಾನಾಮ್ । ಪದವೀರಿತಿ ಪದ–ವೀಃ । ಕವೀನಾಮ್ । ಋಷಿಃ । ವಿಪ್ರಾಣಾಮ್ । ಮಹಿಷಃ । ಮೃಗಾಣಾಮ್ ॥ ಶ್ಯೇನಃ । ಗೃಧ್ರಾಣಾಮ್ । ಸ್ವಧಿತಿರಿತಿ ಸ್ವ–ಧಿತಿಃ । ವನಾನಾಮ್ । ಸೋಮಃ ।(೪೧)। ಪವಿತ್ರಮ್ । ಅತೀತಿ । ಏತಿ । ರೇಭನ್ನ್ ।

---

| ಮಂತ್ರ | ವಿನಿಯೋಗ |
|---|---|
| ಬ್ರಹ್ಮಾ ದೇವಾನಾಂ...ರೇಭನ್ನ್ ॥ | ಸೌಮ್ಯಚರುಯಾಗದ ಯಾಜ್ಯೆ. |

---

+ದೇವಾನಾಮ್=ದೇವತೆಗಳ ಮಧ್ಯದಲ್ಲಿ; ಬ್ರಹ್ಮಾ=ಬ್ರಹ್ಮದೇವನು [ಶ್ರೇಷ್ಠನು]. **ಕವೀನಾಮ್ ಪದವೀಃ**=ವಿದ್ವಾಂಸರಲ್ಲಿ ಪದ, ವಾಕ್ಯ, ಪ್ರಮಾಣ [ವ್ಯಾಕರಣ, ಮೀಮಾಂಸಾ, ತರ್ಕಶಾಸ್ತ್ರಗಳನ್ನು/ಯಜ್ಞಗಳನ್ನು/]ಗಳನ್ನು ತಿಳಿದವನು. ಮೇಲಾದವನು; **ವಿಪ್ರಾಣಾಮ್ ಋಷಿಃ**=ಬ್ರಾಹ್ಮಣರಲ್ಲಿ ಮಂತ್ರದ್ರಷ್ಟಾರನು [ಶ್ರೇಷ್ಠ] **ಮೃಗಾಣಾಮ್ ಮಹಿಷಃ**=ಮೃಗಗಳಲ್ಲಿ ಕೋಣವು [(ಬಲದಿಂದ) ಶ್ರೇಷ್ಠವಾದದ್ದು] **ಗೃಧ್ರಾಣಾಮ್**=ಹದ್ದುಗಳಲ್ಲಿ; **ಶ್ಯೇನಃ**=ಗಿಡುಗವು [ವೇಗದಿಂದ ಮೇಲಾದುದು] **ವನಾನಾಮ್ ಸ್ವಧಿತಿಃ**=ವನಗಳಲ್ಲಿ [ವೃಕ್ಷಗಳಲ್ಲಿ] ಗಟ್ಟಿಯಾದ ಮರವು [ಶ್ರೇಷ್ಠ] [ಹಾಗೆಯೇ] **ರೇಭನ್ ಸೋಮಃ**=ಸ್ತುತಿಸಲ್ಪಡುವ ಸೋಮನು; **ಪವಿತ್ರಮ್ ಅತಿ ಏತಿ**=ದರ್ಭಾದಿ ಪವಿತ್ರವಸ್ತುಗಳನ್ನು ಮೀರಿ ಅತಿಪವಿತ್ರನಾಗಿರುತ್ತಾನೆ.

---

ಬದುಕಿರುವಂತಾಗಲಿ.

ದೇವತೆಗಳು, ವಿದ್ವಾಂಸರು, ಬ್ರಾಹ್ಮಣರು, ಮೃಗಗಳು, ಹದ್ದುಗಳು, ವೃಕ್ಷಗಳು–

ಆ ವಿಶ್ವದೇವಗ್ಂ ಸತ್ಪತಿಗ್ಂ ಸೂಕ್ತೈರದ್ಯಾ ವೃಣೀಮಹೇ ।
ಸತ್ಯಸವಗ್ಂ ಸವಿತಾರಮ್ ॥ ಆ ಸತ್ಯೇನ ರಜಸಾ
ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।

---

ಏತಿ । ವಿಶ್ವದೇವಮಿತಿ ವಿಶ್ವ–ದೇವಮ್ । ಸತ್ಪತಿಮಿತಿ ಸತ್–ಪತಿಮ್ । ಸೂಕ್ತೈರಿತಿ ಸು–ಉಕ್ತೈಃ । ಅದ್ಯ । ವೃಣೀಮಹೇ ॥ ಸತ್ಯಸವಮಿತಿ ಸತ್ಯ–ಸವಮ್ । ಸವಿತಾರಮ್ ॥ ಏತಿ । ಸತ್ಯೇನ । ರಜಸಾ । ವರ್ತಮಾನಃ । ನಿವೇಶಯನ್ನಿತಿ ನಿ–ವೇಶಯನ್ । ಅಮೃತಮ್ । ಮರ್ತ್ಯಮ್ । ಚ ।

---

| ಮಂತ್ರ | ವಿನಿಯೋಗ |
|---|---|
| ಆ ವಿಶ್ವದೇವಗ್ಂ...ಸವಿತಾರಮ್ ॥ | ಸವಿತೃಯಾಗದ ಪುರೋನುವಾಕ್ಯೆ. |
| ಆ ಸತ್ಯೇನ...ವಿಪಶ್ಯನ್ ॥ | ಸವಿತೃಯಾಗದ ಯಾಜ್ಯಾನುವಾಕ್ಯೆ. |

---

✦ವಿಶ್ವದೇವಮ್=ಸರ್ವದೇವತಾಸ್ವರೂಪನಾದ/ಎಲ್ಲ ದೇವತೆಗಳನ್ನೂ ತನ್ನ ಅಧೀನದಲ್ಲಿ ಹೊಂದಿರುವ; ಸತ್ಪತಿಮ್=ಸತ್ಪುರುಷರ ರಕ್ಷಕನಾದ; ಸತ್ಯಸವಮ್=ಸತ್ಯವಾದ ಅನುಜ್ಞೆಯುಳ್ಳ; ಸವಿತಾರಮ್=ಸವಿತೃದೇವನನ್ನು; ಅದ್ಯ=ಈಗ [ಈ ಯಜ್ಞದಲ್ಲಿ] ಸೂಕ್ತೈಃ=ಒಳ್ಳೆಯ ಸ್ತೋತ್ರಗಳಿಂದ; ಆ ವೃಣೀಮಹೇ=ಫಲಪ್ರಾಪ್ತಿಗಾಗಿ ಪ್ರಾರ್ಥಿಸುತ್ತೇವೆ. ✦ಸವಿತಾ=ಆದಿತ್ಯನು; ಸತ್ಯೇನ ರಜಸಾ=ನಿತ್ಯವಾದ/ಎಲ್ಲವನ್ನೂ ರಂಜಿಸುವ ಮಂಡಲದಿಂದ ಕೂಡಿ; ಆ ವರ್ತಮಾನಃ[ವರ್ತತೇ]=ಪೂರ್ವದಿಕ್ಕಿನಲ್ಲಿ ಉದಯಿಸುತ್ತಿರುತ್ತಾನೆ. ಅಮೃತಮ್ ಮರ್ತ್ಯಮ್ ಚ=ದೇವಸಮೂಹವನ್ನೂ, ಮಾನವಸಮೂಹವನ್ನೂ/ಸಕಲಲೋಕಗಳನ್ನೂ; ನಿವೇಶಯನ್=ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತರಾಗುವಂತೆ ಮಾಡುತ್ತಾ;

ಹಿರಣ್ಯಯೇನ ಸವಿತಾ ರಥೇನಾಽಽದೇವೋ ಯಾತಿ ಭುವನಾ ವಿಪಶ್ಯನ್ನ್ ॥ ಯಥಾ ನೋ ಅದಿತಿಃ ಕರತ್ಪಶ್ವೇ ನೃಭ್ಯೋ ಯಥಾ ಗವೇ । ಯಥಾ ತೋಕಾಯ ರುದ್ರಿಯಮ್ ॥

---

ಹಿರಣ್ಯಯೇನ । ಸವಿತಾ । ರಥೇನ । ಏತಿ । ದೇವಃ । ಯಾತಿ । ಭುವನಾ । ವಿಪಶ್ಯನ್ನಿತಿ ವಿ-ಪಶ್ಯನ್ನ್ । ಯಥಾ । ನಃ । ಅದಿತಿಃ । ಕರತ್ । ಪಶ್ವೇ । ನೃಭ್ಯ ಇತಿ ನೃ-ಭ್ಯಃ । ಯಥಾ । ಗವೇ । ಯಥಾ । ತೋಕಾಯ । ರುದ್ರಿಯಮ್ ।

---

| ಮಂತ್ರ | ವಿನಿಯೋಗ |
|---|---|
| ಯಥಾ ನೋ...ರುದ್ರಿಯಮ್ ॥ | 'ರುದ್ರಾಯ ಪಶುಪತಯೇ ಗಾವೀಧುಕಂ ಚರುಮ್' ಎಂದು ವಿಹಿತವಾದ ರೌದ್ರಚರುಯಾಗದ ಪುರೋನುವಾಕ್ಯೆ. |

---

ಹಿರಣ್ಯಯೇನ ರಥೇನ=ಚಿನ್ನದ ರಥದಿಂದ; ಭುವನಾ=ಲೋಕಗಳನ್ನು; ವಿಪಶ್ಯನ್ =ನೋಡಿಕೊಳ್ಳುತ್ತಾ/ಲೋಕಹಿತವನ್ನು ಮಾಡುತ್ತಾ; ದೇವಃ=ಸೂರ್ಯದೇವನು; ಆಯಾತಿ=ಹಗಲು-ರಾತ್ರಿಗಳನ್ನು ಮಾಡುತ್ತಾ ಬರುತ್ತಾನೆ. +ಅದಿತಿಃ=ಯಾರಿಂದಲೂ ಖಂಡಿಸಲಾಗದ ರುದ್ರದೇವನು; ಯಥಾ ನಃ ಪಶ್ವೇ ರುದ್ರಿಯಮ್=ನಮ್ಮ ಪಶುವರ್ಗಕ್ಕೆ ರುದ್ರಸಂಬಂಧಿಯಾದ ರಕ್ಷಣೆಯನ್ನು ಹೇಗೆ; ಕರತ್=ಮಾಡುತ್ತಾನೆಯೋ; ನೃಭ್ಯಃ=ಭೃತ್ಯಾದಿಮಾನವಜಾತಿಗೂ; ಗವೇ=ಚತುಷ್ಪಾದಿಗಳಿಗೂ; ಯಥಾ ಕರತ್= ಹೇಗೆ ರಕ್ಷಣವನ್ನು ಕೊಡುತ್ತಾನೆಯೋ; ಯಥಾ ತೋಕಾಯ=ಹೇಗೆ ವಿಶೇಷವಾಗಿ ನಮ್ಮ ಪುತ್ರರಿಗೂ; ರುದ್ರಿಯಮ್ ಕರತ್=ರುದ್ರಸಂಬಂಧಿಯಾದ ರಕ್ಷಣೆಯನ್ನು ನೀಡುತ್ತಾನೆಯೋ [ಹಾಗೆ ಕರುಣಿಸಲಿ].

---

**ಇವುಗಳಲ್ಲಿ ಶ್ರೇಷ್ಠವಸ್ತುಗಳಿರುವಂತೆ ಪವಿತ್ರವಾದ ವಸ್ತುಗಳಲ್ಲಿ ಸೋಮನು ಅತಿಪವಿತ್ರನೆನಿಸಿದ್ದಾನೆ.**

ಮಾ ನ ಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ [೪೨] ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್, ಹವಿಷ್ಮಂತೋ ನಮಸಾ ವಿಧೇಮ ತೇ ॥

---

ಮಾ । ನಃ । ತೋಕೇ । ತನಯೇ । ಮಾ । ನಃ । ಆಯುಷಿ । ಮಾ । ನಃ । ಗೋಷು । ಮಾ । [೪೨] । ನಃ । ಅಶ್ವೇಷು । ರೀರಿಷಃ ॥ ವೀರಾನ್ । ಮಾ । ನಃ । ರುದ್ರ । ಭಾಮಿತಃ । ವಧೀಃ । ಹವಿಷ್ಮಂತಃ । ನಮಸಾ । ವಿಧೇಮ । ತೇ ।

---

| ಮಂತ್ರ | ವಿನಿಯೋಗ |
|---|---|
| ಮಾ ನಸ್ತೋಕೇ...ವಿಧೇಮ ತೇ ॥ | ರೌದ್ರಚರುಯಾಗದ ಯಾಜ್ಯೆ. |

---

+ರುದ್ರ=ಹೇ ರುದ್ರದೇವನೇ! [ನೀನು]; **ಭಾಮಿತಃ**=ಕೋಪಗೊಂಡವನಾಗಿ; **ನಃ ತೋಕೇ**=ನಮ್ಮ ಪುತ್ರರಲ್ಲಿಯೂ; **ತನಯೇ**=ಅವರ ಮಕ್ಕಳಲ್ಲಿಯೂ; **ಮಾ ರೀರಿಷಃ**=ಹಿಂಸಿಸಬೇಡ. **ನಃ ಆಯುಷಿ ಮಾ ರೀರಿಷಃ**=ನಮ್ಮ ಆಯುಸ್ಸಿನ ವಿಷಯದಲ್ಲಿಯೂ ಹಿಂಸಿಸಬೇಡ; **ನಃ ಗೋಷು ಮಾ ರೀರಿಷಃ**=ನಮ್ಮ ಧೇನುಗಳ ವಿಷಯದಲ್ಲಿಯೂ ಹಿಂಸಿಸಬೇಡ. **ನಃ ಅಶ್ವೇಷು ಮಾ ರೀರಿಷಃ**=ನಮ್ಮ ಕುದುರೆಗಳ ವಿಷಯದಲ್ಲಿಯೂ ಹಿಂಸಿಸದಿರು. ಭಾಮಿತಃ=ಕೋಪಗೊಂಡು; **ನಃ ವೀರಾನ್**=ನಮ್ಮ ಭೃತ್ಯರನ್ನು; **ಮಾ ವಧೀಃ**=ಹಿಂಸಿಸಬೇಡ; **ಹವಿಷ್ಮಂತಃ**=ನಾವು ಹವಿಸ್ಸನ್ನು ಅರ್ಪಿಸುವವರಾಗಿ; **ತೇ ನಮಸಾ ವಿಧೇಮ**=ನಿನಗೆ ನಮಸ್ಕಾರವನ್ನು ಮಾಡುತ್ತೇವೆ.

---

**'ಸವಿತ್ರೇ ಸತ್ಯಪ್ರಸವಾಯ ಪುರೋಡಾಶಂ ದ್ವಾದಶಕಪಾಲಮಾಶೂನಾಂ ವ್ರೀಹೀಣಾಮ್'** ಎಂದು ವಿಹಿತವಾದ ಸವಿತೃಯಾಗದ ಪುರೋನುವಾಕ್ಯೆಯಿದು. ಸವಿತೃದೇವನ

ಉದಪ್ರುತೋ ನ ವಯೋ ರಕ್ಷಮಾಣಾ ವಾವದತೋ ಅಭ್ರಿಯಸ್ಯೇವ ಘೋಷಾಃ । ಗಿರಿಭ್ರಜೋ ನೋರ್ಮಯೋ ಮದಂತೋ ಬೃಹಸ್ಪತಿಮಭ್ಯರ್ಕಾ ಅನಾವನ್ ॥

---

ಉದಪ್ರುತ ಇತ್ಯುದ–ಪ್ರುತಃ । ನ । ವಯಃ । ರಕ್ಷಮಾಣಾಃ । ವಾವದತಃ । ಅಭ್ರಿಯಸ್ಯ । ಇವ । ಘೋಷಾಃ ॥ ಗಿರಿಭ್ರಜ ಇತಿ ಗಿರಿ–ಭ್ರಜಃ । ನ । ಊರ್ಮಯಃ । ಮದಂತಃ । ಬೃಹಸ್ಪತಿಮ್ । ಅಭೀತಿ । ಅರ್ಕಾಃ । ಅನಾವನ್ ।

---

| ಮಂತ್ರ | ವಿನಿಯೋಗ |
| --- | --- |
| ಉದಪ್ರುತೋ...ಅನಾವನ್ ॥ | 'ಬೃಹಸ್ಪತಯೇ ವಾಚಸ್ಪತಯೇ ನೈವಾರಂ ಚರುಮ್' ಎಂದು ವಿಹಿತವಾಗಿರುವ ಬೃಹಸ್ಪತಿ ಚರುಯಾಗದ ಪುರೋನುವಾಕ್ಯೆ. |

---

✦**ವಯಃ ರಕ್ಷಮಾಣಾಃ**=[ಸಸ್ಯಾದಿಗಳನ್ನು ಕೊಟ್ಟು] ನಮ್ಮ ಆಯುಸ್ಸನ್ನು ರಕ್ಷಿಸುವ; **ಉದಪ್ರುತಃ ನ**=ನೀರನ್ನು ಸುರಿಸುವ ಮೇಘದಂತೆ; **ಅಭ್ರಿಯಸ್ಯ ಘೋಷಾಃ ಇವ**=ಮೋಡಗಳ ಗುಡುಗಿನ ಶಬ್ದದಂತೆ; **ವಾವದತಃ**=ಉಚ್ಚಧ್ವನಿ ಮಾಡುವ; **ಗಿರಿಭ್ರಜಃ ಊರ್ಮಯಃ ನ**=ಪರ್ವತಗಳನ್ನು ಸ್ಪರ್ಶಿಸುವ ಪ್ರಕಾಶಮಾನವಾದ ನದೀಪ್ರವಾಹಗಳಂತಿರುವ; **ಮದಂತಃ**=ಸಂತೋಷವನ್ನು ಉಂಟು ಮಾಡುವ; **ಅರ್ಕಾಃ**=ಅರ್ಚನಯೋಗ್ಯವಾದ [ಹವಿಸ್ಸನ್ನು ಸಮರ್ಪಿಸುವ] ಋತ್ವಿಜರ ಮಂತ್ರರೂಪವಾದ ವಾಕ್ಕುಗಳು; **ಬೃಹಸ್ಪತಿಮ್ ಅಭಿ ಅನಾವನ್**=ಬೃಹಸ್ಪತಿಯನ್ನು ಉದ್ದೇಶಿಸಿ ಸ್ತುತಿ ಮಾಡುತ್ತವೆ.

---

ಅಧೀನದಲ್ಲಿ ಸಕಲದೇವರೂ ಇದ್ದಾರೆ. ಆತನು ಸತ್ಪುರುಷರ ರಕ್ಷಕನು. ಆತನ ಅನುಜ್ಞೆಯು ಅಮೋಘವಾದುದು. ಇಂತಹ ಸವಿತೃದೇವನನ್ನು ಫಲಪ್ರಾಪ್ತಿಗಾಗಿ ಉತ್ತಮ

ಹಗ್ಂಸ್ಯೈರಿವ ಸಖಿಭಿರ್ವಾವದದ್ಭಿರಶ್ಮನ್ಮಯಾನಿ ನಹನಾ ವ್ಯಸ್ಯನ್ । ಬೃಹಸ್ಪತಿರಭಿಕನಿಕ್ರದದ್ಗಾ ಉತ ಪ್ರಾಸ್ತೌದುಚ್ಚ ವಿದ್ವಾಗ್ಂ ಅಗಾಯತ್ ॥

ಹಗ್ಂಸ್ಯೈಃ । ಇವ । ಸಖಿಭಿರಿತಿ ಸಖಿ-ಭಿಃ । ವಾವದದ್ಭಿರಿತಿ ವಾವದತ್-ಭಿಃ । ಅಶ್ಮನ್ಮಯಾನೀತ್ಯಶ್ಮನ್-ಮಯಾನಿ । ನಹನಾ । ವ್ಯಸ್ಯನ್ನಿತಿ ವಿ-ಅಸ್ಯನ್ ॥ ಬೃಹಸ್ಪತಿಃ । ಅಭಿಕನಿಕ್ರದದಿತ್ಯಭಿ-ಕನಿಕ್ರದತ್ । ಗಾಃ । ಉತ । ಪ್ರೇತಿ । ಅಸ್ತೌತ್ । ಉದಿತಿ । ಚ । ವಿದ್ವಾನ್ । ಅಗಾಯತ್ ॥

| ಮಂತ್ರ | ವಿನಿಯೋಗ |
|---|---|
| ಹಗ್ಂಸ್ಯೈರಿವ...ಅಗಾಯತ್ ॥ | ಬಾರ್ಹಸ್ಪತ್ಯಚರುಯಾಗದ ಯಾಜ್ಯಾನುವಾಕ್ಯೆ. |

✦**ಹಗ್ಂಸ್ಯೈಃ ಇವ**=[ಸಮಾಜಕ್ಕೆ ಶ್ರೇಯಸ್ಸನ್ನು ಬೋಧಿಸುವ] ಸನ್ಯಾಸಿಗಳಂತೆ; **ವಾವದದ್ಭಿಃ**=ಗಟ್ಟಿಯಾಗಿ ಮಂತ್ರಘೋಷವನ್ನು ಮಾಡುವ; **ಸಖಿಭಿಃ**=ಮಿತ್ರರಿಂದ/ಋತ್ವಿಜರಿಂದ [ಸ್ತುತನಾಗಿ] **ಬೃಹಸ್ಪತಿಃ**=ಬೃಹಸ್ಪತಿಯು; **ಅಶ್ಮನ್ಮಯಾನಿ ನಹನಾ**=[ಸ್ವರ್ಗದ ಬಾಗಿಲನ್ನು ಮುಚ್ಚುವ] ಕಲ್ಲಿನ ಬಾಗಿಲಿನಂತಿರುವ ಪಾಪಗಳನ್ನು; **ವ್ಯಸ್ಯನ್**=ದೂರ ಮಾಡುವವನಾಗಿ; **ಗಾಃ ಅಭಿಕನಿಕ್ರದತ್**=[ಯಜಮಾನನ ಹವಿಸ್ಸನ್ನು ಸ್ವೀಕರಿಸಿ] ಸಂತೋಷದಿಂದ ಉಚ್ಚಧ್ವನಿಯನ್ನು ಮಾಡಿದನು; **ಉತ ಪ್ರ ಅಸ್ತೌತ್**= ಮತ್ತು ಪ್ರಶಂಸಾರ್ಥಕವಾಕ್ಯಗಳನ್ನು ಹೇಳಿದನು; **ಚ**=ಮತ್ತು; **ವಿದ್ವಾನ್**=ನಮ್ಮ ಸೇವೆಯನ್ನು ತಿಳಿದವನಾಗಿ; **ಉತ್ ಅಗಾಯತ್**=[ಯಜಮಾನನ ಕೀರ್ತಿಯನ್ನು] ಹಾಡಿದನು.

**ಸ್ತೋತ್ರಗಳಿಂದ ಈ ಯಜ್ಞದಲ್ಲಿ ಪ್ರಾರ್ಥಿಸುತ್ತೇವೆ.**

**ಉದಯಿಸುತ್ತಿರುವ ಸೂರ್ಯನ ಮಂಡಲವು ಎಲ್ಲರಿಗೂ ಸಂತೋಷವನ್ನು**

ಏಂದ್ರ ಸಾನಸಿಗ್ಂ ರಯಿಗ್ಂ [ರಯಿಂ(೪೩)]ಸಜಿತ್ವಾನಗ್ಂ ಸದಾಸಹಮ್ । ವರ್ಷಿಷ್ಠಮೂತಯೇ ಭರ ॥

---

ಏತಿ । ಇಂದ್ರ । ಸಾನಸಿಮ್ । ರಯಿಮ್ [೪೩] ಸಜಿತ್ವಾನಮಿತಿ ಸ-ಜಿತ್ವಾನಮ್ । ಸದಾಸಹಮಿತಿ ಸದಾ-ಸಹಮ್ ॥ ವರ್ಷಿಷ್ಠಮ್ । ಊತಯೇ । ಭರ ॥

---

| ಮಂತ್ರ | ವಿನಿಯೋಗ |
|---|---|
| ಏಂದ್ರ ಸಾನಸಿಗ್ಂ...ಭರ ॥ | 'ಇಂದ್ರಾಯ ಜ್ಯೇಷ್ಠಾಯ ಪುರೋಡಾಶಮೇಕಾದಶ ಕಪಾಲಂ ಮಹಾವ್ರೀಹೀಣಾಮ್' ಎಂದು ವಿಹಿತ ವಾಗಿರುವ ಐಂದ್ರಯಾಗದ ಪುರೋನುವಾಕ್ಯೆ. |

---

+ಇಂದ್ರ=ಇಂದ್ರದೇವನೇ! ಸಾನಸಿಮ್=ಬೇಡಿದವರಿಗೆ ದಾನ ಮಾಡಲು ಸಾಕಾಗುವ; ಸಜಿತ್ವಾನಮ್=ಜಯಶೀಲರಾದ ಪುತ್ರಾದಿಗಳಿಂದ ಕೂಡಿರುವ; ಸದಾಸಹಮ್= ಯಾವಾಗಲೂ ಶತ್ರುಗಳನ್ನು ತಡೆದುಕೊಳ್ಳಬಲ್ಲ/ಸೋಲಿಸುವ; ವರ್ಷಿಷ್ಠಮ್= ಹೆಚ್ಚಾಗಿರುವ; ರಯಿಮ್=ಧನವನ್ನು; ಊತಯೇ=ನಮ್ಮ ರಕ್ಷಣಾರ್ಥವಾಗಿ; ಆ ಭರ=ತಂದುಕೊಡು.

---

ಉಂಟುಮಾಡುತ್ತದೆ. ಆತನು ಮರ್ತ್ಯಾಮರ್ತ್ಯಾದಿ ಸಮಸ್ತಲೋಕಗಳನ್ನೂ ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗುವಂತೆ ಮಾಡಿ ಅವರಿಗೆ ಹಿತವನ್ನು ಉಂಟು ಮಾಡುತ್ತಾನೆ. ಆತನು ಚಿನ್ನದ ರಥದಲ್ಲಿ ಕುಳಿತು ಎಲ್ಲಾ ಲೋಕಗಳನ್ನು ನೋಡುತ್ತಾ ಸಂಚರಿಸುತ್ತಾನೆ. ಆತನು ನಮ್ಮ ಇಷ್ಟಾರ್ಥಗಳನ್ನು ಕರುಣಿಸಲಿ.

ರುದ್ರನು ಎಲ್ಲ ಪಶುಗಳಿಗೂ ಪಾಲಕನು. ಆತನು ನಮ್ಮ ನಾಲ್ಕು ಕಾಲುಗಳುಳ್ಳ ಚತುಷ್ಪಾತ್ಪಶುವರ್ಗಕ್ಕೂ, ಎರಡು ಕಾಲುಗಳುಳ್ಳ ದ್ವಿಪಾತ್ಪಶುವರ್ಗಕ್ಕೂ ವಿಶೇಷವಾಗಿ ಪುತ್ರರಿಗೂ ರಕ್ಷಣೆಯನ್ನು ಕೊಡಲಿ ಎಂದು ಪ್ರಾರ್ಥಿಸಿ, ಆತನಿಗೆ ಈ ಹವಿಸ್ಸನ್ನು ಅರ್ಪಿಸುತ್ತಿದ್ದೇವೆ.

ಪ್ರ ಸಸಾಹಿಷೇ ಪುರುಹೂತ ಶತ್ರೂಞ್ಜ್ಯೇಷ್ಠಸ್ತೇ ಶುಷ್ಮ

ಇಹ ರಾತಿರಸ್ತು । ಇಂದ್ರಾಽಽಭರ ದಕ್ಷಿಣೇನಾ ವಸೂನಿ

ಪತಿಸ್ಸಿಂಧೂನಾಮಸಿ ರೇವತೀನಾಮ್ ॥

---

ಪ್ರೇತಿ । ಸಸಾಹಿಷೇ । ಪುರುಹೂತೇತಿ ಪುರು-ಹೂತ । ಶತ್ರೂನ್ । ಜ್ಯೇಷ್ಠಃ । ತೇ । ಶುಷ್ಮಃ । ಇಹ । ರಾತಿಃ । ಅಸ್ತು ॥ ಇಂದ್ರ । ಏತಿ । ಭರ । ದಕ್ಷಿಣೇನ । ವಸೂನಿ । ಪತಿಃ । ಸಿಂಧೂನಾಮ್ । ಅಸಿ । ರೇವತೀನಾಮ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಸಸಾಹಿಷೇ...ರೇವತೀನಾಮ್ ॥ | ಐಂದ್ರಯಾಗದ ಯಾಜ್ಯಾನುವಾಕ್ಯೆ. |

---

✦ ಪುರುಹೂತ=ಹಲವು ಯಾಗಗಳಲ್ಲಿ ಆಹ್ವಾನಿಸಲ್ಪಡುವ; ಇಂದ್ರ=ಇಂದ್ರನೇ! ಶತ್ರೂನ್=ವೈರಿಗಳನ್ನು; ಪ್ರ ಸಸಾಹಿಷೇ=ಚೆನ್ನಾಗಿ ತಿರಸ್ಕರಿಸಬಲ್ಲವನಾಗಿರುವೆ. ತೇ ಶುಷ್ಮಃ=ನಿನ್ನ ಬಲವು; ಜ್ಯೇಷ್ಠಃ=ಅಧಿಕವಾಗಿದೆ; ಇಹ ರಾತಿಃ ಅಸ್ತು=ಈ ಯಜ್ಞದಲ್ಲಿ ಯಜಮಾನನಿಗೆ ಫಲದಾನವಾಗಲಿ/ನಿನಗೆ ಈ ಯಾಗದಲ್ಲಿ ಹವಿಃಪ್ರದಾನವಾಗಲಿ; ಇಂದ್ರ! ದಕ್ಷಿಣೇನ ವಸೂನಿ=ಹೇ! ಇಂದ್ರನೇ! ನಿನ್ನ ಬಲಗೈಯಿಂದ [ಯಜಮಾನನಿಗೆ] ಧನಗಳನ್ನು; ಆಭರ=ತಂದುಕೊಡು; ಸಿಂಧೂನಾಮ್ ರೇವತೀನಾಮ್=ಸಮುದ್ರಸಮಾನವಾದ ಧನವುಳ್ಳ; ಸರ್ವಫಲಸಾಧನವಾದ ನೀರುಗಳಿಗೆ; ಪತಿಃ ಅಸಿ=ಒಡೆಯನಾಗಿರುವೆ;

---

'ನಮಸ್ಕಾರೈರೇವೈನಗ್ಂ ಶಮಯತಿ' ಎಂದು ರುದ್ರನು ನಮಸ್ಕಾರಪ್ರಿಯನೆಂದು ಹೇಳಿದೆ. ರುದ್ರದೇವನೇ! ನಿನಗೆ ನಮಸ್ಕರಿಸುತ್ತೇವೆ. ಹವಿಸ್ಸನ್ನು ಸಮರ್ಪಿಸುತ್ತೇವೆ. ನಮ್ಮಲ್ಲಿ ಏನಾದರೂ ಲೋಪ-ದೋಷಗಳಿದ್ದರೂ ನೀನು ಕುಪಿತನಾಗದಿರು. ನಮ್ಮ

ತ್ವಗ್ಂ ಸುತಸ್ಯ ಪೀತಯೇ ಸದ್ಯೋ ವೃದ್ಧೋ

ಅಜಾಯಥಾಃ । ಇಂದ್ರ ಜ್ಯೈಷ್ಠ್ಯಾಯ ಸುಕ್ರತೋ ॥

---

ತ್ವಮ್ । ಸುತಸ್ಯ । ಪೀತಯೇ । ಸದ್ಯಃ । ವೃದ್ಧಃ । ಅಜಾಯಥಾಃ ॥ ಇಂದ್ರ । ಜ್ಯೈಷ್ಠ್ಯಾಯ । ಸುಕ್ರತೋ ಇತಿ ಸು-ಕ್ರತೋ ।

---

| ಮಂತ್ರ | ವಿನಿಯೋಗ |
| --- | --- |
| ತ್ವಗ್ಂ ಸುತಸ್ಯ...ಸುಕ್ರತೋ ॥ | ಐಂದ್ರಯಾಗದ ವೈಕಲ್ಪಿಕ ಪುರೋನುವಾಕ್ಯೆ. |

---

+ಸುಕ್ರತೋ ಇಂದ್ರ=ಒಳ್ಳೆಯ ಕಾರ್ಯಗಳನ್ನು ಮಾಡುವ ಶತಕ್ರತುವಾದ ಇಂದ್ರನೇ! ತ್ವಮ್=ನೀನು; ಸುತಸ್ಯ ಪೀತಯೇ=ಅಭಿಷವ ಮಾಡಿರುವ ಸೋಮರಸದಪಾನಕ್ಕಾಗಿ; ಸದ್ಯಃ=ಒಡನೆಯೇ; ವೃದ್ಧಃ ಅಜಾಯಥಾಃ=ಬೆಳೆದವನಾಗಿದ್ದೀಯೆ; ಜ್ಯೈಷ್ಠ್ಯಾಯ =ಇದು ನಿನ್ನ ಸರ್ವದೇವಜ್ಯೈಷ್ಠ್ಯಕಾರಣವಾಗುತ್ತದೆ.

---

ಪುತ್ರ-ಪೌತ್ರಾದಿಗಳ ವಿಷಯದಲ್ಲಿಯೂ, ಆಯುಸ್ಸು, ಗವಾಶ್ವಾದಿವಿಷಯದಲ್ಲಿಯೂ ಭೃತ್ಯರ ವಿಷಯದಲ್ಲಿಯೂ ಹಿಂಸೆ ಮಾಡದಿರು. ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸುತ್ತೇವೆ.

ನಮ್ಮ ಮಂತ್ರರೂಪವಾದ ಸ್ತುತಿವಾಕ್ಯಗಳು ಬೃಹಸ್ಪತಿದೇವನನ್ನು ಸ್ತುತಿಸುತ್ತವೆ. ಈ ವಾಕ್ಯಗಳು ಅನ್ನಾದಿಗಳನ್ನು ಕೊಟ್ಟು ರಕ್ಷಿಸುವ ಮೇಘಗಳಂತೆ ಅಪಮೃತ್ಯು ಪರಿಹಾರ ಮಾಡಿ ಆಯುಸ್ಸನ್ನು ಕೊಡುತ್ತವೆ. ಮೋಡಗಳ ಗುಡುಗಿನಂತೆ ಉಚ್ಚಧ್ವನಿಯನ್ನು ಮಾಡುತ್ತವೆ. ಬೆಟ್ಟಗಳನ್ನು ಸ್ಪರ್ಶಿಸಿ, ಪ್ರಕಾಶಮಾನವಾಗಿ ಹರಿಯುವ ನದೀಪ್ರವಾಹಗಳಂತೆ ಸಂತೋಷಪ್ರದವಾಗಿವೆ. ಇಂತಹ ನಮ್ಮ ಸ್ತುತಿಗಳು ಬೃಹಸ್ಪತಿಯನ್ನು ಸಂತೋಷಪಡಿಸಲಿ. ನಮ್ಮ ಇಷ್ಟಾರ್ಥಗಳನ್ನು ಆ ಬೃಹಸ್ಪತಿದೇವನು ಕರುಣಿಸಲಿ.

ಪರಮಾತ್ಮನು ಸನ್ಯಾಸಿಗಳ ಸ್ತೋತ್ರಗಳಿಂದ ಸುಪ್ರೀತನಾಗಿ ಅವರ ಪುರುಷಾರ್ಥವಾದ ಮೋಕ್ಷದ ಪ್ರತಿಬಂಧವನ್ನು ದೂರಮಾಡುತ್ತಾನೆ. ಸನ್ಯಾಸಿಗಳು ಲೋಕದ ಉದ್ಧಾರಕ್ಕಾಗಿ

ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ಭುವೋ ವಿಶ್ವೇಷು

ಸವನೇಷು ಯಜ್ಞಿಯಃ । ಭುವೋ ನೄಗ್ಂಶ್ಚ್ಯೌತ್ನೋ

ವಿಶ್ವಸ್ಮಿನ್ಭರೇ ಜ್ಯೇಷ್ಠಶ್ಚ ಮಂತ್ರೋ [ಮಂತ್ರಃ(೪೪)

ವಿಶ್ವಚರ್ಷಣೇ] ವಿಶ್ವಚರ್ಷಣೇ ॥

---

ಭುವಃ । ತ್ವಮ್ । ಇಂದ್ರ । ಬ್ರಹ್ಮಣಾ । ಮಹಾನ್ । ಭುವಃ । ವಿಶ್ವೇಷು । ಸವನೇಷು ।

ಯಜ್ಞಿಯಃ ॥ ಭುವಃ । ನೄನ್ । ಚ್ಯೌತ್ನಃ । ವಿಶ್ವಸ್ಮಿನ್ । ಭರೇ । ಜ್ಯೇಷ್ಠಃ । ಚ । ಮಂತ್ರಃ ।

(೪೪)। ವಿಶ್ವಚರ್ಷಣ ಇತಿ ವಿಶ್ವ-ಚರ್ಷಣೇ ॥

---

| ಮಂತ್ರ | ವಿನಿಯೋಗ |
|---|---|
| ಭುವಸ್ತ್ವಮಿಂದ್ರ...ವಿಶ್ವಚರ್ಷಣೇ ॥ | ಐಂದ್ರಯಾಗದ ವೈಕಲ್ಪಿಕ ಯಾಜ್ಯಾನುವಾಕ್ಯೆ. |

---

✦ಇಂದ್ರ=ಇಂದ್ರದೇವನೇ! ತ್ವಮ್=ನೀನು; ಬ್ರಹ್ಮಣಾ ಮಹಾನ್ ಭುವಃ=ಮಂತ್ರದಿಂದ/ವೇದದಿಂದ ಸ್ತುತಿಸಲ್ಪಟ್ಟು ಮಹಾಂತನಾಗಿದ್ದೀಯೆ/ಮಹೇಂದ್ರನಾಗಿದ್ದೀಯೆ; ವಿಶ್ವೇಷು ಸವನೇಷು=ಪ್ರಾತಃಸವನವೇ ಮೊದಲಾದ ಮೂರು ಸವನಗಳಲ್ಲಿಯೂ; ಯಜ್ಞಿಯಃ ಭುವಃ=ಯಜ್ಞಾರ್ಹನಾಗಿದ್ದೀಯೆ. ನೄನ್ ಚ್ಯೌತ್ನಃ ಭುವಃ=ಶತ್ರುಪುರುಷರನ್ನು ನಾಶಪಡಿಸತಕ್ಕವನಾಗಿದ್ದೀಯೆ; ವಿಶ್ವಚರ್ಷಣೇ=ಸಕಲಮನುಷ್ಯರಿಗೂ ಸ್ವಾಮಿಯಾದ ಇಂದ್ರದೇವನೇ! ವಿಶ್ವಸ್ಮಿನ್ ಭರೇ=ಎಲ್ಲ ಯಾಗಗಳಲ್ಲಿಯೂ/ಎಲ್ಲ ಯುದ್ಧಗಳಲ್ಲಿಯೂ; ಜ್ಯೇಷ್ಠಃ ಮಂತ್ರಃ ಭುವಃ ಚ=ಜ್ಯೇಷ್ಠನೆಂದು ಗಮನಿಸಬೇಕಾದವನೂ ಆಗಿರುವೆ.

---

ಧರ್ಮೋಪದೇಶವನ್ನು ಮಾಡುತ್ತಾರೆ. ಲೋಕಮಿತ್ರರಾದ ಸನ್ಯಾಸಿಗಳಂತೆ ಯಜಮಾನಮಿತ್ರರಾದ ಋತ್ವಿಜರು ಯಜ್ಞದಲ್ಲಿ ದೇವಪ್ರೀತ್ಯರ್ಥವಾಗಿ ಮಂತ್ರಪೂರ್ವಕವಾಗಿ

मित्रस्य चर्षणीधृतः श्रवो देवस्य सानसिम् ।

सत्यं चित्रश्रवस्तमम् ॥

---

मित्रस्य । चर्षणीधृत इति चर्षणि-धृतः । श्रवः । देवस्य ।

सानसिम् ॥ सत्यम् । चित्रश्रवस्तममिति चित्रश्रवः-तमम् ॥

---

| ಮಂತ್ರ | ವಿನಿಯೋಗ |
| --- | --- |
| ಮಿತ್ರಸ್ಯ...ಶ್ರವಸ್ತಮಮ್ ॥ | 'ಮಿತ್ರಾಯ ಸತ್ಯಾಯಾಂಬಾನಾಮ್' ಎಂದು ವಿಹಿತವಾಗಿರುವ ಮಿತ್ರಚರುಯಾಗದ ಪುರೋನುವಾಕ್ಯೆ. |

---

+ಚರ್ಷಣೀಧೃತಃ=ಮನುಷ್ಯರನ್ನು ಧರಿಸಿರುವ; ಮಿತ್ರಸ್ಯ ದೇವಸ್ಯ=ಮಿತ್ರದೇವನ; ಶ್ರವಃ=ಕೇಳಬೇಕಾದ ಕೀರ್ತಿಯು [ಮಹತ್ತಾಗಿರುತ್ತದೆ] [ಅಂತಹ] ಸಾನಸಿಮ್=ಫಲವನ್ನು ಕೊಡುವ ಸ್ವಭಾವವುಳ್ಳ; ಸತ್ಯಮ್=ಸತ್ಯವಾದಿಯಾದ/ಶಾಶ್ವತನಾದ; ಚಿತ್ರಶ್ರವಸ್ತಮಮ್=ವಿಚಿತ್ರ/ಬಹುವಿಧಕೀರ್ತಿಯುಳ್ಳವರಲ್ಲಿ ಶ್ರೇಷ್ಠನಾದ; [ಮಿತ್ರದೇವನನ್ನು ನಾವು ಯಾಗದಿಂದ ಪೂಜಿಸುತ್ತೇವೆ]

---

ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸುತ್ತಾರೆ. ಈ ಹವಿಸ್ಸಿನಿಂದ ಸುಪ್ರೀತನಾಗಿ ಬೃಹಸ್ಪತಿಯು ಯಜಮಾನನ ಸ್ವರ್ಗ/ಫಲಪ್ರಾಪ್ತಿಗೆ ಪ್ರತಿಬಂಧಕವಾದ ಕಲ್ಲಿನ ಬಾಗಿಲಿನಂತಿರುವ ಪಾಪಗಳನ್ನು ಹೋಗಲಾಡಿಸಲಿ. ದೇವತೆಗಳ ಮಧ್ಯದಲ್ಲಿ ಯಜಮಾನನನ್ನು ಪ್ರಶಂಸಿಸಲಿ.

ಇಂದ್ರನೇ! ನಮ್ಮ ರಕ್ಷಣಾರ್ಥವಾಗಿ ಧನವನ್ನು ತಂದು ಕೊಡು. ಆ ಧನವು ದಾನ ಮಾಡಲು ಸಾಕಾಗುವಷ್ಟಿರಲಿ. ಜಯಶೀಲರಾದ ಪುತ್ರಾದಿಗಳಿಂದ ಕೂಡಿರಲಿ. ಯಾವಾಗಲೂ ಶತ್ರುಗಳನ್ನು ಸೋಲಿಸುವಷ್ಟಿರಲಿ. ಹೆಚ್ಚಾಗಿರಲಿ. ಇಂತಹ ಧನವನ್ನು ನಮಗೆ ಕರುಣಿಸು.

ಮಿತ್ರೋ ಜನಾನ್ ಯಾತಯತಿ ಪ್ರಜಾನನ್ಮಿತ್ರೋ ದಾಧಾರ ಪೃಥಿವೀಮುತ ದ್ಯಾಮ್ । ಮಿತ್ರಃ ಕೃಷ್ಟೀರನಿಮಿಷಾಽಭಿಚಷ್ಟೇ ಸತ್ಯಾಯ ಹವ್ಯಂ ಘೃತವದ್ವಿಧೇಮ ॥

---

ಮಿತ್ರಃ । ಜನಾನ್ । ಯಾತಯತಿ । ಪ್ರಜಾನನ್ನಿತಿ ಪ್ರ-ಜಾನನ್ । ಮಿತ್ರಃ । ದಾಧಾರ । ಪೃಥಿವೀಮ್ । ಉತ । ದ್ಯಾಮ್ ॥ ಮಿತ್ರಃ । ಕೃಷ್ಟೀಃ । ಅನಿಮಿಷೇತ್ಯನಿ-ಮಿಷಾ । ಅಭೀತಿ । ಚಷ್ಟೇ । ಸತ್ಯಾಯ । ಹವ್ಯಮ್ । ಘೃತವದಿತಿ ಘೃತ-ವತ್ । ವಿಧೇಮ ॥

---

| ಮಂತ್ರ | ವಿನಿಯೋಗ |
| --- | --- |
| ಮಿತ್ರೋ...ವಿಧೇಮ ॥ | ಮಿತ್ರಚರುಯಾಗದ ಯಾಜ್ಯಾನುವಾಕ್ಯೆ. |

---

✦ಮಿತ್ರಃ=ಮಿತ್ರದೇವನು; ಪ್ರಜಾನನ್=ಎಲ್ಲವನ್ನೂ ತಿಳಿದವನಾಗಿ; ಜನಾನ್ ಯಾತಯತಿ=ಜನರನ್ನು [ತಮ್ಮ ತಮ್ಮ ಕಾರ್ಯಗಳಲ್ಲಿ] ತೊಡಗಿಸುತ್ತಾನೆ. ಮಿತ್ರಃ= ಮಿತ್ರನು; ಪೃಥಿವೀಮ್=ಭೂಮಿಯನ್ನೂ; ಉತ=ಮತ್ತು; ದ್ಯಾಮ್=ದ್ಯುಲೋಕವನ್ನೂ; ದಾಧಾರ=ಧರಿಸಿರುವನು; ಮಿತ್ರಃ=ಮಿತ್ರದೇವನು; ಕೃಷ್ಟೀಃ=ಮನುಷ್ಯರನ್ನೂ; ಅನಿಮಿಷಾ=ದೇವತೆಗಳನ್ನೂ; ಅಭಿಚಷ್ಟೇ=ಎಲ್ಲ ಕಡೆಗಳಲ್ಲಿಯೂ ನೋಡುತ್ತಾನೆ; ಸತ್ಯಾಯ=ಸತ್ಯವಾದ ಫಲಕ್ಕಾಗಿ/ಆ ಸತ್ಯಸ್ವರೂಪನಾದ ಮಿತ್ರದೇವನಿಗಾಗಿ; ಘೃತವತ್= ತುಪ್ಪದಿಂದ ಕೂಡಿರುವ; ಹವ್ಯಮ್=ಚರುರೂಪಹವಿಸ್ಸನ್ನು; ವಿಧೇಮ=ಕೊಡುತ್ತೇವೆ.

---

ಇಂದ್ರನು ಹಲವು ಯಾಗಗಳಲ್ಲಿ ಆಹೂತನಾಗಿರುವುದರಿಂದ ಪುರುಹೂತನು. ಆತನ ಬಲವು ಅಧಿಕವಾಗಿದೆ. ಆತನು ಈ ಯಾಗದಲ್ಲಿ ಯಜಮಾನನಿಗೆ ಫಲವನ್ನು ಕೊಡಲಿ. ಆತನು ಧನವುಳ್ಳ ಪ್ರಜಾಪ್ರವಾಹಕ್ಕೆ ಒಡೆಯನು. ಸರ್ವಧನಸಾಧನವಾದ ನೀರುಗಳಿಗೆ ಒಡೆಯನು. ಆತನು ಬಲಗೈಯಿಂದ ಧನಗಳನ್ನು ತಂದುಕೊಡಲಿ.

ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್, ಯಸ್ತ ಆದಿತ್ಯ ಶಿಕ್ಷತಿ ವ್ರತೇನ । ನ ಹನ್ಯತೇ ನ ಜೀಯತೇ ತ್ವೋತೋ ನೈನಮಗ್ಂಹೋ ಅಶ್ನೋತ್ಯಂತಿತೋ ನ ದೂರಾತ್ ॥

---

ಪ್ರೇತಿ । ಸಃ । ಮಿತ್ರ । ಮರ್ತಃ । ಅಸ್ತು । ಪ್ರಯಸ್ವಾನ್ । ಯಃ । ತೇ । ಆದಿತ್ಯ । ಶಿಕ್ಷತಿ । ವ್ರತೇನ ॥ ನ । ಹನ್ಯತೇ । ನ । ಜೀಯತೇ । ತ್ವೋತಃ । ನ । ಏನಮ್ । ಅಗ್ಂಹಃ । ಅಶ್ನೋತಿ । ಅಂತಿತಃ । ನ । ದೂರಾತ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಸ ಮಿತ್ರ...ದೂರಾತ್ ॥ | ಮಿತ್ರಚರುಯಾಗದ ವೈಕಲ್ಪಿಕಯಾಜ್ಯೆ. |

---

+ಆದಿತ್ಯ=ಅದಿತಿಪುತ್ರನಾದ; ಮಿತ್ರ=ಮಿತ್ರದೇವನೇ! ಯಃ=ಯಾವನು; ತೇ=ನಿನಗೆ ಸಂಬಂಧಿಸಿದ; ವ್ರತೇನ=ಯಾಗಾನುಷ್ಠಾನದಿಂದ; ಶಿಕ್ಷತಿ=ಉತ್ತಮಕರ್ಮಾನುಷ್ಠಾನ ಮಾಡಲು ಸಮರ್ಥನಾಗಬೇಕೆಂದು ಬಯಸುವನೋ/ತಿಳಿಯುವನೋ; ಸಃ ಮರ್ತಃ= ಆ ಮನುಷ್ಯನು; ಪ್ರಯಸ್ವಾನ್=ಕರ್ಮಫಲಯುಕ್ತನಾಗಿ; ಪ್ರ ಅಸ್ತು=ಚೆನ್ನಾಗಿ ಆಗಲಿ; ತ್ವೋತಃ=ನಿನ್ನಿಂದ ರಕ್ಷಿತನಾದವನು; ನ ಹನ್ಯತೇ=ರೋಗಾದಿಗಳಿಂದ ಪೀಡಿಸಲ್ಪಡುವುದಿಲ್ಲ. ನ ಜೀಯತೇ=ಹಗೆಗಳಿಂದ ಸೋಲಿಸಲ್ಪಡುವುದಿಲ್ಲ. ಏನಮ್=ಈ ಯಜಮಾನನನ್ನು; ಅಗ್ಂಹಃ=ಪಾಪವು; ಅಂತಿತಃ=ಸಮೀಪದಲ್ಲಿಯೂ; ನ ಅಶ್ನೋತಿ= ವ್ಯಾಪಿಸುವುದಿಲ್ಲ; ದೂರಾತ್=ದೂರದಿಂದಲೂ; ನ ಅಶ್ನೋತಿ=ವ್ಯಾಪಿಸುವುದಿಲ್ಲ.

---

ಒಳ್ಳೆಯ ಕಾರ್ಯಗಳನ್ನು ಮಾಡುವ ಶತಕ್ರತುವಾದ ಇಂದ್ರನೇ! ನೀನು ಅಭಿಷವ ಮಾಡಿದ ಸೋಮರಸಪಾನಕ್ಕಾಗಿ ಒಡನೆಯೇ ಬೆಳೆದವನಾಗಿರುವೆ. ನೀನು ನಮ್ಮ ಹವಿಸ್ಸನ್ನು ಸ್ವೀಕರಿಸು. ಪ್ರಸನ್ನನಾಗು. ಫಲಪ್ರದನಾಗಿ ನಮಗೆ ಫಲವನ್ನು ನೀಡು.

ಯ[ಯತ್(೪೫)ಚಿದ್ಧಿ]ಚ್ಚಿದ್ಧಿ ತೇ ವಿಶೋ ಯಥಾ ಪ್ರ ದೇವ ವರುಣ ವ್ರತಮ್ । ಮಿನೀಮಸಿ ದ್ಯವಿದ್ಯವಿ ॥

ಯತ್ ।(೪೫)। ಚಿತ್ । ಹಿ । ತೇ । ವಿಶಃ । ಯಥಾ । ಪ್ರೇತಿ । ದೇವ । ವರುಣ । ವ್ರತಮ್ ॥ ಮಿನೀಮಸಿ । ದ್ಯವಿದ್ಯವೀತಿ ದ್ಯವಿ-ದ್ಯವಿ ॥

| ಮಂತ್ರ | ವಿನಿಯೋಗ |
| --- | --- |
| ಯಚ್ಚಿದ್ಧಿ ತೇ...ದ್ಯವಿದ್ಯವಿ ॥ | 'ವರುಣಾಯ ಧರ್ಮಪತಯೇ ಯವಮಯಂ ಚರುಮ್' ಎಂದು ವಿಹಿತವಾದ ವರುಣ ಚರುಯಾಗದ ಪುರೋನುವಾಕ್ಯೆ. |

+ವರುಣ ದೇವ= ವರುಣದೇವನೇ! ತೇ=ನಿನ್ನ [ನಿನಗೆ ಸಂಬಂಧಿಸಿದ] ಯತ್ ಚಿತ್ ವ್ರತಮ್= ಯಾವುದಾದರೂ ಯಾಗಾದಿಗಳನ್ನು ಕುರಿತು; ದ್ಯವಿದ್ಯವಿ=ದಿನದಿನದಲ್ಲಿಯೂ; ವಿಶಃ ಯಥಾ=ಮನುಷ್ಯರು ಹೇಗೋ [ಹಾಗೆ]; ಪ್ರ ಮಿನೀಮಸಿ ಹಿ=ಆಲೋಚಿಸುವೆವಷ್ಟೆ.

ಇಂದ್ರನೇ! ನೀನು ಮಂತ್ರಸ್ತುತ್ಯನಾಗಿ ಮಹೇಂದ್ರನಾಗಿರುವೆ. ಯಾಗದ ಎಲ್ಲ ಸವನಗಳಲ್ಲಿಯೂ ಯಾಗಾರ್ಹನಾಗಿರುವೆ. ನೀನು ಶತ್ರುನಾಶಕನು. ಸಕಲಮಾನವರಿಗೂ ಸ್ವಾಮಿಯಾಗಿರುವೆ. ಎಲ್ಲ ಯಾಗಗಳಲ್ಲಿಯೂ ಶ್ರೇಷ್ಠನೆಂದು ಪರಿಗಣಿಸಬೇಕಾದವನೂ ನೀನೇ ಆಗಿರುವೆ. ಇಂತಹ ಪ್ರಭಾವಶಾಲಿಯು ನೀನಾಗಿರುವೆ. ನೀನು ನಾವು ನೀಡುವ ಹವಿಸ್ಸನ್ನು ಸ್ವೀಕರಿಸಿ ಪ್ರಸನ್ನನಾಗು.

ಮಿತ್ರದೇವನು ಕೇಳಬೇಕಾದ ಕೀರ್ತಿಯುಳ್ಳವನು. ಲೋಕಗಳನ್ನು ಧರಿಸಿದವನು. ಆಶ್ರಿತರಿಗೆ ಫಲವನ್ನು ಕೊಡತಕ್ಕವನು. ಸತ್ಯವಾದಿಯು. ಕೇಳಬೇಕಾದ ವಿವಿಧ ಕೀರ್ತಿಯುಳ್ಳವರಲ್ಲಿ ಶ್ರೇಷ್ಠನು. ಇಂತಹ ಮಿತ್ರದೇವನನ್ನು ಆರಾಧಿಸುತ್ತೇವೆ.

ಮಿತ್ರದೇವನು ಎಲ್ಲವನ್ನೂ ತಿಳಿದವನು. ಆತನು ಜನರನ್ನು ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗುವಂತೆ ಮಾಡುತ್ತಾನೆ. ಮಿತ್ರದೇವನು ಭೂಲೋಕ-ದ್ಯುಲೋಕಗಳನ್ನು

ಯತ್ಕಿಂ ಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ

ಮನುಷ್ಯಾಶ್ಚರಾಮಸಿ । ಅಚಿತ್ತೀ ಯತ್ತವ ಧರ್ಮಾ

ಯುಯೋಪಿಮ ಮಾ ನಸ್ತಸ್ಮಾದೇನಸೋ ದೇವ ರೀರಿಷಃ ॥

---

ಯತ್ । ಕಿಮ್ । ಚ । ಇದಮ್ । ವರುಣ । ದೈವ್ಯೇ । ಜನೇ । ಅಭಿದ್ರೋಹಮಿತ್ಯಭಿ-ದ್ರೋಹಮ್ । ಮನುಷ್ಯಾಃ । ಚರಾಮಸಿ ॥ ಅಚಿತ್ತೀ । ಯತ್ । ತವ । ಧರ್ಮಾ । ಯುಯೋಪಿಮ । ಮಾ । ನಃ । ತಸ್ಮಾತ್ । ಏನಸಃ । ದೇವ । ರೀರಿಷಃ ।

---

| ಮಂತ್ರ | ವಿನಿಯೋಗ |
|---|---|
| ಯತ್ಕಿಂಚೇದಂ...ರೀರಿಷಃ ॥ | ವರುಣಚರುಯಾಗದ ಯಾಜ್ಯಾನುವಾಕ್ಯೆ. |

---

+ವರುಣ ದೇವ=ವರುಣದೇವನೇ! ದೈವ್ಯೇ ಜನೇ=ದೇವತೆಗಳ ವಿಷಯದಲ್ಲಿ; ಯತ್ ಕಿಮ್ ಚ ಇದಮ್ ಅಭಿದ್ರೋಹಮ್=ಯಾವುದಾದರೂ ಈ ಅಪರಾಧವನ್ನು; ಮನುಷ್ಯಾಃ ಚರಾಮಸಿ=ಮನುಷ್ಯರಾದ ನಾವು ಮಾಡಿರುತ್ತೇವೆಯೋ; ಅಚಿತ್ತೀ=ಅಜ್ಞಾನದಿಂದ; ಯತ್ ತವ ಧರ್ಮಾ=ನಿನಗೆ ಸಂಬಂಧಿಸಿದ ಯಾವ ಯಾಗಾದಿಧರ್ಮಕಾರ್ಯಗಳನ್ನು; ಯುಯೋಪಿಮ=ಲೋಪಗೊಳಿಸಿರುವೆವೋ; ನಃ=ನಮ್ಮನ್ನು; ತಸ್ಮಾತ್ ಏನಸಃ=ಆ ಪಾಪಗಳಿಂದಲೂ/ಧರ್ಮಲೋಪದಿಂದಲೂ; ಮಾ ರೀರಿಷಃ=ಹಿಂಸಿಸಬೇಡ [ಕ್ಷಮಿಸು].

---

ಧರಿಸಿರುತ್ತಾನೆ. ಆತನು ಮನುಷ್ಯರನ್ನೂ ದೇವತೆಗಳನ್ನೂ ನೋಡುತ್ತಿರುತ್ತಾನೆ. ಅಂತಹ ಮಿತ್ರದೇವನಿಗಾಗಿ ಶಾಶ್ವತವಾದ ಫಲವನ್ನು ಪಡೆಯಲು ಆಜ್ಯದಿಂದ ಮಿಶ್ರಿತವಾದ ಈ ಚರುಹವಿಸ್ಸನ್ನು ಸಮರ್ಪಿಸುತ್ತೇವೆ.

ಆದಿತ್ಯರೂಪನಾದ ಮಿತ್ರನೇ! ಉದಯಾಸ್ತಗಳಲ್ಲಿ ಸದಾ ಕಾರ್ಯನಿರತನಾದ ನಿನ್ನನ್ನು

ಕಿತವಾಸೋ ಯದ್ರಿರಿಪುರ್ನ ದೀವಿ ಯದ್ವಾ ಘಾ ಸತ್ಯಮುತ ಯನ್ನ ವಿದ್ಮ । ಸರ್ವಾ ತಾ ವಿಷ್ಯ ಶಿಥಿರೇವ ದೇವಾಥಾ ತೇ ಸ್ಯಾಮ ವರುಣ ಪ್ರಿಯಾಸಃ ॥೪೬–11॥

[ಸೋಮೋ ಗೋಷು ಮಾ ರಯಿಂ ಮಂತ್ರೋ ಯಚ್ಛಿಥಿರಾ ಸಪ್ತ ಚ ॥]

---

ಕಿತವಾಸಃ । ಯತ್ । ರಿರಿಪುಃ । ನ । ದೀವಿ । ಯತ್ । ವಾ । ಘ । ಸತ್ಯಮ್ । ಉತ । ಯತ್ । ನ । ವಿದ್ಮ ॥ ಸರ್ವಾ । ತಾ । ವೀತಿ । ಸ್ಯ । ಶಿಥಿರಾ । ಇವ । ದೇವ । ಅಥ । ತೇ । ಸ್ಯಾಮ । ವರುಣ । ಪ್ರಿಯಾಸಃ [೪೬]

---

| ಮಂತ್ರ | ವಿನಿಯೋಗ |
| --- | --- |
| ಕಿತವಾಸೋ...ಪ್ರಿಯಾಸಃ ॥ | ಈ ವಾರುಣಚರುಯಾಗದ ವೈಕಲ್ಪಿಕ ಯಾಜ್ಯೆ. |

---

✦**ಕಿತವಾಸಃ**=ಜೂಜಾಡುವವರಂತೆ ಸ್ವಾರ್ಥಪರರಾದ ಋತ್ವಿಜರು; **ಯತ್ ರಿರಿಪುಃ**=ಯಾವ ಯಜ್ಞಾಂಗವನ್ನು ಲೋಪಗೊಳಿಸಿರುವರೋ; **ನ ದೀವಿ**=ಸರಿಯಾಗಿ ವ್ಯವಹರಿಸಲಿಲ್ಲವೋ; **ಯತ್ ವಾ ಘ ಸತ್ಯಮ್**=[ಯಾವ ಪಾಪವನ್ನು]. ಸತ್ಯವಾಗಿ ತಿಳಿದೂ [ಸೌಕರ್ಯಕ್ಕಾಗಿ] ಮಾಡಿರುವೆವೋ; **ಉತ**=ಅಥವಾ; **ಯತ್ ನ ವಿದ್ಮ**=ಯಾವುದನ್ನು ನಾವು ತಿಳಿಯದೇ [ಮಾಡಿರುವೆವೋ]; **ಸರ್ವಾ ತಾ ವಿಷ್ಯ**=ಆ ಪಾಪಗಳೆಲ್ಲವನ್ನೂ ಸಡಿಲಿಸು/ನಾಶಪಡಿಸು; **ಶಿಥಿರಾ ಇವ**=ಯಾವ ಕ್ಷುದ್ರ ಪಾಪಗಳುಂಟೋ; ಸರ್ವಾ ತಾ ವಿಷ್ಯ=ಅವುಗಳೆಲ್ಲವನ್ನೂ ಪರಿಹರಿಸು. **ಅಥ**=ಅನಂತರ; **ವರುಣ ದೇವ**=ಹೇ! ವರುಣದೇವನೇ! **ತೇ ಪ್ರಿಯಾಸಃ ಸ್ಯಾಮ**=[ಪಾಪಪರಿಹಾರವಾಗಿ] ನಾವು ನಿನಗೆ ಪ್ರಿಯರಾಗುವಂತಾಗಲಿ.

ನೋಡಿ ಯಾವನು ಕರ್ಮಾವಶ್ಯಕತೆಯನ್ನು ತಿಳಿಯುವನೋ, ತಿಳಿದು ಕರ್ಮಗಳನ್ನು ಮಾಡಲು ಸಮರ್ಥನಾಗುವನೋ ಅವನು ಉತ್ತಮಫಲವನ್ನು ಪಡೆಯುತ್ತಾನೆ. ನಿನ್ನಿಂದ ರಕ್ಷಿತನಾದ ಈ ಯಜಮಾನನನ್ನು ರೋಗಾದಿಗಳೂ ಪೀಡಿಸಲಾರವು. ಶತ್ರುಗಳೂ ಸೋಲಿಸಲಾರರು. ಪಾಪವು ಇವನನ್ನು ಹತ್ತಿರದಿಂದಾಗಲೀ ದೂರದಿಂದಾಗಲೀ ಮುಟ್ಟಲಾರದು. ನಿತ್ಯಕರ್ಮಪರನಿಗೆ ಪಾಪಸಂಬಂಧವೇ ಇರಲಾರದು.

ಹೇ! ವರುಣದೇವನೇ! ಮಾನವರು ಅನುದಿನವೂ ತಮ್ಮ ಕೆಲಸಗಳನ್ನು ಚಿಂತಿಸಿ ಮಾಡುವಂತೆ ನಾವು ನಿನಗೆ ಸಂಬಂಧಿಸಿದ ಯಾಗಾದಿಗಳನ್ನು ಕುರಿತು ಯಾವಾಗಲೂ ಚಿಂತಿಸಿ ಹಾಗೆಯೇ ಅನುಷ್ಠಿಸುತ್ತೇವೆ. ನೀನು ನಮ್ಮನ್ನು ಅನುಗ್ರಹಿಸು.

ಹೇ! ವರುಣದೇವನೇ! ಮಾನವರು ಪ್ರಮಾದ-ಆಲಸ್ಯಾದಿಗಳಿಂದ ತಪ್ಪು ಮಾಡುವ ಸ್ವಭಾವದವರು. ನಾವೂ ಮಾನವರು. ನಾವು ದೇವತೆಗಳ ವಿಷಯದಲ್ಲಿ ಅಪರಾಧ ಮಾಡಿರಬಹುದು. ನಿನಗೆ ಸಂಬಂಧಿಸಿದ ಯಾಗಾದಿಗಳನ್ನೂ ಅನುಷ್ಠಾನ ಮಾಡದೆ ಬಿಟ್ಟಿರಬಹುದು. ಅಜ್ಞಾನದಿಂದ ಬೇರೆಯ ಪಾಪಗಳನ್ನೂ ಮಾಡಿರಬಹುದು. ಆ ತಪ್ಪುಗಳಿಗಾಗಿ ನೀನು ನಮ್ಮನ್ನು ಹಿಂಸಿಸಬೇಡ. ಕ್ಷಮಿಸು. ಇಷ್ಟವಾದ ಫಲವನ್ನು ಕೊಡು.

ಹೇ! ವರುಣದೇವನೇ! ಋತ್ವಿಜರು ಸ್ವಾರ್ಥಪರರಾಗಿ ಯಾಗಾಂಗಗಳಲ್ಲಿ ಲೋಪವನ್ನು ಮಾಡಿರಬಹುದು. ನಾವು ತಿಳಿದೂ ತಪ್ಪು ಮಾಡಿರಬಹುದು. ತಿಳಿಯದೆಯೂ ತಪ್ಪನ್ನು ಮಾಡಿರಬಹುದು. ನೀನು ಅದೆಲ್ಲವನ್ನೂ ಪರಿಹರಿಸು. ಅಲ್ಪವಾದ ಪಾಪಗಳನ್ನು ಮಾಡಿದ್ದರೆ ಅದನ್ನು ದೂರ ಮಾಡು. ಪಾಪವಿದೂರರಾದ ನಾವು ನಿನಗೆ ಪ್ರಿಯರಾಗೋಣ. ಅದಕ್ಕಾಗಿ ಈ ಹವಿಸ್ಸನ್ನು ಅರ್ಪಿಸುತ್ತಿದ್ದೇವೆ.

---

## ವಿನಿಯೋಗಸಂಗ್ರಹ

ರಾಜಸೂಯೇ ದೇವಸುವಾಮಿಷ್ಟೌ ಯಾಜ್ಯಾ ಇಮಾಃ ಕ್ರಮಾತ್ ।
1-2ತ್ವಮಗ್ನೇ ಬೃಹದಾಗ್ನೇಯೇ 3-4ತ್ವಂ ಚ ಸೋಮೇತಿ ಸೌಮ್ಯಕೇ ॥
5-6ಆ ವಿಶ್ವದೇವಂ ಸಾವಿತ್ರೇ 7-8ಯಥಾ ನ ಇತಿ ರೌದ್ರಕೇ ।
ಬಾರ್ಹಸ್ಪತ್ಯ 9-10ಉದೇತ್ಯೇತತ್ ಐಂದ್ರೇ11-14ತ್ವೈಂದ್ರಚತುಷ್ಟಯಮ್॥
15-17ಮಿತ್ರಸ್ಯೇತಿ ತ್ರಯಂ ಮೈತ್ರೇ 18-20ವಾರುಣೇ ಯದಿತಿ ತ್ರಯಮ್ ।
ಏಕಾದಶಾನುವಾಕೇಽಸ್ಮಿನ್ ಮಂತ್ರಾ ಉಕ್ತಾ ಹಿ ವಿಶಂತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-20

ವಿ ವಾ ಏತಸ್ಯಾವಾಯೋ ಇಮೇ ವೈ ಚಿತ್ತ್ಯಾಗ್ನಿರ್ಭೂತಾನಾಂ ದೇವಾ ವಾ ಆಭ್ಯಾತಾನಾನೃತಾಷಾಡ್ರಾಷ್ಟ್ರಕಾಮಾಯ ದೇವಿಕಾ ವಾಸ್ತೋಷ್ಪತೇ ತ್ವಮಗ್ನೇ ಬೃಹದೇಕಾದಶ ॥ 11 ॥

ವಿ ವಾ ಏತಸ್ಯೇತ್ಯಾಹ ಮೃತ್ಯುರ್ಗಂಧರ್ವೋಽವರುಂಧೇ ಮಧ್ಯತಸ್ತ್ವಮಗ್ನೇ ಬೃಹತ್ಷಟ್ಚತ್ವಾರಿಗ್ಂಶತ್ ॥ 46 ॥

॥ ವಿ ವಾ ಏತಸ್ಯ ಪ್ರಿಯಾಸಃ ॥

ಹರಿಃ ಓಮ್ ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಇತಿ ತೃತೀಯಕಾಂಡೇ ಚತುರ್ಥಃ ಪ್ರಶ್ನಃ

## ಅನುವಾಕದ ವಿಶೇಷ ವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸಿನ ಹೆಸರು |
|---|---|
| ೧) ತ್ವಮಗ್ನೇ...ಯುವಾ ॥ | ಗಾಯತ್ರೀ |
| ೨) ಹವ್ಯವಾಡಗ್ನಿಃ...ಶ್ರವಾಗ್ಂಸಿ ॥ | ತ್ರಿಷ್ಟುಪ್ |
| ೩) ತ್ವಂ ಚ ಸೋಮ...ವನಸ್ಪತಿಃ ॥ | ಗಾಯತ್ರೀ |
| ೪) ಬ್ರಹ್ಮಾ ದೇವಾನಾಂ...ರೇಭನ್ ॥ | ತ್ರಿಷ್ಟುಪ್ |
| ೫) ಆ ವಿಶ್ವದೇವಗ್ಂ...ಸವಿತಾರಮ್ ॥ | ಗಾಯತ್ರೀ |
| ೬) ಆ ಸತ್ಯೇನ...ವಿಪಶ್ಯನ್ ॥ | ತ್ರಿಷ್ಟುಪ್ |
| ೭) ಯಥಾ ನೋ...ರುದ್ರಿಯಮ್ ॥ | ಗಾಯತ್ರೀ |
| ೮) ಮಾ ನಸ್ತೋಕೇ...ವಿಧೇಮ ತೇ ॥ | ಜಗತೀ |
| ೯) ಉದಪ್ರುತೋ...ಅನಾವನ್ ॥ | ತ್ರಿಷ್ಟುಪ್ |
| ೧೦) ಹಗ್ಂಸ್ಯೆರಿವ...ಅಗಾಯತ್ ॥ | ತ್ರಿಷ್ಟುಪ್ |
| ೧೧) ಐಂದ್ರ ಸಾನಸಿಗ್ಂ...ಭರ ॥ | ಗಾಯತ್ರೀ |
| ೧೨) ಪ್ರ ಸಸಾಹಿಷೇ...ರೇವತೀನಾಮ್ ॥ | ತ್ರಿಷ್ಟುಪ್ |

A
೪

೧೩) ತ್ವಗ್ಂ ಸುತಸ್ಯ...ಸುಕ್ರತೋ ॥ ಗಾಯತ್ರೀ

೧೪) ಭುವಸ್ತ್ವಮಿಂದ್ರ...ವಿಶ್ವಚರ್ಷಣೇ ॥ ತ್ರಿಷ್ಟುಪ್

೧೫) ಮಿತ್ರಸ್ಯ...ಶ್ರವಸ್ತಮಮ್ ॥ ಗಾಯತ್ರೀ

೧೬) ಮಿತ್ರೋ...ವಿಧೇಮ ॥ ತ್ರಿಷ್ಟುಪ್

೧೭) ಪ್ರ ಸ ಮಿತ್ರ...ದೂರಾತ್ ॥ ತ್ರಿಷ್ಟುಪ್

೧೮) ಯಚ್ಚಿದ್ಧಿ ತೇ...ದ್ಯವಿದ್ಯವಿ ॥ ಗಾಯತ್ರೀ

೧೯) ಯತ್ಕಿಂಚೇದಂ...ರೀರಿಷಃ ॥ ಜಗತೀ

೨೦) ಕಿತವಾಸೋ...ಪ್ರಿಯಾಸಃ ॥ ತ್ರಿಷ್ಟುಪ್

ಜ❁ಜಜ❁ಜ

# ತೈತ್ತಿರೀಯ ಸಂಹಿತಾ

## ತೃತೀಯಕಾಂಡಃ ಪಂಚಮಃ ಪ್ರಶ್ನಃ

### ಪ್ರಥಮೋಽನುವಾಕಃ

**ಪೂರ್ಣಾ ಪಶ್ಚಾದುತ ಪೂರ್ಣಾ ಪುರಸ್ತಾದುನ್ಮಧ್ಯತಃ**

**ಪೌರ್ಣಮಾಸೀ ಜಿಗಾಯ ।**

---

ಪೂರ್ಣಾ । ಪಶ್ಚಾತ್ । ಉತ । ಪೂರ್ಣಾ । ಪುರಸ್ತಾತ್ । ಉದಿತಿ । ಮಧ್ಯತಃ ।

ಪೌರ್ಣಮಾಸೀತಿ ಪೌರ್ಣ– ಮಾಸೀ । ಜಿಗಾಯ ॥

---

ನಾಲ್ಕನೆಯ ಪ್ರಶ್ನದಲ್ಲಿ ನೈಮಿತ್ತಿಕಗಳೂ, ಕಾಮ್ಯಗಳೂ ಹೇಳಲ್ಪಟ್ಟವು. ಈ ಐದನೆಯ ಪ್ರಶ್ನದಲ್ಲಿ ಸೋಮೇಷ್ಟಿಶೇಷವಿಷಯಗಳು ಹೇಳಲ್ಪಡುತ್ತವೆ.

ಮೊದಲನೆಯ ಅನುವಾಕದಲ್ಲಿ ಅನ್ವಾರಂಭಣೀಯೇಷ್ಟಿಯ ವಿಷಯಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
| --- | --- |
| ಪೂರ್ಣಾ...ಮಾದಯಂತಾಮ್ ॥ | ಅನ್ವಾರಂಭಣೀಯೇಷ್ಟಿಯ ಆರಂಭದಲ್ಲಿ ಮಾಡಬೇಕಾದ ಸಾರಸ್ವತಹೋಮವನ್ನು ಮಾಡಲು. |

---

✦ಪೌರ್ಣಮಾಸೀ=ಹುಣ್ಣಿಮೆಯು/ಪೌರ್ಣಮಾಸ್ಯಭಿಮಾನಿದೇವತೆಯು; ಪಶ್ಚಾತ್ =ಯಜ್ಞಭೂಮಿಯ ಪಶ್ಚಿಮಭಾಗದಲ್ಲಿ ಪೂರ್ಣಾ=ಪೂರ್ಣವಾಗಿ; ಉತ=ಮತ್ತು ಪುರಸ್ತಾತ್=ಪೂರ್ವಭಾಗದಲ್ಲಿ[ಮತ್ತು] ಮಧ್ಯತಃ=ಮಧ್ಯಭಾಗದಲ್ಲಿ ಪೂರ್ಣಾ= ಪೂರ್ಣವಾಗಿ; ಉತ್ ಜಿಗಾಯ=ಉತ್ಕೃಷ್ಟ ಜಯವನ್ನು ಹೊಂದಿದೆ/ಮೇಲಾಗಿದೆ.

ತಸ್ಯಾಂ ದೇವಾ ಅಧಿ ಸಂವಸಂತ ಉತ್ತಮೇ ನಾಕ ಇಹ ಮಾದಯಂತಾಮ್ ॥ ಯತ್ತೇ ದೇವಾ ಅದಧು ಭಾಗಧೇಯಮಮಾವಾಸ್ಯೇ ಸಂವಸಂತೋ ಮಹಿತ್ವಾ ।

---

ತಸ್ಯಾಮ್ । ದೇವಾಃ । ಅಧೀತಿ । ಸಂವಸಂತ ಇತಿ ಸಮ್-ವಸಂತಃ । ಉತ್ತಮ ಇತ್ಯುತ್-ತಮೇ । ನಾಕೇ । ಇಹ । ಮಾದಯನ್ತಾಮ್ ॥ ಯತ್ । ತೇ । ದೇವಾಃ । ಅದಧುಃ । ಭಾಗಧೇಯಮಿತಿ ಭಾಗ-ಧೇಯಮ್ । ಅಮಾವಾಸ್ಯ ಇತ್ಯಮಾ-ವಾಸ್ಯೇ । ಸಂವಸಂತ ಇತಿ ಸಮ್-ವಸಂತಃ । ಮಹಿತ್ವೇತಿ ಮಹಿ-ತ್ವಾ ।

---

| ಮಂತ್ರ | ವಿನಿಯೋಗ |
|---|---|
| ಯತ್ತೇ...ಸುವೀರಮ್ ॥ | ಸಾರಸ್ವತಹೋಮವನ್ನು ಅನುಷ್ಠಿಸಲು. |

---

ತಸ್ಯಾಮ್=ಆ ಪೌರ್ಣಮಾಸಿಯಲ್ಲಿ; ಇಹ=ಈ ಯಜ್ಞದಲ್ಲಿ; ದೇವಾಃ=ದೇವತೆಗಳು; ಅಧಿ ಸಂವಸಂತಃ=ಚೆನ್ನಾಗಿ ವಾಸಿಸುವವರಾಗಿ; ಉತ್ತಮೇ ನಾಕೇ=ಉತ್ಕೃಷ್ಟ ಸುಖರೂಪವಾದ ಸ್ವರ್ಗದಲ್ಲಿ; ಮಾದಯಂತಾಮ್=[ನಮ್ಮನ್ನು]ಸಂತೋಷಪಡಿಸಲಿ/[ದೇವತೆಗಳು] ಸಂತೋಷಪಡಲಿ. +ಅಮಾವಾಸ್ಯೇ=ಅಮಾವಾಸ್ಯೆಯೇ/ಅಮಾವಾಸ್ಯಾಭಿಮಾನಿದೇವತೆಯೇ! ಯತ್=ಯಾವ ಕಾರಣದಿಂದ; ತೇ ಮಹಿತ್ವಾ=ನಿನ್ನ ಮಹಿಮೆಯಿಂದ; ಸಂವಸಂತಃ ದೇವಾಃ=ನಿನ್ನಲ್ಲಿ ವಾಸ ಮಾಡುವ ದೇವತೆಗಳು; ಭಾಗಧೇಯಮ್=ಹವೀರೂಪಭಾಗವನ್ನು; ಅದಧುಃ=ಹೊಂದಿದರೋ [ಆ ಕಾರಣದಿಂದ]

---

ಎಲೈ! ಹುಣ್ಣಿಮೆಯೇ! ನೀನು ಯಜ್ಞಭೂಮಿಯ ಪೂರ್ವ-ಪಶ್ಚಿಮ-ಮಧ್ಯಭಾಗಗಳಲ್ಲಿಯೂ ಪೂರ್ಣಳಾಗಿ ಪೂರ್ಣಚಂದ್ರನಿಂದ ಕೂಡಿದವಳಾಗಿ ಸರ್ವಶ್ರೇಷ್ಠಳಾಗಿ ಪ್ರಕಾಶಿಸುವೆ. ಈ ಪೌರ್ಣಮಾಸಿಯಲ್ಲಿ ಎಲ್ಲಾ ದೇವತೆಗಳು ವಾಸಿಸುತ್ತಾ ಈ ಯಜ್ಞದ

ಸಾ ನೋ ಯಜ್ಞಂ ಪಿಪೃಹಿ ವಿಶ್ವವಾರೇ ರಯಿಂ ನೋ ಧೇಹಿ ಸುಭಗೇ ಸುವೀರಮ್ ॥ ನಿವೇಶನೀ ಸಂಗಮನೀ ವಸೂನಾಂ ವಿಶ್ವಾ ರೂಪಾಣಿ ವಸೂನ್ಯಾವೇಶಯಂತೀ ।

---

ಸಾ । ನಃ । ಯಜ್ಞಮ್ । ಪಿಪೃಹಿ । ವಿಶ್ವವಾರ ಇತಿ ವಿಶ್ವ-ವಾರೇ । ರಯಿಮ್ । ನಃ । ಧೇಹಿ । ಸುಭಗ ಇತಿ ಸು-ಭಗೇ । ಸುವೀರಮಿತಿ ಸು-ವೀರಮ್ ॥ ನಿವೇಶನೀತಿ ನಿ-ವೇಶನೀ । ಸಂಗಮನೀತಿ ಸಂ-ಗಮನೀ । ವಸೂನಾಮ್ । ವಿಶ್ವಾ । ರೂಪಾಣಿ । ವಸೂನಿ । ಆವೇಶಯಂತೀತ್ಯಾ-ವೇಶಯಂತೀ ।

---

| ಮಂತ್ರ | ವಿನಿಯೋಗ |
|---|---|
| ನಿವೇಶನೀ...ಸಂವಿದಾನಾ ॥ | ಸಾರಸ್ವತಹೋಮವನ್ನು ಅನುಷ್ಠಿಸಲು ವೈಕಲ್ಪಿಕ ಮಂತ್ರಗಳು. |

---

ವಿಶ್ವವಾರೇ=ಎಲ್ಲ ಅನಿಷ್ಟಗಳನ್ನೂ ನಿವಾರಿಸುವ ಅಮಾವಾಸ್ಯೆಯೇ! ಸಾ=ಅಂತಹ ನೀನು; ನಃ ಯಜ್ಞಮ್ ಪಿಪೃಹಿ=ನಮ್ಮ ಯಜ್ಞವನ್ನು ಪೂರ್ಣಗೊಳಿಸು. ಸುಭಗೇ =ಒಳ್ಳೆಯ ಭಾಗ್ಯವುಳ್ಳವಳೇ! ನಃ=ನಮಗೆ; ಸುವೀರಮ್=ಒಳ್ಳೆಯ ಪುತ್ರರುಳ್ಳ; ರಯಿಮ್=ಧನವನ್ನು; ಧೇಹಿ=ಕೊಡು/ನಮ್ಮಲ್ಲಿ ನೆಲೆಗೊಳಿಸು. +ನಿವೇಶನೀ= ನಮ್ಮನ್ನು ಒಳ್ಳೆಯ ಮನೆಯಲ್ಲಿ ವಾಸ ಮಾಡುವಂತೆ ಮಾಡುವ; ವಸೂನಾಮ್ ಸಂಗಮನೀ=ಧನಗಳನ್ನು ನಮಗೆ ಹೊಂದಿಸಿಕೊಡುವ/ಪ್ರಾಪ್ತವಾಗುವಂತೆ ಮಾಡುವ; ವಿಶ್ವಾ ರೂಪಾಣಿ ವಸೂನಿ=ಮಣಿ ಮುಕ್ತಾರತ್ನಾದಿ ಬಹುವಿಧವಾದ ಧನಗಳನ್ನು; ಆವೇಶಯಂತೀ=ನಮ್ಮ ಮನೆಗಳಲ್ಲಿ ಇರುವಂತೆ ಮಾಡುವ;

ಸಹಸ್ರಪೋಷಗ್ಂ ಸುಭಗಾ ರರಾಣಾ ಸಾ ನ ಆಗನ್ವರ್ಚಸಾ [(೧)ಸಂವಿದಾನಾ] ಸಂವಿದಾನಾ ॥ ಅಗ್ನೀಷೋಮೌ ಪ್ರಥಮೌ ವೀರ್ಯೇಣ ವಸೂನ್ರುದ್ರಾನಾದಿತ್ಯಾನಿಹ ಜಿನ್ವತಮ್ ।

---

ಸಹಸ್ರಪೋಷಮಿತಿ ಸಹಸ್ರ–ಪೋಷಮ್ । ಸುಭಗೇತಿ ಸು–ಭಗಾ । ರರಾಣಾ । ಸಾ । ನಃ । ಏತಿ । ಗನ್ನ್ । ವರ್ಚಸಾ ।(೧)। ಸಂವಿದಾನೇತಿ ಸಂ–ವಿದಾನಾ ॥ ಅಗ್ನೀಷೋಮಾವಿತ್ಯಗ್ನೀ–ಸೋಮೌ । ಪ್ರಥಮೌ । ವೀರ್ಯೇಣ । ವಸೂನ್ । ರುದ್ರಾನ್ । ಆದಿತ್ಯಾನ್ । ಇಹ । ಜಿನ್ವತಮ್ ॥

---

| ಮಂತ್ರ | ವಿನಿಯೋಗ |
| --- | --- |
| ಅಗ್ನೀಷೋಮೌ...ನಿಯಚ್ಛತಮ್ ॥ | ಸಾರಸ್ವತಹೋಮವನ್ನು ಅನುಷ್ಠಿಸಲು ವೈಕಲ್ಪಿಕಮಂತ್ರಗಳು. |

---

**ಸಹಸ್ರಪೋಷಮ್ ರರಾಣಾ**=ಸಹಸ್ರಲಕ್ಷಸಂಖ್ಯೆಯಲ್ಲಿ ವೃದ್ಧಿ ಹೊಂದುವಂತೆ ಮಾಡುವ/ಸಾವಿರಾರು ಸಂಖ್ಯೆಯಲ್ಲಿ ಕೊಡುವ; **ವರ್ಚಸಾ ಸಂವಿದಾನಾ**= ನಮ್ಮನ್ನು ಬಲದಿಂದ ಯುಕ್ತರನ್ನಾಗಿ ಮಾಡುವ; **ಸುಭಗಾ**=ಸೌಭಾಗ್ಯದಿಂದ ಕೂಡಿದ; **ಸಾ**=ಅಂತಹ ಪ್ರಸಿದ್ಧಳಾದ ಅಮಾವಾಸ್ಯೆಯು; **ನಃ ಆಗನ್**=ನಮ್ಮ ಬಳಿಗೆ ಬರಲಿ; **+ಅಗ್ನೀಷೋಮೌ**=ಹೇ! ಅಗ್ನೀಷೋಮ ದೇವತೆಗಳೇ! **ಪ್ರಥಮೌ**=[ನೀವು ದೇವತೆಗಳಲ್ಲಿ] ಮುಖ್ಯರು. **ವೀರ್ಯೇಣ**=ನಿಮ್ಮ ಬಲದಿಂದ; **ವಸೂನ್**=ವಸುದೇವತೆಗಳನ್ನೂ; **ರುದ್ರಾನ್**=ರುದ್ರದೇವತೆಗಳನ್ನೂ; **ಆದಿತ್ಯಾನ್**=ಆದಿತ್ಯದೇವತೆಗಳನ್ನೂ; **ಇಹ**=ಈ ಯಜ್ಞದಲ್ಲಿ; **ಜಿನ್ವತಮ್**=ಸಂತೋಷಪಡಿಸಿರಿ,

ಮಾಧ್ಯಗ್ಂ ಹಿ ಪೌರ್ಣಮಾಸಂ ಜುಷೇಥಾಂ ಬ್ರಹ್ಮಣಾ ವೃದ್ಧೌ ಸುಕೃತೇನ ಸಾತಾವಥಾಸ್ಮಭ್ಯಗ್ಂ ಸಹವೀರಾಗ್ಂ ರಯಿಂ ನಿ ಯಚ್ಛತಮ್ ॥

---

ಮಾಧ್ಯಮ್ । ಹಿ । ಪೌರ್ಣಮಾಸಮಿತಿ ಪೌರ್ಣ-ಮಾಸಮ್ । ಜುಷೇಥಾಮ್ । ಬ್ರಹ್ಮಣಾ । ವೃದ್ಧೌ । ಸುಕೃತೇನೇತಿ ಸು-ಕೃತೇನ । ಸಾತೌ । ಅಥ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಸಹವೀರಾಮಿತಿ ಸಹ-ವೀರಾಮ್ । ರಯಿಮ್ । ನೀತಿ । ಯಚ್ಛತಮ್ ।

---

**ಮಾಧ್ಯಮ್ ಹಿ ಪೌರ್ಣಮಾಸಮ್**=ಎಲ್ಲ ಕಡೆಗಳಲ್ಲಿಯೂ ಪೌರ್ಣಮಾಸೀದೇವತೆಯಿಂದ ರಕ್ಷಿಸಲ್ಪಟ್ಟು ಮಧ್ಯದಲ್ಲಿ ಕೊಡುತ್ತಿರುವ ಈ ಹವಿಸ್ಸನ್ನು; **ಜುಷೇಥಾಮ್**=ಸೇವಿಸಿರಿ; **ಬ್ರಹ್ಮಣಾ ವೃದ್ಧೌ** =ಮಂತ್ರಗಳಿಂದ ಸ್ತುತಿಸಲ್ಪಟ್ಟು [ನೀವು] ವೃದ್ಧಿ ಹೊಂದಿರುತ್ತೀರಿ; **ಸುಕೃತೇನ ಸಾತೌ**=ಈ ಒಳ್ಳೆಯ ಕರ್ಮದಿಂದ ಪ್ರಾಪ್ತವಾಗುವ ಫಲವನ್ನು ಕೊಡುತ್ತೀರಿ; **ಸಹವೀರಾಮ್**=ಪುತ್ರಸಹಿತವಾದ; **ರಯಿಮ್**=ಧನ ಸಂಪತ್ತಿಯನ್ನು; **ಅಥ ಅಸ್ಮಭ್ಯಮ್ ನಿಯಚ್ಛತಮ್**=ಹವಿಸ್ಸುಗಳನ್ನು ಸ್ವೀಕರಿಸಿದ ಬಳಿಕ ನಮಗೆ ಕೊಡಿರಿ.

---

ಹವಿರ್ಭಾಗವನ್ನು ಪಡೆದು ತೃಪ್ತರಾಗಲಿ. ಸ್ವರ್ಗದಲ್ಲಿ ನಮ್ಮನ್ನು ಸಂತೋಷಪಡಿಸಲಿ.

ಅಮಾವಾಸ್ಯೆಯೇ! ನಿನ್ನ ಮಹಿಮೆಯಿಂದ ದೇವತೆಗಳು ನನ್ನಲ್ಲಿ ವಾಸಿಸುತ್ತಾರೆ. ನಿನಗೆ ಈ ಹವಿಸ್ಸನ್ನು ನಿನ್ನ ಭಾಗವನ್ನಾಗಿ ಕೊಟ್ಟಿದ್ದಾರೆ. ನೀನು ಎಲ್ಲ ಅನಿಷ್ಟಗಳನ್ನೂ ನಿವಾರಿಸತಕ್ಕವಳು. ನೀನು ಭಾಗ್ಯಶಾಲಿನಿ. ಇಂತಹ ನೀನು ನಮಗೆ ಧನಸಮೃದ್ಧಿಯನ್ನೂ, ಪುತ್ರಸಂಪತ್ತನ್ನೂ ಕರುಣಿಸು.

ಅಮಾವಾಸ್ಯಾದೇವತೆಯು ನಮ್ಮನ್ನು ಒಳ್ಳೆಯ ಮನೆಯಲ್ಲಿ ಇಡತಕ್ಕವಳು. ಧನವನ್ನು ಕೊಡತಕ್ಕವಳು. ಮುತ್ತು ರತ್ನವೇ ಮೊದಲಾದ ನಾನಾರೂಪದ ಐಶ್ವರ್ಯವನ್ನೂ ಕೊಡತಕ್ಕವಳು. ಸಂಪತ್ತನ್ನೂ ಸಾವಿರಾರು ಸಂಖ್ಯೆಯಲ್ಲಿ ವೃದ್ಧಿಗೊಳಿಸತಕ್ಕವಳು.

ಆದಿತ್ಯಾಶ್ಚಾಂಗಿರಸಶ್ಚಾಗ್ನೀನಾಽದಧತ ತೇ

ದರ್ಶಪೂರ್ಣಮಾಸೌ ಪ್ರೈಪ್ಸನ್ತೇಷಾಮಂಗಿರಸಾಂ

ನಿರುಪ್ತಗ್ಂ ಹವಿರಾಸೀ-

---

ಆದಿತ್ಯಾಃ । ಚ । ಅಂಗಿರಸಃ । ಚ । ಅಗ್ನೀನ್ । ಏತಿ । ಅದಧತ । ತೇ ।

ದರ್ಶಪೂರ್ಣಮಾಸಾವಿತಿ ದರ್ಶ–ಪೂರ್ಣಮಾಸೌ । ಪ್ರೇತಿ । ಐಪ್ಸನ್ನ್ । ತೇಷಾಮ್ ।

ಅಂಗಿರಸಾಮ್ । ನಿರುಪ್ತಮಿತಿ ನಿಃ–ಉಪ್ತಮ್ । ಹವಿಃ । ಆಸೀತ್ ।

---

### ಸಾರಸ್ವತಹೋಮವಿಧಿಗೆ ಮೊದಲು ಅದರ ಉಪಾಖ್ಯಾನ

| ಬ್ರಾಹ್ಮಣಭಾಗ | ವಿವರಣೆ |
|---|---|
| ಆದಿತ್ಯಾಃ ಅಂಗಿರಸಃ ಚ | ಆದಿತ್ಯದೇವತೆಗಳೂ, ಅಂಗಿರಸಋಷಿಗಳೂ |
| ಅಗ್ನೀನ್ ಆದಧತ | ಅಗ್ನಿಯ ಆಧಾನವನ್ನು ಮಾಡಿದರು. |
| ತೇ ದರ್ಶಪೂರ್ಣಮಾಸೌ | ಅವರು ದರ್ಶಪೂರ್ಣಮಾಸಯಾಗವನ್ನು |
| ಪ್ರೈಪ್ಸನ್ | ಮಾಡಲು ಬಯಸಿದರು. |
| ತೇಷಾಮ್ ಅಂಗಿರಸಾಮ್ | [ಆಗ ಸಾರಸ್ವತಹೋಮಾನುಷ್ಠಾನವಿಲ್ಲದೆಯೇ] |
| ನಿರುಪ್ತಮ್ ಹವಿಃ ಆಸೀತ್ | ಅವರಲ್ಲಿ ಅಂಗಿರೋಮುನಿಗಳ ಅನ್ವಾರಂಭಣೀಯೇಷ್ಟಿಯ ಹವಿರ್ನಿರ್ವಾಪವು ಮಾಡಲ್ಪಟ್ಟಿತು. |

---

ಇಂತಹ ಪ್ರಭಾವಶಾಲಿಯಾದ ಅಮಾವಾಸ್ಯಾದೇವತೆಯು ನಮ್ಮ ಬಳಿಗೆ ಬರಲಿ. ನಮ್ಮನ್ನು ಅನುಗ್ರಹಿಸಲಿ.

ಅಗ್ನೀಷೋಮರು ದೇವತೆಗಳಲ್ಲಿ ಮುಖ್ಯರು. ನೀವು ನಿಮ್ಮ ಶಕ್ತಿಯಿಂದ ವಸು–ರುದ್ರ–ಆದಿತ್ಯರನ್ನೂ/ಎಲ್ಲಾ ದೇವತೆಗಳನ್ನೂ ಸಂತೋಷಪಡಿಸಿರಿ. ಎಲ್ಲ ದಿಕ್ಕುಗಳಲ್ಲಿಯೂ ಪೌರ್ಣಮಾಸೀದೇವತೆಯಿಂದ ರಕ್ಷಿಸಲ್ಪಟ್ಟು ಅರ್ಪಿಸುತ್ತಿರುವ ಈ ಹವಿಸ್ಸನ್ನು ಸೇವಿಸಿರಿ.

ದಥಾಽಽದಿತ್ಯಾ ಏತೌ ಹೋಮಾವಪಶ್ಯನ್ತಾವ

ಜುಹವುಸ್ತತೋ ವೈ ತೇ ದರ್ಶಪೂರ್ಣಮಾಸೌ [೨]

ಪೂರ್ವ ಆಽಲಭಂತ ದರ್ಶಪೂರ್ಣಮಾಸಾವಾಲಭಮಾನ

---

ಅಥ । ಆದಿತ್ಯಾಃ । ಏತೌ । ಹೋಮೌ । ಅಪಶ್ಯನ್ । ತೌ । ಅಜುಹವುಃ । ತತಃ । ವೈ । ತೇ । ದರ್ಶಪೂರ್ಣಮಾಸಾವಿತಿ ದರ್ಶ–ಪೂರ್ಣಮಾಸೌ ।(೨)। ಪೂರ್ವೇ । ಏತಿ । ಅಲಭಂತ । ದರ್ಶಪೂರ್ಣಮಾಸಾವಿತಿ ದರ್ಶ–ಪೂರ್ಣಮಾಸೌ । ಆಲಭಮಾನ ಇತ್ಯಾ–ಲಭಮಾನಃ ।

---

| | |
|---|---|
| **ಅಥ ಆದಿತ್ಯಾಃ ಏತೌ ಹೋಮೌ ಅಪಶ್ಯನ್** | ಬಳಿಕ ಆದಿತ್ಯರು [ಚೆನ್ನಾಗಿ ಆಲೋಚಿಸಿ] ಈ ಸಾರಸ್ವತಹೋಮವನ್ನು ಮಾಡಬೇಕೆಂದು ತಿಳಿದರು. |
| **ತೌ ಅಜುಹವುಃ** | [ಆದಿತ್ಯರು] ಈ ಸಾರಸ್ವತಹೋಮಗಳನ್ನು ಅನುಷ್ಠಿಸಿದರು. |
| **ತತಃ ವೈ ತೇ ಪೂರ್ವೇ** | ಬಳಿಕ ಆದಿತ್ಯರು [ಅಂಗಿರಸರಿಗಿಂತಲೂ] ಮೊದಲೇ |
| **ದರ್ಶಪೂರ್ಣಮಾಸೌ ಆಲಭಂತ** | ದರ್ಶ–ಪೂರ್ಣಮಾಸಯಾಗಗಳನ್ನು ಮಾಡಿದವರಾದರು/ಆರಂಭಿಸಿದವರಾದರು. |

**ಸಾರಸ್ವತಹೋಮವಿಧಿ; ಪ್ರಶಂಸೆ**

| | |
|---|---|
| **ದರ್ಶಪೂರ್ಣಮಾಸೌ ಆಲಭಮಾನಃ** | ದರ್ಶ–ಪೂರ್ಣಮಾಸಯಾಗಗಳನ್ನು ಆರಂಭಿಸುವವನು |

---

ನೀವು ಮಂತ್ರಗಳಿಂದ ಪ್ರಶಂಸಿಸಲ್ಪಡತಕ್ಕವರು.

ಏತೌ ಹೋಮೌ ಪುರಸ್ತಾಜ್ಜುಹುಯಾತ್ಸಾಕ್ಷಾದೇವ

ದರ್ಶಪೂರ್ಣಮಾಸಾವಾಲಭತೇ ಬ್ರಹ್ಮವಾದಿನೋ

---

ಏತೌ । ಹೋಮೌ । ಪುರಸ್ತಾತ್ । ಜುಹುಯಾತ್ । ಸಾಕ್ಷಾದಿತಿ ಸ-ಅಕ್ಷಾತ್ । ಏವ ।

ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಏತಿ । ಲಭತೇ । ಬ್ರಹ್ಮವಾದಿನ

ಇತಿ ಬ್ರಹ್ಮ-ವಾದಿನಃ ।

---

| | |
|---|---|
| **ಏತೌ ಹೋಮೌ ಪುರಸ್ತಾತ್ ಜುಹುಯಾತ್** | ಈ ಸಾರಸ್ವತಹೋಮಗಳನ್ನು ಅನ್ವಾರಂಭಣೀ ಯೇಷ್ಟಿಗಿಂತಲೂ ಮೊದಲೇ ಅನುಷ್ಠಿಸಬೇಕು. [ವಿಧಿ] |
| **ಸಾಕ್ಷಾತ್ ಏವ ದರ್ಶಪೂರ್ಣಮಾಸೌ ಆಲಭತೇ** | ಹೀಗೆ ಮಾಡಿದವನು ವಿಲಂಬವಿಲ್ಲದೆಯೇ ದರ್ಶ-ಪೂರ್ಣಮಾಸಯಾಗಗಳನ್ನು ಆರಂಭಿಸಿ ದವನಾಗುತ್ತಾನೆ. |

**ದೇವತಾವಿಶೇಷವಿಧಿಗಾಗಿ ಪ್ರಸ್ತಾವನೆ**

| | |
|---|---|
| **ಬ್ರಹ್ಮವಾದಿನಃ ಯಃ ಏನಯೋಃ** | ವೇದಜ್ಞರು ಯಾವನು ಈ ದರ್ಶ-ಪೂರ್ಣ ಮಾಸಗಳ |

---

ನಮ್ಮ ಒಳ್ಳೆಯ ಕಾರ್ಯವಾದ ಯಾಗದಿಂದ ತುಷ್ಟರಾಗಿ ಯಾಗಫಲವನ್ನು ಕೊಡತಕ್ಕವರು. ನೀವು ನಮ್ಮನ್ನು ಅನುಗ್ರಹಿಸಿರಿ. ನಮಗೆ ಸುಪುತ್ರಸಹಿತವಾದ ಸಂಪತ್ತನ್ನು ಕೊಡಿರಿ.

ದರ್ಶ-ಪೂರ್ಣಮಾಸಯಾಗಗಳನ್ನು ಅನುಷ್ಠಿಸಲು ಬಯಸಿದ ಆದಿತ್ಯದೇವತೆಗಳು ಮತ್ತು ಅಂಗಿರಸ ಋಷಿಗಳ ಪೈಕಿ ಸಾರಸ್ವತಹೋಮವಿಲ್ಲದೆಯೇ ಅನ್ವಾರಂಭಣೀ ಯೇಷ್ಟಿಯ ಹವಿರ್ನಿರ್ವಾಪವನ್ನು ಅಂಗಿರೋಮುನಿಗಳು ಮಾಡಿದ್ದರು. ಆದಿತ್ಯರು

# ವದಂತಿ ಸ ತ್ವೈ ದರ್ಶಪೂರ್ಣಮಾಸಾವಾಲಭೇತ ಯ ಏನಯೋರನುಲೋಮಂ ಚ ಪ್ರತಿಲೋಮಂ ಚ ವಿದ್ಯಾದಿತ್ಯಮಾವಾಸ್ಯಾಯಾ ಊರ್ಧ್ವಂ

---

ವದಂತಿ । ಸಃ । ತು । ವೈ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಏತಿ । ಲಭೇತ । ಯಃ । ಏನಯೋಃ । ಅನುಲೋಮಮಿತ್ಯನು -ಲೋಮಮ್ । ಚ । ಪ್ರತಿಲೋಮಮಿತಿ ಪ್ರತಿ-ಲೋಮಮ್ । ಚ । ವಿದ್ಯಾತ್ । ಇತಿ । ಅಮಾವಾಸ್ಯಾಯಾ ಇತ್ಯಮಾ-ವಾಸ್ಯಾಯಾಃ । ಊರ್ಧ್ವಮ್ ।

---

| | |
|---|---|
| **ಅನುಲೋಮಮ್ ಚ** | ಅನುಲೋಮ್ಯವನ್ನೂ ಪ್ರಾತಿಲೋಮ್ಯವನ್ನೂ |
| **ಪ್ರತಿಲೋಮಮ್ ಚ ವಿದ್ಯಾತ್** | ತಿಳಿದಿರುತ್ತಾನೆಯೋ |
| **ಸಃ ತು ವೈ** | ಅವನೇ ದರ್ಶಪೂರ್ಣಮಾಸಗಳನ್ನು |
| **ದರ್ಶಪೂರ್ಣಮಾಸೌ** | ಆರಂಭಿಸಬೇಕು. [ಅವನೇ ಮುಖ್ಯಾಧಿಕಾರಿ] |
| **ಆಲಭೇತ ಇತಿ ವದಂತಿ** | ಎಂಬುದಾಗಿ ವಿಚಾರ ಮಾಡುತ್ತಾರೆ. |
| **ಅಮಾವಾಸ್ಯಾಯಾಃ** | ಅಮಾವಾಸ್ಯೆಯ ಅನಂತರದ [ಕಾಲವು] |
| **ಊರ್ಧ್ವಮ್** | [ಅಮಾವಾಸ್ಯೆಯ ಅನಂತರ ಯಾಗ ಮಾಡಿದರೆ/ಅಮಾವಾಸ್ಯಾಯಾಗವನ್ನು ಮೊದಲು ಮಾಡಿದರೆ] |

---

ವಿಚಾರ ಮಾಡಿ ಮೊದಲು ಸಾರಸ್ವತಹೋಮಗಳನ್ನು ಮಾಡಿ ಅಂಗಿರಸರಿಗಿಂತಲೂ ಮೊದಲೇ ದರ್ಶ-ಪೂರ್ಣಮಾಸಗಳನ್ನು ಆರಂಭಿಸಿ, ಅನುಷ್ಠಿಸಿದರು.

ವಿಲಂಬವಿಲ್ಲದೆಯೇ ದರ್ಶ-ಪೂರ್ಣಮಾಸಯಾಗಗಳನ್ನು ಆರಂಭಿಸಿದವನಂತಾಗ ಬೇಕಾದರೆ ದರ್ಶ-ಪೂರ್ಣಮಾಸಗಳನ್ನು ಆರಂಭಿಸುವವನು ಸಾರಸ್ವತಹೋಮಗಳನ್ನು

ತದನುಲೋಮಂ ಪೌರ್ಣಮಾಸ್ಯೈ ಪ್ರತೀಚೀನಂ

ತತ್ಪ್ರತಿಲೋಮಂ ಯತ್ಪೌರ್ಣಮಾಸೀಂ

ಪೂರ್ವಾಮಾಲಭೇತ ಪ್ರತಿಲೋಮಮೇನಾವಾಲಭೇತಾ-

---

ತತ್ । ಅನುಲೋಮಮಿತ್ಯನು–ಲೋಮಮ್ । ಪೌರ್ಣಮಾಸ್ಯಾ ಇತಿ ಪೌರ್ಣ–ಮಾಸ್ಯೈ । ಪ್ರತೀಚೀನಮ್ । ತತ್ । ಪ್ರತಿಲೋಮಮಿತಿ ಪ್ರತಿ–ಲೋಮಮ್ । ಯತ್ । ಪೌರ್ಣಮಾಸೀಮಿತಿ ಪೌರ್ಣ–ಮಾಸೀಮ್ । ಪೂರ್ವಾಮ್ । ಆಲಭೇತೇತ್ಯಾ–ಲಭೇತ । ಪ್ರತಿಲೋಮಮಿತಿ ಪ್ರತಿ–ಲೋಮಮ್ । ಏನೌ । ಏತಿ । ಲಭೇತ ।

---

| | |
|---|---|
| ತತ್ ಅನುಲೋಮಮ್ | ಅದು ಅನುಲೋಮವಾಗುತ್ತದೆ. |
| ಪೌರ್ಣಮಾಸ್ಯೈ ಪ್ರತೀಚೀನಮ್ ತತ್ ಪ್ರತಿಲೋಮಮ್ | ಪೂರ್ಣಿಮೆಯ ಅನಂತರದ [ಕಾಲವು] [ಪೂರ್ಣಮಾಸಯಾಗವನ್ನು ಮೊದಲು ಮಾಡುವುದು] ಅದು ಪ್ರತಿಲೋಮವಾಗುತ್ತದೆ. |
| ಯತ್ ಪೌರ್ಣಮಾಸೀಮ್ ಪೂರ್ವಾಮ್ ಆಲಭೇತ ಏನೌ ಪ್ರತಿಲೋಮಮ್ ಆಲಭೇತ | ಪೂರ್ಣಮಾಸಯಾಗವನ್ನು ಮೊದಲು ಆರಂಭಿಸುವುದೆಂಬುದು ಯಾವುದೋ ಅದು ಪ್ರತಿಲೋಮವಾಗಿ ದರ್ಶ–ಪೂರ್ಣಮಾಸಗಳನ್ನು ಆರಂಭಿಸಿದಂತಾಗುತ್ತದೆ. |

---

ಅನ್ವಾರಂಭಣೀಯೇಷ್ಟಿಗಿಂತಲೂ ಮೊದಲೇ ಅನುಷ್ಠಿಸಬೇಕು.

ಅನುಲೋಮ–ಪ್ರತಿಲೋಮಗಳನ್ನು ತಿಳಿದು ದರ್ಶ–ಪೂರ್ಣಮಾಸಗಳನ್ನು ಆರಂಭಿಸುವವನು ಈ ಯಾಗಗಳ ಮುಖ್ಯಾಧಿಕಾರಿಯೆಂದು ಬ್ರಹ್ಮವಾದಿಗಳ ಮತ. ಅಮಾವಾಸ್ಯೆಯಿಂದ ಆರಂಭವನ್ನು ಮಾಡಿದರೆ ಮುಂದೆ ಚಂದ್ರನು ವೃದ್ಧಿ ಹೊಂದುವುದರಿಂದ ಅದು ಅನುಲೋಮವಾಯಿತು. ಅಮಾವಾಸ್ಯೆಯಿಂದ ಮುಂದಿನ ಕಾಲಸ್ವರೂಪವು

ಮುಮಪಕ್ಷೀಯಮಾಣಮನ್ವಪ [(೩)ಕ್ಷೀಯೇತ ಸಾರಸ್ವತೌ]

ಕ್ಷೀಯೇತ ಸಾರಸ್ವತೌ ಹೋಮೌ ಪುರಸ್ತಾಜ್ಜುಹುಯಾದಮಾ

ವಾಸ್ಯಾ ವೈ ಸರಸ್ವತ್ಯನುಲೋಮಮೇವೈನಾವಾ ಲಭತೇ–

---

ಅಮುಮ್ । ಅಪಕ್ಷೀಯಮಾಣಮಿತ್ಯಪ–ಕ್ಷೀಯಮಾಣಮ್ । ಅನು । ಅಪೇತಿ ।(೩)।

ಕ್ಷೀಯೇತ । ಸಾರಸ್ವತೌ । ಹೋಮೌ । ಪುರಸ್ತಾತ್ । ಜುಹುಯಾತ್ ।

ಅಮಾವಾಸ್ಯೇತ್ಯಮಾ–ವಾಸ್ಯಾ । ವೈ । ಸರಸ್ವತೀ । ಅನುಲೋಮಮಿತ್ಯನು–

ಲೋಮಮ್ । ಏವ । ಏನೌ । ಏತಿ । ಲಭತೇ ।

---

| | |
|---|---|
| **ಅಪಕ್ಷೀಯಮಾಣಮ್ ಅಮುಮ್ ಅನು ಅಪಕ್ಷೀಯೇತ** | ಈ ಕ್ಷೀಣಿಸುತ್ತಿರುವ ಚಂದ್ರನನ್ನು ಅನುಸರಿಸಿ ಯಜಮಾನನೂ ಕ್ಷೀಣಿಸುವನು. |

**ಸಾರಸ್ವತಹೋಮವಿಧಿ; ಬ್ರಾಹ್ಮಣ**

| | |
|---|---|
| **ಸಾರಸ್ವತೌ ಹೋಮೌ ಪುರಸ್ತಾತ್ ಜುಹುಯಾತ್** | ಅನ್ವಾರಂಭಣೀಯೇಷ್ಟಿಗೆ ಮೊದಲು ಸಾರಸ್ವತ ಹೋಮವನ್ನು ಅನುಷ್ಠಿಸಬೇಕು. |
| **ಅಮಾವಾಸ್ಯಾ ವೈ ಸರಸ್ವತೀ** | ಸರಸ್ವತೀದೇವಿಯು ಅಮಾವಾಸ್ಯೆಯೇ ಆಗಿರುತ್ತಾಳೆ. |
| **ಏನೌ ಅನುಲೋಮಮ್ ಏವ ಆಲಭತೇ** | [ಈ ಸಾರಸ್ವತಹೋಮದಿಂದ] ದರ್ಶ–ಪೂರ್ಣಮಾಸಗಳನ್ನು ಅನುಲೋಮವಾಗಿಯೇ ಆರಂಭಿಸಿದವನಾಗುತ್ತಾನೆ. |

---

ಅನುಲೋಮವಾಗಿದೆ. ಪೂರ್ಣಿಮೆಯಿಂದ ಆರಂಭವನ್ನು ಮಾಡಿದರೆ ಮುಂದೆ ಚಂದ್ರನು

-ಽಮುಮಾಪ್ಯಾಯಮಾನಮನ್ವಾಪ್ಯಾಯತ ಆಗ್ನಾವೈಷ್ಣವ ಮೇಕಾದಶಕಪಾಲಂ ಪುರಸ್ತಾನ್ನಿರ್ವಪೇತ್ಸರಸ್ವತ್ಯೈ ಚರುಗ್ಂ ಸರಸ್ವತೇ ದ್ವಾದಶಕಪಾಲಂ

---

ಅಮುಮ್ । ಆಪ್ಯಾಯಮಾನಮಿತ್ಯಾ-ಪ್ಯಾಯಮಾನಮ್ । ಅನು । ಆ । ಪ್ಯಾಯತೇ । ಆಗ್ನಾವೈಷ್ಣವಮಿತ್ಯಾಗ್ನಾ-ವೈಷ್ಣವಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ಪುರಸ್ತಾತ್ । ನಿರಿತಿ । ವಪೇತ್ । ಸರಸ್ವತ್ಯೈ । ಚರುಮ್ । ಸರಸ್ವತೇ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ ।

---

| | |
|---|---|
| **ಆಪ್ಯಾಯಮಾನಮ್ ಅಮುಮ್ ಅನು ಆಪ್ಯಾಯತೇ** | ವೃದ್ಧಿ ಹೊಂದುತ್ತಿರುವ ಈ ಚಂದ್ರನನ್ನು ಅನುಸರಿಸಿ ಯಜಮಾನನೂ ವೃದ್ಧಿ ಹೊಂದುತ್ತಾನೆ. |

## ಅನ್ವಾರಂಭಣೀಯೇಷ್ಟಿಯ ವಿಧಿ

| | |
|---|---|
| **ಪುರಸ್ತಾತ್** | [ಸಾರಸ್ವತಹೋಮರೂಪವಾದ ಅಂಗಗಳನ್ನು ಮಾಡಿದ ನಂತರ ಪೂರ್ಣಮಾಸಕ್ಕೆ] ಮೊದಲು |
| **ಆಗ್ನಾವೈಷ್ಣವಮ್ ಏಕಾದಶಕಪಾಲಮ್ ನಿರ್ವಪೇತ್** | ಅಗ್ನಾವಿಷ್ಣುದೇವತಾಕವಾದ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| **ಸರಸ್ವತ್ಯೈ ಚರುಮ್** [ನಿರ್ವಪೇತ್] | ಸರಸ್ವತೀದೇವಿಗಾಗಿ ಚರುಯಾಗವನ್ನು ಮಾಡಬೇಕು. |
| **ಸರಸ್ವತೇ ದ್ವಾದಶಕಪಾಲಮ್** [ನಿರ್ವಪೇತ್] | ಸರಸ್ವದ್ದೇವನಿಗಾಗಿ ದ್ವಾದಶಕಪಾಲಪುರೋಡಾಶ ಯಾಗವನ್ನು ಮಾಡಬೇಕು. |

---

ಕ್ಷೀಣಿಸುವುದರಿಂದ ಅದು ಪ್ರತಿಲೋಮವಾಯಿತು. ಹುಣ್ಣಿಮೆಯಿಂದ ಮುಂದಿನ

ಯದಾಗ್ನೇಯೋ ಭವತ್ಯಗ್ನಿರ್ವೈ ಯಜ್ಞಮುಖಂ
ಯಜ್ಞಮುಖಮೇವರ್ಧಿಂ ಪುರಸ್ತಾದ್ಧತ್ತೇ ಯದ್ವೈಷ್ಣವೋ
ಭವತಿ

---

ಯತ್ । ಆಗ್ನೇಯಃ । ಭವತಿ । ಅಗ್ನಿಃ । ವೈ । ಯಜ್ಞಮುಖಮಿತಿ ಯಜ್ಞ-ಮುಖಮ್ । ಯಜ್ಞಮುಖಮಿತಿ ಯಜ್ಞ-ಮುಖಮ್ । ಏವ । ಋದ್ಧಿಮ್ । ಪುರಸ್ತಾತ್ । ಧತ್ತೇ । ಯತ್ । ವೈಷ್ಣವಃ । ಭವತಿ ।

---

ಮೊದಲನೆಯ ಹವಿಸ್ಸಿನ ಪ್ರಶಂಸೆ

| | |
|---|---|
| ಯತ್ ಆಗ್ನೇಯಃ ಭವತಿ | ಆಗ್ನಾವೈಷ್ಣವಯಾಗದಲ್ಲಿ ಅಗ್ನಿಯೂ ದೇವತೆಯಾಗಿರುವುದೆಂಬುದರ [ಫಲವಿದು] |
| ಅಗ್ನಿಃ ವೈ ಯಜ್ಞಮುಖಮ್ | [ಸರ್ವದೇವತಾಸ್ವರೂಪನಾಗಿರುವ ಯಜ್ಞ ನಿರ್ವಾಹಕನಾಗಿರುವ] ಅಗ್ನಿಯು ಯಜ್ಞದ ಮುಖನಾಗಿದ್ದಾನೆ. |
| ಯಜ್ಞಮುಖಮ್ ಏವ ಋದ್ಧಿಮ್ ಪುರಸ್ತಾತ್ ಧತ್ತೇ | [ಆಗ್ನೇಯಹವಿಸ್ಸಿನಿಂದ] [ಯಜ್ಞವನ್ನು ಆರಂಭಿಸಿ] ಮೊದಲೇ ಸಮೃದ್ಧಿಯನ್ನು ಹೊಂದುತ್ತಾನೆ. |
| ಯತ್ ವೈಷ್ಣವಃ ಭವತಿ | ವಿಷ್ಣುದೇವತೆಯಾಗಿರುವ ಇನ್ನೊಂದು ಯಾಗದ [ಫಲವಿದು] |

---

ಕಾಲಸ್ವರೂಪವು ಪ್ರತಿಲೋಮವಾಗಿದೆ. ಆದುದರಿಂದ ಹುಣ್ಣಿಮೆಯಿಂದ ಆರಂಭಿಸಿದರೆ ಚಂದ್ರನು ಕ್ಷೀಣಿಸಿದಂತೆ ಯಜಮಾನನೂ ಕ್ಷೀಣಿಸುವನು. ಪ್ರಾತಿಲೋಮ್ಯದೋಷ ಪರಿಹಾರಕ್ಕಾಗಿ ಅನ್ವಾರಂಭಣೀಯೇಷ್ಟಿಗೆ ಮೊದಲು ಸಾರಸ್ವತಹೋಮಗಳನ್ನು ಅನುಷ್ಠಿಸಬೇಕು. [ವಿಧಿ]

ಯಜ್ಞೋ ವೈ ವಿಷ್ಣುರ್ಯಜ್ಞಮೇವಾರಭ್ಯ ಪ್ರ ತನುತೇ

ಸರಸ್ವತ್ಯೈ ಚರುರ್ಭವತಿ ಸರಸ್ವತೇ ದ್ವಾದಶಕಪಾಲೋ

ऽಮಾವಾಸ್ಯಾ ವೈ ಸರಸ್ವತೀ ಪೂರ್ಣಮಾಸಸ್ಸರಸ್ವಾ-

---

ಯಜ್ಞಃ । ವೈ । ವಿಷ್ಣುಃ । ಯಜ್ಞಮ್ । ಏವ । ಆರಭ್ಯೇತ್ಯಾ-ರಭ್ಯ । ಪ್ರೇತಿ । ತನುತೇ ।

ಸರಸ್ವತ್ಯೈ । ಚರುಃ । ಭವತಿ । ಸರಸ್ವತೇ । ದ್ವಾದಶಕಪಾಲ ಇತಿ ದ್ವಾದಶ-ಕಪಾಲಃ ।

ಅಮಾವಾಸ್ಯೇತ್ಯಮಾ-ವಾಸ್ಯಾ । ವೈ । ಸರಸ್ವತೀ । ಪೂರ್ಣಮಾಸ ಇತಿ ಪೂರ್ಣ-

ಮಾಸಃ । ಸರಸ್ವಾನ್ ।

---

| | |
|---|---|
| ಯಜ್ಞಃ ವೈ ವಿಷ್ಣುಃ | ವ್ಯಾಪಕನಾದ ವಿಷ್ಣುವು ಯಜ್ಞಸ್ವರೂಪನಾಗಿದ್ದಾನೆ. |
| ಯಜ್ಞಮ್ ಆರಭ್ಯ ಪ್ರತನುತೇ ಏವ | [ಈ ದೇವತೆಯ ಅನುಗ್ರಹದಿಂದ] ಯಜ್ಞವನ್ನು ಆರಂಭಿಸಿ ವಿಸ್ತರಿಸುತ್ತಾನೆ. |

ಸಾರಸ್ವತದೇವತೆಗಳ ಪ್ರಶಂಸೆ

| | |
|---|---|
| ಸರಸ್ವತ್ಯೈ ಚರುಃ ಭವತಿ | ಸರಸ್ವತೀದೇವತೆಗೆ ಚರುವಾಗವಿದೆ. |
| ಸರಸ್ವತೇ ದ್ವಾದಶಕಪಾಲಃ [ಭವತಿ] | ಸರಸ್ವಂತನಿಗೆ ದ್ವಾದಶಕಪಾಲಪುರೋಡಾಶವಿದೆ. |
| ಅಮಾವಾಸ್ಯಾ ವೈ ಸರಸ್ವತೀ | ಸರಸ್ವತೀದೇವತೆಯು ಅಮಾವಾಸ್ಯಾಸ್ವರೂಪಳು. |
| ಪೂರ್ಣಮಾಸಃ ಸರಸ್ವಾನ್ | ಸರಸ್ವಂತನು ಪೂರ್ಣಮಾಸಸ್ವರೂಪನಾಗಿದ್ದಾನೆ. |

---

ಸರಸ್ವತಿಯು ಅಮಾವಾಸ್ಯೆಯ ಸ್ವರೂಪಳು. ಸಾರಸ್ವತಹೋಮವನ್ನು ಆರಂಭದಲ್ಲಿಯೇ ಮಾಡುವುದರಿಂದ ದರ್ಶ-ಪೂರ್ಣಮಾಸಗಳನ್ನು ಅಮಾವಾಸ್ಯೆಯಲ್ಲಿಯೇ ಆರಂಭಿಸಿದಂತಾಗಿ ಅನುಲೋಮವಾಗಿಯೇ ಆರಂಭಿಸಿದಂತಾಗುತ್ತದೆ. ವೃದ್ಧಿ ಹೊಂದುವ ಚಂದ್ರನನ್ನು ಅನುಸರಿಸಿ ಯಜಮಾನನೂ ವೃದ್ಧಿಹೊಂದುತ್ತಾನೆ.

-ನ್ನಾವೇವ ಸಾಕ್ಷಾದಾರಭತ ಋಧ್ನೋತ್ಯಾಭ್ಯಾಂ ದ್ವಾದಶ

ಕಪಾಲಸ್ಸರಸ್ವತೇ ಭವತಿ ಮಿಥುನತ್ವಾಯ ಪ್ರಜಾತ್ಯೈ

---

ತೌ। ಏವ। ಸಾಕ್ಷಾದಿತಿ ಸ-ಅಕ್ಷಾತ್। ಆ। ರಭತೇ। ಋಧ್ನೋತಿ। ಆಭ್ಯಾಮ್। ದ್ವಾದಶಕಪಾಲ ಇತಿ ದ್ವಾದಶ-ಕಪಾಲಃ। ಸರಸ್ವತೇ। ಭವತಿ। ಮಿಥುನತ್ವಾಯೇತಿ ಮಿಥುನ-ತ್ವಾಯ। ಪ್ರಜಾತ್ಯಾ ಇತಿ ಪ್ರ-ಜಾತ್ಯೈ।

---

| | |
|---|---|
| ತೌ ಏವ ಸಾಕ್ಷಾತ್ ಆರಭತೇ | [ಹೀಗಾಗಿ] [ಈ ಹವಿರ್ಯಾಗಗಳಿಂದ] ನೇರವಾಗಿಯೇ ದರ್ಶ-ಪೂರ್ಣಮಾಸಗಳನ್ನು ಆರಂಭಿಸಿದವನಾಗುತ್ತಾನೆ. |
| ಆಭ್ಯಾಮ್ ಋಧ್ನೋತಿ | [ಈ ದೇವತೆಗಳಿಂದ] ಯಜಮಾನನು ಫಲ ಸಮೃದ್ಧಿಯನ್ನು ಪಡೆಯುವನು. |

**ದೇವತಾಯುಗ್ಮದ ಪ್ರಶಂಸೆ**

| | |
|---|---|
| ಸರಸ್ವತೇ ದ್ವಾದಶಕಪಾಲಃ ಭವತಿ | ಪುಂದೇವತೆಯಾದ ಸರಸ್ವಂತನಿಗೆ ದ್ವಾದಶಕಪಾಲ ಪುರೋಡಾಶಯಾಗವಿದೆ. [ಚರುಯಾಗವು ಸ್ತ್ರೀದೇವತೆಯಾದ ಸರಸ್ವತಿಗಾಗಿದೆ] |
| ಮಿಥುನತ್ವಾಯ ಪ್ರಜಾತ್ಯೈ | ಇದು ಸ್ತ್ರೀಪುರುಷಯುಗ್ಮಕ್ಕೆ ಕಾರಣವಾಗುತ್ತದೆ. ಇದು ಯಜಮಾನನ ಪ್ರಜೋತ್ಪತ್ತಿಗೆ ಕಾರಣವಾಗಿದೆ. |

---

ಪ್ರಾತಿಲೋಮ್ಯದೋಷಪರಿಹಾರಕ್ಕಾಗಿ ಸಾರಸ್ವತಹೋಮಗಳನ್ನು ಹೇಳಿರುವುದರಿಂದ ಪೂರ್ಣಮಾಸಯಾಗವನ್ನೇ ಮೊದಲು ಆರಂಭಿಸಬೇಕು. ಅದಕ್ಕೆ ಮೊದಲು ಅನ್ವಾರಂಭಣೀಯೇಷ್ಟಿಯನ್ನು ಮಾಡಬೇಕು. ಇದು ತ್ರಿಹವಿಷ್ಕವಾದ ಯಾಗವಾಗಿದೆ.

ಆಗ್ನಾವೈಷ್ಣವಪುರೋಡಾಶಯಾಗದಲ್ಲಿ ಅಗ್ನಿಯು ದೇವತೆಯಾಗಿರುತ್ತಾನೆ. ಆತನು

ಮಿಥುನೌ ಗಾವೌ ದಕ್ಷಿಣಾ ಸಮೃದ್ಧ್ಯೈ೪೮ ॥ ೪–1 ॥

[ವರ್ಚಸಾ ವೈ ತೇ ದರ್ಶಪೂರ್ಣಮಾಸಾವಪ ತನುತೇ ಸರಸ್ವತ್ಯೈ೪೮

ಪಂಚವಿಗ್ಂಶತಿಶ್ಚ ॥]

---

ಮಿಥುನೌ । ಗಾವೌ । ದಕ್ಷಿಣಾ । ಸಮೃಧ್ಯಾ ಇತಿ ಸಮ್– ಋದ್ಧ್ಯೈ೪ ॥ ೪ ॥

---

ಈ ಯಾಗದ ದಕ್ಷಿಣಾವಿಧಿ; ಪ್ರಶಂಸೆ

| | |
|---|---|
| ಮಿಥುನೌ ಗಾವೌ ದಕ್ಷಿಣಾ | ಈ ಯಾಗದಲ್ಲಿ ಧೇನು–ವೃಷಭಗಳನ್ನು ದಕ್ಷಿಣೆಯನ್ನಾಗಿ ಕೊಡಬೇಕು. |
| ಸಮೃದ್ಧ್ಯೈ೪೮ | ಇದು ಫಲಸಮೃದ್ಧಿಗೆ ಕಾರಣವಾಗಿದೆ. |

---

ಯಜ್ಞದ ಮುಖಸ್ವರೂಪನು. ಯಜ್ಞನಿರ್ವಾಹಕನು. ಈ ದೇವತೆಯು ಯಜ್ಞವನ್ನು ಪೂರ್ಣಗೊಳಿಸಿ ಫಲಸಮೃದ್ಧಿಗೆ ಕಾರಣನಾಗುತ್ತಾನೆ. ಎರಡನೆಯ ದೇವತೆಯಾದ ಸರ್ವವ್ಯಾಪಕನಾದ ವಿಷ್ಣುವು ಯಜ್ಞಸ್ವರೂಪನೇ. ಆತನು ಯಜ್ಞವನ್ನು ಆರಂಭಿಸಿ ವಿಸ್ತರಿಸುತ್ತಾನೆ. ಇದು ದೇವತಾಪ್ರಶಂಸೆ.

ಸರಸ್ವಂತ–ಸರಸ್ವತೀದೇವತೆಗಳು ಪೂರ್ಣಮಾಸ–ಅಮಾವಾಸ್ಯಾಸ್ವರೂಪದವರಾದುದರಿಂದ ಈ ಹವಿರ್ಯಾಗಗಳನ್ನು ಮಾಡುವುದರಿಂದ ನೇರವಾಗಿ ದರ್ಶ–ಪೂರ್ಣಮಾಸಗಳನ್ನೇ ಆರಂಭಿಸಿದವನಾಗುತ್ತಾನೆ. ಈ ಇಬ್ಬರು ದೇವತೆಗಳಿಂದ ಯಜಮಾನನು ಸಮೃದ್ಧಿಯನ್ನು ಹೊಂದುವನು.

ಸರಸ್ವಂತನು ಪುಂದೇವತೆಯಾದುದರಿಂದ ಸರಸ್ವತಿಯು ಸ್ತ್ರೀದೇವತೆಯಾದುದರಿಂದ ಸ್ತ್ರೀಪುರುಷಯುಗ್ಮಕ್ಕೆ ಕಾರಣವಾಗುತ್ತದೆ. ಇದು ಯಜಮಾನನ ಪ್ರಜೋತ್ಪತ್ತಿಗೆ ಕಾರಣವಾಗುತ್ತದೆ. ಇದು ದೇವತಾಯುಗ್ಮದ ಪ್ರಶಂಸೆ.

ಈ ಯಾಗದಲ್ಲಿ ಧೇನು–ವೃಷಭಗಳು ದಕ್ಷಿಣೆಯಾದುದರಿಂದ ಫಲಸಮೃದ್ಧಿಯುಂಟಾಗುತ್ತದೆ.

# ವಿನಿಯೋಗಸಂಗ್ರಹ

1-2 ಪೂರ್ಣೇತ್ಯಾರಂಭಣೀಯೇಷ್ಟೌ ದ್ವೌ ಸಾರಸ್ವತಹೋಮಯೋಃ ।
ಮಂತ್ರೌ 3-4ವಿಕಲ್ಪಿತಾವನ್ಯಾವಿತಿ ಚತ್ವಾರ ಈರಿತಾಃ ॥

## ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-4

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

### ೧) ಅನ್ವಾರಂಭಣೀಯೇಷ್ಟಿಗೆ ಆವೃತ್ತಿ ಇದೆಯೇ? [ಜೈ.ಸೂ.9.1.16]

ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸಲು ಅನ್ವಾಧಾನವು ಮೊದಲು ಆಗಬೇಕಾದುದರಿಂದ ಅನ್ವಾಧಾನಕ್ಕೆ ಈ ಅನ್ವಾರಂಭಣೀಯೇಷ್ಟಿಯು ಅಂಗವಾದುದರಿಂದ ಪ್ರತಿ ಪ್ರಯೋಗವನ್ನು ಮಾಡುವಾಗಲೂ ಅನ್ವಾಧಾನದ ಆವೃತ್ತಿ ಇರುವುದರಿಂದ ಅದರ ಅಂಗವಾದ ಈ ಅನ್ವಾರಂಭಣೀಯೇಷ್ಟಿಗೂ ಆವೃತ್ತಿಯು ಇದೆ. ಇದು ಇಲ್ಲಿನ ಪೂರ್ವಪಕ್ಷ.

'ಪ್ರಯೋಗಮಾರಪ್ಸ್ಯಮಾನಃ' ಎಂದು ಹೇಳದೇ 'ದರ್ಶಪೂರ್ಣಮಾಸಾವಾರಪ್ಸ್ಯಮಾನಃ' ಎಂದು ವಚನವಿರುವುದರಿಂದ ಆರಂಭವು ಒಂದೇ ಆಗಿರುವುದರಿಂದ ಪ್ರತಿ ಪ್ರಯೋಗದಲ್ಲಿಯೂ ಅನ್ವಾಧಾನದ ಆವೃತ್ತಿ ಇದ್ದರೂ ಆರಂಭಣೀಯೇಷ್ಟಿಯ ಆವೃತ್ತಿಯನ್ನು ಮಾಡಬೇಕಾಗಿಲ್ಲ. ಇದು ಇಲ್ಲಿನ ಸಿದ್ಧಾಂತ.

* 'ಯಾವಜ್ಜೀವಂ ದರ್ಶ-ಪೂರ್ಣಮಾಸಾಭ್ಯಾಂ ಯಜೇತ' ಎಂಬ ವಚನದಂತೆ ದರ್ಶ-ಪೂರ್ಣಮಾಸಗಳಿಗೆ ಆವೃತ್ತಿ ಇದೆ. ಈ ಅನ್ವಾರಂಭಣೀಯೇಷ್ಟಿಯು ಪ್ರಯಾಜಾದಿಗಳಂತೆ ದರ್ಶ-ಪೂರ್ಣಮಾಸಗಳಿಗೆ ಅಂಗವಾದುದರಿಂದ ಈ ಇಷ್ಟಿಗೆ ಆವೃತ್ತಿ ಇದೆಯೇ? ಇದು ಇಲ್ಲಿನ ಇನ್ನೊಂದು ಪೂರ್ವಪಕ್ಷ.

'ಯಾವಜ್ಜೀವಂ...'ಎಂಬ ವಾಕ್ಯವಿದೆ. ಯಾವಜ್ಜೀವವೂ ದರ್ಶಪೂರ್ಣಮಾಸಗಳನ್ನು ಅನುಷ್ಠಿಸಬೇಕೆಂಬ ನಿಶ್ಚಯವೇ ಆರಂಭ. ಅದು ಒಂದೇ ಆಗಿದೆ. ಆ ಆರಂಭದ ಪ್ರಯುಕ್ತವಾಗಿ ಈ ಇಷ್ಟಿ. ಹೀಗಾಗಿ ಇದು ಪ್ರಯಾಜಾದಿಗಳಂತೆ ಅಂಗವಲ್ಲವಾದುದರಿಂದ ಆವೃತ್ತಿ ಇಲ್ಲ. ಎಲ್ಲ ಕ್ರತುಗಳಿಗೂ ಸಾಧಾರಣವಾಗಿ ಆಧಾನವನ್ನು ಒಮ್ಮೆ ಮಾತ್ರ ಅನುಷ್ಠಿಸುವಂತೆ ಈ ಅನ್ವಾರಂಭಣೀಯೇಷ್ಟಿಯೂ ಒಮ್ಮೆ ಮಾತ್ರ ಅನುಷ್ಠಿಸಲ್ಪಡಬೇಕು. ಇದು ಇಲ್ಲಿನ ಸಿದ್ಧಾಂತ.

### ೨) ಆರಂಭಣೀಯೇಷ್ಟಿಗೆ ಮೊದಲು ಇನ್ನೊಂದು ಆರಂಭಣೀಯೇಷ್ಟಿಯೇ ?

[ಜೈ.ಸೂ.10.1.9]

ಆರಂಭಣೀಯೇಷ್ಟಿಯೂ ಒಂದು ಇಷ್ಟಿಯಾದುದರಿಂದ ಆ ಇಷ್ಟಿಗೂ ದರ್ಶ–ಪೂರ್ಣ ಮಾಸವೇ ಪ್ರಕೃತಿಯಾಗುತ್ತದೆ. ಪ್ರಕೃತಿಯಾದ ದರ್ಶ–ಪೂರ್ಣಮಾಸವನ್ನು ಅನುಷ್ಠಿಸುವ ಮೊದಲು ಅನ್ವಾರಂಭಣೀಯೇಷ್ಟಿಯನ್ನು ಮಾಡಬೇಕಾದುದರಿಂದ ವಿಕೃತಿಯಾದ ಅನ್ವಾರಂಭಣೀಯೇಷ್ಟಿಗೂ ಮೊದಲು ಇನ್ನೊಂದು ಅನ್ವಾರಂಭಣೀ ಯೇಷ್ಟಿಯನ್ನು ಅನುಷ್ಠಿಸಬೇಕೆ ? ಇದು ಇಲ್ಲಿನ ಸಂಶಯ.

ಆರಂಭಿಸಲ್ಪಡುವ ಇಷ್ಟಿಯ ಸಂಸ್ಕಾರಕ್ಕಾಗಿ ಈ ಅನ್ವಾರಂಭಣೀಯೇಷ್ಟಿಯು ಇರುವುದರಿಂದ ಇನ್ನೊಂದು ಅನ್ವಾರಂಭಣೀಯೇಷ್ಟಿಯನ್ನು ಅನುಷ್ಠಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ಅನ್ವಾರಂಭಣೀಯೇಷ್ಟಿಯು ದರ್ಶಪೂರ್ಣಮಾಸೇಷ್ಟಿಯ ವಿಕೃತಿ. ಆದುದರಿಂದ ಅತಿದೇಶದಿಂದ ಅಂಗಪ್ರಾಪ್ತಿಯನ್ನು ಅಂಗೀಕರಿಸುವುದು ಅನಿವಾರ್ಯ. ಆದರೆ ಅದರ ಅಂಗವಾಗಿ ಇನ್ನೊಂದು ಅನ್ವಾರಂಭಣೀಯೇಷ್ಟಿ ಎನ್ನುವುದಾದರೆ ಅನವಸ್ಥಾಪ್ರಸಂಗ ವುಂಟಾಗುತ್ತದೆ. ಆದುದರಿಂದ ಅನ್ವಾರಂಭಣೀಯೇಷ್ಟಿಯ ಆರಂಭದಲ್ಲಿ ಇನ್ನೊಂದು ಅನ್ವಾರಂಭಣೀಯೇಷ್ಟಿಯನ್ನು ಮಾಡಬೇಕಾಗಿಲ್ಲ. ಇದು ಇಲ್ಲಿನ ಸಿದ್ಧಾಂತ.

## ॥ ದ್ವಿತೀಯೋಽನುವಾಕಃ ॥

ಋಷಯೋ ವಾ ಇಂದ್ರಂ ಪ್ರತ್ಯಕ್ಷಂ ನಾಪಶ್ಯನ್ತಂ ವಸಿಷ್ಠಃ
ಪ್ರತ್ಯಕ್ಷಮಪಶ್ಯಥ್ಸೋಽಬ್ರವೀದ್ಬ್ರಾಹ್ಮಣಂ ತೇ ವಕ್ಷ್ಯಾಮಿ

---

ಋಷಯಃ । ವೈ । ಇಂದ್ರಮ್ । ಪ್ರತ್ಯಕ್ಷಮಿತಿ ಪ್ರತಿ–ಅಕ್ಷಮ್ । ನ । ಅಪಶ್ಯನ್ನ್ ।
ತಮ್ । ವಸಿಷ್ಠಃ । ಪ್ರತ್ಯಕ್ಷಮಿತಿ ಪ್ರತಿ–ಅಕ್ಷಮ್ । ಅಪಶ್ಯತ್ । ಸಃ । ಅಬ್ರವೀತ್ ।
ಬ್ರಾಹ್ಮಣಮ್ । ತೇ । ವಕ್ಷ್ಯಾಮಿ ।

---

ಮೊದಲನೆಯ ಅನುವಾಕದಲ್ಲಿ ಅನ್ವಾರಂಭಣೀಯೇಷ್ಟಿಯ ವಿಷಯಗಳು ಹೇಳಲ್ಪಟ್ಟವು. ಈ ಎರಡನೆಯ ಅನುವಾಕದಲ್ಲಿ ಸೌಮಿಕಬ್ರಹ್ಮತ್ವವು ಹೇಳಲ್ಪಡುತ್ತದೆ.

---

### ಬ್ರಹ್ಮತ್ವವಿಧಿಗಾಗಿ ಉಪಾಖ್ಯಾನ

| ಬ್ರಾಹ್ಮಣಭಾಗ | ವಿವರಣೆ |
|---|---|
| ಋಷಯಃ ವೈ ಇಂದ್ರಮ್ ಪ್ರತ್ಯಕ್ಷಮ್ ನ ಅಪಶ್ಯನ್ | ಒಮ್ಮೆ ಋಷಿಗಳು ಇಂದ್ರನನ್ನು ಪ್ರತ್ಯಕ್ಷವಾಗಿ ನೋಡಲು ಅಸಮರ್ಥರಾದರು. |
| ವಸಿಷ್ಠಃ ತಮ್ ಪ್ರತ್ಯಕ್ಷಮ್ ಅಪಶ್ಯತ್ | ಆಗ ವಸಿಷ್ಠನು ಯೋಗದೃಷ್ಟಿಯಿಂದ ಇಂದ್ರನನ್ನು ಪ್ರತ್ಯಕ್ಷವಾಗಿ ಕಂಡನು. |
| ಸಃ ತೇ ಬ್ರಾಹ್ಮಣಮ್ ವಕ್ಷ್ಯಾಮಿ | [ಆಗ] ಆ ಇಂದ್ರನು ನಿನಗೆ ಸೌಮಿಕಬ್ರಹ್ಮತ್ವೋಪಯೋಗಿವಿಷಯಗಳನ್ನು ಹೇಳುತ್ತೇನೆ. |

ಯಥಾ ತ್ವತ್ಪುರೋಹಿತಾಃ ಪ್ರಜಾಃ ಪ್ರಜನಿಷ್ಯಂತೇಽಥ ಮೇತರೇಭ್ಯ ಋಷಿಭ್ಯೋ ಮಾ ಪ್ರವೋಚ ಇತಿ

---

ಯಥಾ । ತ್ವತ್ಪುರೋಹಿತಾ ಇತಿ ತ್ವತ್-ಪುರೋಹಿತಾಃ । ಪ್ರಜಾ ಇತಿ ಪ್ರ-ಜಾಃ । ಪ್ರಜನಿಷ್ಯಂತ ಇತಿ ಪ್ರ-ಜನಿಷ್ಯಂತೇ । ಅಥ । ಮಾ । ಇತರೇಭ್ಯಃ । ಋಷಿಭ್ಯ ಇತ್ಯೃಷಿ-ಭ್ಯಃ । ಮಾ । ಪ್ರೇತಿ । ವೋಚಃ । ಇತಿ ।

---

| | |
|---|---|
| ಯಥಾ ತ್ವತ್ಪುರೋಹಿತಾಃ ಪ್ರಜಾಃ ಪ್ರಜನಿಷ್ಯಂತೇ [ತಥಾ ಕರಿಷ್ಯಾಮಿ] | ವಾಸಿಷ್ಠನಾದ ಬ್ರಾಹ್ಮಣನನ್ನೇ ಪುರೋಹಿತನನ್ನಾಗಿ ಹೊಂದಿರುವ ಪ್ರಜೆಗಳೇ ಉತ್ಪನ್ನರಾಗುವಂತೆ ಮಾಡುತ್ತೇನೆ/ಯಜಮಾನರು ನಿನ್ನನ್ನೇ [ವಸಿಷ್ಠನನ್ನೇ] ಪುರೋಹಿತನನ್ನಾಗಿ ಹೊಂದುವಂತೆ ಮಾಡುತ್ತೇನೆ. |
| ಅಥ ಮಾ ಇತರೇಭ್ಯಃ ಋಷಿಭ್ಯಃ ಮಾ ಪ್ರವೋಚಃ ಇತಿ ಅಬ್ರವೀತ್ | ಬಳಿಕ ನೀನು ನನ್ನನ್ನು [ನಾನು ಹೇಳಿದುದನ್ನು] ಬೇರೆಯ ಋಷಿಗಳಿಗೆ ಹೇಳಬೇಡ ಎಂದು ಹೇಳಿದನು. |

---

ಒಮ್ಮೆ ಋಷಿಗಳು ಇಂದ್ರನನ್ನು ಪ್ರತ್ಯಕ್ಷವಾಗಿ ನೋಡಲು ಅಸಮರ್ಥರಾದಾಗ ವಸಿಷ್ಠರು ಯೋಗಸಾಮರ್ಥ್ಯದಿಂದ ಅವನನ್ನು ಕಂಡರು. ಸುಪ್ರೀತನಾದ ಇಂದ್ರನು ವಾಸಿಷ್ಠಬ್ರಾಹ್ಮಣನನ್ನು ಪುರೋಹಿತರನ್ನಾಗಿ ಹೊಂದಿರುವ ಪ್ರಜೆಗಳು ಉತ್ಪನ್ನರಾಗುವಂತೆ ಮಾಡಿದನು. ಇಂದ್ರನು ವಸಿಷ್ಠರಿಗೆ ಸೌಮಿಕಬ್ರಹ್ಮತ್ವೋಪ ಯೋಗಿ ಸ್ತೋಮಗಳನ್ನು ಉಪದೇಶಿಸಿದನು. ಬಳಿಕ ಪ್ರಜೆಗಳು ವಸಿಷ್ಠನನ್ನೇ ಪುರೋಹಿತನನ್ನಾಗಿ ಹೊಂದಿದವರಾಗಿ ಜನಿಸಿದರು. ವಾಸಿಷ್ಠರನ್ನೇ ಅಥವಾ ಸ್ತೋಮಭಾಗಗಳನ್ನು ಅರಿತವರನ್ನೇ ಬ್ರಹ್ಮನನ್ನಾಗಿ ಆರಿಸಿಕೊಂಡರು. ಇದು ಒಂದು ಉಪಾಖ್ಯಾನ.

ತಸ್ಮಾ ಏತಾನ್ತ್ಸ್ತೋಮಭಾಗಾನಬ್ರವೀತ್ತತೋ ವಸಿಷ್ಠ ಪುರೋಹಿತಾಃ ಪ್ರಜಾಃ ಪ್ರಾಜಾಯಂತ ತಸ್ಮಾದ್ವಾಸಿಷ್ಠೋ ಬ್ರಹ್ಮಾ ಕಾರ್ಯಃ ಪ್ರೈವ ಜಾಯತೇ

---

ತಸ್ಮೈ । ಏತಾನ್ । ಸ್ತೋಮಭಾಗಾನಿತಿ ಸ್ತೋಮ-ಭಾಗಾನ್ । ಅಬ್ರವೀತ್ । ತತಃ । ವಸಿಷ್ಠಪುರೋಹಿತಾ ಇತಿ ವಸಿಷ್ಠ-ಪುರೋಹಿತಾಃ । ಪ್ರಜಾ ಇತಿ ಪ್ರ-ಜಾಃ । ಪ್ರೇತಿ । ಅಜಾಯಂತ । ತಸ್ಮಾತ್ । ವಾಸಿಷ್ಠಃ । ಬ್ರಹ್ಮಾ । ಕಾರ್ಯಃ । ಪ್ರೇತಿ । ಏವ । ಜಾಯತೇ ।

---

| | |
|---|---|
| **ತಸ್ಮೈ ಏತಾನ್ ಸ್ತೋಮಭಾಗಾನ್ ಅಬ್ರವೀತ್** | ಆ ವಸಿಷ್ಠನಿಗೆ ಇಂದ್ರನು ಈ ಸ್ತೋಮಭಾಗಗಳನ್ನು ಉಪದೇಶಿಸಿದನು. |
| **ತತಃ ವಸಿಷ್ಠಪುರೋಹಿತಾಃ ಪ್ರಜಾಃ ಪ್ರಾಜಾಯಂತ** | ಬಳಿಕ ಪ್ರಜೆಗಳು ವಸಿಷ್ಠನನ್ನೇ ಪುರೋಹಿತನನ್ನಾಗಿ ಹೊಂದಿದವರಾಗಿ ಜನಿಸಿದರು./ವಾಸಿಷ್ಠರನ್ನೇ ಅಥವಾ ಸ್ತೋಮಭಾಗವನ್ನು ತಿಳಿದವರನ್ನೇ ಬ್ರಹ್ಮನನ್ನಾಗಿ ಆರಿಸಿಕೊಂಡರು. |

**ವಾಸಿಷ್ಠನಿಗೆ ಬ್ರಹ್ಮತ್ವವಿಧಿ; ಪ್ರಶಂಸೆ**

| | |
|---|---|
| **ತಸ್ಮಾತ್ ವಾಸಿಷ್ಠಃ** | ಆದುದರಿಂದ ವಸಿಷ್ಠಗೋತ್ರದಲ್ಲಿ ಹುಟ್ಟಿದವನು/ ವಸಿಷ್ಠನಂತೆ ಸ್ತೋಮಭಾಗಗಳನ್ನು ತಿಳಿದವನು |
| **ಬ್ರಹ್ಮಾ ಕಾರ್ಯಃ** | [ಸೋಮಯಾಗವನ್ನು ಮಾಡುವ ಯಜಮಾನನಿಂದ] ಬ್ರಹ್ಮನಾಗಿ ಮಾಡಲ್ಪಡಬೇಕು. |
| **ಪ್ರ ಏವ ಜಾಯತೇ** | [ಇದರಿಂದ] ಯಜಮಾನನು ಉತ್ತಮ ಪ್ರಜೆಯನ್ನು ಹೊಂದುತ್ತಾನೆ. |

ರಶ್ಮಿರಸಿ ಕ್ಷಯಾಯ ತ್ವಾ ಕ್ಷಯಂ ಜಿನ್ವೇತ್ಯಾ

[ಜಿನ್ವೇತಿ(೫)ಆಹ ದೇವಾ]ಹ ದೇವಾ ವೈ ಕ್ಷಯೋ

ದೇವೇಭ್ಯ ಏವ ಯಜ್ಞಂ ಪ್ರಾಹ

---

ರಶ್ಮಿಃ । ಅಸಿ । ಕ್ಷಯಾಯ । ತ್ವಾ । ಕ್ಷಯಮ್ । ಜಿನ್ವ । ಇತಿ ।(೫)। ಆಹ । ದೇವಾಃ ।

ವೈ । ಕ್ಷಯಃ । ದೇವೇಭ್ಯಃ । ಏವ । ಯಜ್ಞಮ್ । ಪ್ರೇತಿ । ಆಹ ।

---

ಮೊದಲನೆಯ ಸ್ತೋಮಭಾಗಮಂತ್ರದ ವಿವರಣೆ

| | |
|---|---|
| ರಶ್ಮಿಃ ಅಸಿ | [ಆದಿತ್ಯದೇವನೇ!] ನೀನು ಕಿರಣಗಳುಳ್ಳವನಾಗಿದ್ದೀಯೆ. |
| ಕ್ಷಯಾಯ ತ್ವಾ | ದೇವಸಂಘಕ್ಕಾಗಿ ನಿನ್ನನ್ನು [ಸ್ಮರಿಸುತ್ತೇನೆ] |
| ಕ್ಷಯಮ್ ಜಿನ್ವ ಇತಿ ಆಹ | ದೇವಸಂಘವನ್ನು ನೀನು ಸಂತೋಷಪಡಿಸು ಎಂದು ಈ ಮಂತ್ರವು ಹೇಳುತ್ತದೆ. |
| ದೇವಾ ವೈ ಕ್ಷಯಃ | ದೇವತೆಗಳೇ ಕ್ಷಯಶಬ್ದವಾಚ್ಯರಾಗಿರುತ್ತಾರೆ. |
| ದೇವೇಭ್ಯಃ ಏವ ಯಜ್ಞಮ್ ಪ್ರಾಹ | [ಈ ಮಂತ್ರವನ್ನು ಹೇಳುವುದರಿಂದ] ಹೋತೃವು ದೇವಸಂಘಪ್ರೀತಿಗಾಗಿ ಯಜ್ಞವನ್ನು ಸಮರ್ಪಿಸಿದವನಾಗುತ್ತಾನೆ. |

---

ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ವಾಜಪೇಯ ಮತ್ತು ಅಪ್ತೋರ್ಯಾಮಗಳಲ್ಲಿ ಈ ಇಪ್ಪತ್ತೊಂಬತ್ತು ಸ್ತೋಮಭಾಗಗಳನ್ನು ಬ್ರಹ್ಮನು ಹೇಳಿ ಸ್ತೋತ್ರಕ್ಕೆ ಅನುಮತಿಯನ್ನು ಕೊಡಬೇಕು. ಹೀಗೆ ಸ್ತೋಮಗಳ ಭಾಗವಾಗಿರುವುದರಿಂದ ಇವುಗಳು ಸ್ತೋಮಭಾಗಗಳೆನಿಸಿಕೊಳ್ಳುತ್ತವೆ. ಅಗ್ನಿಷ್ಟೋಮದಲ್ಲಿ ಹನ್ನೆರಡು, ಅತ್ಯಗ್ನಿಷ್ಟೋಮದಲ್ಲಿ ಹದಿಮೂರು, ಉಕ್ಥ್ಯದಲ್ಲಿ ಹದಿನೈದು, ಷೋಡಶಿ

ಪ್ರೇತಿರಸಿ ಧರ್ಮಾಯ ತ್ವಾ ಧರ್ಮಂ ಜಿನ್ವೇತ್ಯಾಹ

ಮನುಷ್ಯಾ ವೈ ಧರ್ಮೋ ಮನುಷ್ಯೇಭ್ಯ ಏವ ಯಜ್ಞಂ

ಪ್ರಾಹಾ-

---

ಪ್ರೇತಿರಿತಿ ಪ್ರ-ಇತಿಃ । ಅಸಿ । ಧರ್ಮಾಯ । ತ್ವಾ । ಧರ್ಮಮ್ । ಜಿನ್ವ । ಇತಿ । ಆಹ ।

ಮನುಷ್ಯಾಃ । ವೈ । ಧರ್ಮಃ । ಮನುಷ್ಯೇಭ್ಯಃ । ಏವ । ಯಜ್ಞಮ್ । ಪ್ರೇತಿ । ಆಹ ।

---

### ಎರಡನೆಯ ಮಂತ್ರದ ವಿವರಣೆ

| | |
|---|---|
| ಪ್ರೇತಿಃ ಅಸಿ | [ಧರ್ಮಾಭಿಮಾನಿದೇವನೇ!] ಪ್ರಾಣ್ಯುಪಕಾರಕ ರೂಪವಾದ ಮಾನವನಾಗಿದ್ದೀಯೆ. |
| ಧರ್ಮಾಯ ತ್ವಾ | ಧರ್ಮಾನುಷ್ಠಾನಪುರುಷರಿಗಾಗಿ ನಿನ್ನನ್ನು [ಸ್ಮರಿಸುತ್ತೇನೆ] |
| ಧರ್ಮಮ್ ಜಿನ್ವ ಇತಿ ಆಹ | ಆ ಧರ್ಮಾಭಿಮಾನಿಗಳನ್ನು ಸಂತೋಷಪಡಿಸು ಎಂದು ಈ ಮಂತ್ರವು ಹೇಳುತ್ತದೆ. |
| ಮನುಷ್ಯಾಃ ವೈ ಧರ್ಮಃ | ಧರ್ಮಾನುಷ್ಠಾನ ಮಾಡುವ ಪುರುಷರೇ ಧರ್ಮ ಸ್ವರೂಪರು. |
| ಮನುಷ್ಯೇಭ್ಯಃ ಏವ ಯಜ್ಞಮ್ ಪ್ರಾಹ | ಆ ಧರ್ಮಕ್ಕಾಗಿಯೇ [ಧರ್ಮಾನುಷ್ಠಾತೃಪುರುಷ ರಿಗಾಗಿಯೇ] ಹೋತೃವು ಈ ಮಂತ್ರವನ್ನು ಹೇಳುತ್ತಾನೆ. |

---

ಯಲ್ಲಿ ಹದಿನಾರು, ವಾಜಪೇಯದಲ್ಲಿ ಹದಿನೇಳು, ಅತಿರಾತ್ರದಲ್ಲಿ ಇಪ್ಪತ್ತೊಂಬತ್ತು, ಅಪ್ತೋರ್ಯಮದಲ್ಲಿ ಮೂವತ್ತಮೂರು-ಇದು ಸ್ತೋತ್ರಗಳ ಸಂಖ್ಯೆ. ಅಪ್ತೋರ್ಯಾಮದಲ್ಲಿ ಆವೃತ್ತಿಯಿಂದ ಸಂಖ್ಯಾಪೂರ್ತಿಯನ್ನು ಮಾಡಿಕೊಳ್ಳಬೇಕು.

ಇಂದ್ರನು ವಸಿಷ್ಠನಿಗೆ ಸ್ತೋಮಭಾಗಮಂತ್ರಗಳನ್ನು ಉಪದೇಶ ಮಾಡಿರುವುದರಿಂದ ವಸಿಷ್ಠ ಗೋತ್ರೋತ್ಪನ್ನನನ್ನೇ ಬ್ರಹ್ಮನನ್ನಾಗಿ ವರಣ ಮಾಡಬೇಕು. ಇದರಿಂದ

ನ್ವಿತಿರಸಿ ದಿವೇ ತ್ವಾ ದಿವಂ ಜಿನ್ವೇತ್ಯಾಹೈಭ್ಯ ಏವ ಲೋಕೇಭ್ಯೋ ಯಜ್ಞಂ ಪ್ರಾಹ ವಿಷ್ಟಂಭೋಽಸಿ ವೃಷ್ಟ್ಯೈ ತ್ವಾ

---

ಅನ್ವಿತಿರಿತ್ಯನು–ಇತಿಃ। ಅಸಿ। ದಿವೇ। ತ್ವಾ। ದಿವಮ್। ಜಿನ್ವ। ಇತಿ। ಆಹ। ಏಭ್ಯಃ। ಏವ। ಲೋಕೇಭ್ಯಃ। ಯಜ್ಞಮ್। ಪ್ರೇತಿ। ಆಹ। ವಿಷ್ಟಂಭ ಇತಿ ವಿ–ಸ್ತಂಭಃ। ಅಸಿ। ವೃಷ್ಟ್ಯೈ। ತ್ವಾ।

---

**ಮೂರು, ನಾಲ್ಕು ಹಾಗೂ ಐದನೆಯ ಸ್ತೋಮಭಾಗಮಂತ್ರಗಳ ವಿವರಣೆ**

| | |
|---|---|
| **ಅನ್ವಿತಿಃ ಅಸಿ** | [ದ್ಯುಲೋಕಾಭಿಮಾನಿದೇವನೇ!] ದ್ಯುಲೋಕ ಪ್ರಾಪ್ತಿಗೆ ಅನುಕೂಲನಾಗಿದ್ದೀಯೆ. |
| **ದಿವೇ ತ್ವಾ** | ದ್ಯುಲೋಕಪ್ರಾಪ್ತಿಗಾಗಿ ನಿನ್ನನ್ನು [ಸ್ಮರಿಸುತ್ತೇನೆ] |
| **ದಿವಮ್ ಜಿನ್ವ** | ನೀನು ದ್ಯುಲೋಕಾಭಿಮಾನಿದೇವನನ್ನು ಸಂತೋಷಪಡಿಸು. |
| **ಇತಿ ಆಹ** | ಎಂದು ಈ ಮಂತ್ರವು ಹೇಳುತ್ತದೆ. |
| **ಏಭ್ಯಃ ಏವ ಲೋಕೇಭ್ಯಃ** | ಈ ಲೋಕಾಭಿಮಾನಿದೇವತೆಗಳ ಪ್ರೀತಿಗಾಗಿಯೇ |
| **ಯಜ್ಞಮ್ ಪ್ರಾಹ** | ಯಜ್ಞವನ್ನು ಹೋತೃವು ಆರಂಭಿಸುತ್ತಾನೆ. |

**ಆರನೆಯ ಸ್ತೋಮಭಾಗದ ಮಂತ್ರದ ವಿವರಣೆ**

| | |
|---|---|
| **ವಿಷ್ಟಂಭಃ ಅಸಿ** | [ಎಲೈ! ವೃಷ್ಟ್ಯಭಿಮಾನಿದೇವನೇ] ನೀನು ವಿಶೇಷವಾಗಿ ನೀರನ್ನು ಧರಿಸಿರುವೆ. |
| **ವೃಷ್ಟ್ಯೈ ತ್ವಾ** | ಮಳೆಗಾಗಿ ನಿನ್ನನ್ನು ಸ್ಮರಿಸುತ್ತೇನೆ. |

---

ಯಜಮಾನನು ಸತ್ಪುತ್ರವಂತನಾಗುತ್ತಾನೆ.

ವೃಷ್ಟಿಂ ಜಿನ್ವೇತ್ಯಾಹ ವೃಷ್ಟಿಮೇವಾವ[(೬)ರುಂಧೇ]ರುಂಧೇ

ಪ್ರವಾऽಸ್ಯನುವಾऽಸೀತ್ಯಾಹ ಮಿಥುನತ್ವಾಯೋ–

---

ವೃಷ್ಟಿಮ್ । ಜಿನ್ವ । ಇತಿ । ಆಹ । ವೃಷ್ಟಿಮ್ । ಏವ । ಅವೇತಿ ।(೬)। ರುಂಧೇ । ಪ್ರವೇತಿ

ಪ್ರ–ವಾ । ಅಸಿ । ಅನುವೇತ್ಯನು–ವಾ । ಅಸಿ । ಇತಿ । ಆಹ । ಮಿಥುನತ್ವಾಯೇತಿ ಮಿಥುನ–

ತ್ವಾಯ ।

---

| | |
|---|---|
| ವೃಷ್ಟಿಮ್ ಜಿನ್ವ ಇತಿ ಆಹ | ವೃಷ್ಟಿದೇವನನ್ನು/ವೃಷ್ಟಿಯನ್ನು ಸಂತೋಷ ಪಡಿಸು ಎಂದು ಈ ಮಂತ್ರವು ಹೇಳುತ್ತದೆ. |
| ವೃಷ್ಟಿಮ್ ಏವ ಅವರುಂಧೇ | [ಹೋತೃವು ಈ ಮಂತ್ರವನ್ನು ಹೇಳುವುದರಿಂದ] ಯಜಮಾನನು ವೃಷ್ಟಿಯನ್ನು ಹೊಂದುವನು. |

**ಏಳು ಮತ್ತು ಎಂಟನೆಯ ಸ್ತೋಮಭಾಗಮಂತ್ರಗಳ ಸಂಯುಕ್ತ ವಿವರಣೆ**

| | |
|---|---|
| ಪ್ರವಾऽಸಿ [ಅಹ್ನೇ ತ್ವಾ ಅಹಃ ಜಿನ್ವ] | [ಅಹರಭಿಮಾನಿದೇವತೆಯೇ!] ನೀನು ಪ್ರವಾಸಾದ್ಯನುಕೂಲನಾಗಿ ಪ್ರವರ್ತಿಸುವವನಾಗಿರುವೆ. [ಅಹರಭಿಮಾನಿದೇವನ ಅನುಗ್ರಹಕ್ಕಾಗಿ ನಿನ್ನನ್ನು ಸ್ಮರಿಸುತ್ತೇನೆ. ಹಗಲನ್ನು ಸಂತೋಷಪಡಿಸು] |
| ಅನುವಾऽಸಿ [ರಾತ್ರಿಯೈ ತ್ವಾ ರಾತ್ರಿಂ ಜಿನ್ವ] ಇತಿ ಆಹ | [ರಾತ್ರ್ಯಭಿಮಾನಿದೇವನೇ!] ನೀನು ನಿದ್ರಾದಿವ್ಯವಹಾರಗಳನ್ನು ಪ್ರವರ್ತಿಸತಕ್ಕವನು [ಅಭಿಮಾನಿದೇವನ ಅನುಗ್ರಹಕ್ಕಾಗಿ ಸ್ಮರಿಸುತ್ತೇನೆ. ರಾತ್ರಿಯನ್ನು ಸಂತೋಷಪಡಿಸು] ಎಂದು ಈ ಮಂತ್ರವು ಹೇಳುತ್ತದೆ. |
| ಮಿಥುನತ್ವಾಯ | ಇದು ಸ್ತ್ರೀಪುರುಷಯುಗ್ಮಕ್ಕೆ ಕಾರಣವಾಗುತ್ತದೆ. |

---

ಐದನೆಯ ಕಾಂಡದಲ್ಲಿ 'ರಶ್ಮಿರಿತ್ಯೇವಾದಿತ್ಯಮಸೃಜತ' ಮೊದಲಾಗಿ ಬ್ರಾಹ್ಮಣವು ಆದಿತ್ಯಾದಿಗಳ ಸೃಷ್ಟಿಯನ್ನು ಹೇಳಿದೆ. ಅದಕ್ಕೆ ಅನುಗುಣವಾಗಿ ಇಲ್ಲಿ ಆ ಶಬ್ದಗಳ

–ऽಶಿಗಸಿ ವಸುಭ್ಯಸ್ತ್ವಾ ವಸೂಞ್ಜಿನ್ವೇತ್ಯಾಹಾಷ್ಟೌ ವಸವ

ಏಕಾದಶ ರುದ್ರಾ ದ್ವಾದಶಾದಿತ್ಯಾ ಏತಾವಂತೋ ವೈ

ದೇವಾ–

---

ಉಶಿಕ್ । ಅಸಿ । ವಸುಭ್ಯ ಇತಿ ವಸು–ಭ್ಯಃ । ತ್ವಾ । ವಸೂನ್ । ಜಿನ್ವ । ಇತಿ । ಆಹ ।

ಅಷ್ಟೌ । ವಸವಃ । ಏಕಾದಶ । ರುದ್ರಾಃ । ದ್ವಾದಶ । ಆದಿತ್ಯಾಃ । ಏತಾವಂತಃ । ವೈ ।

ದೇವಾಃ ।

---

**ಒಂಬತ್ತು, ಹತ್ತು ಹಾಗೂ ಹನ್ನೊಂದನೆಯ ಸ್ತೋಮಭಾಗಮಂತ್ರಗಳ ವಿವರಣೆ**

| | |
|---|---|
| **ಉಶಿಕ್ ಅಸಿ** | [ವಸುರೂಪದೇವನೇ!] ನೀನು ಕಾಮನೆಗಳಿಗೆ ಕಾರಣನಾಗಿರುವೆ. |
| **ವಸುಭ್ಯಃ ತ್ವಾ** | ವಸುಗಳ ಪ್ರೀತಿಗಾಗಿ ನಿನ್ನನ್ನು ಸ್ಮರಿಸುತ್ತೇನೆ. |
| **ವಸೂನ್ ಜಿನ್ವ** | ನೀನು ವಸುದೇವತೆಗಳನ್ನು ತೃಪ್ತಿಪಡಿಸು. |
| [ಪ್ರಕೇತಃ ಅಸಿ ರುದ್ರೇಭ್ಯಃ ತ್ವಾ ರುದ್ರಾನ್ ಜಿನ್ವ ಸುದೀತಿಃ ಅಸಿ ಆದಿತ್ಯೇಭ್ಯಃ ತ್ವಾ ಆದಿತ್ಯಾನ್ ಜಿನ್ವ] **ಇತಿ ಆಹ** | [ರುದ್ರರೂಪನೇ!] ನೀನು ಪ್ರಕೇತನಾಗಿದ್ದೀಯೆ. ರುದ್ರಪ್ರೀತಿಗಾಗಿ ನಿನ್ನನ್ನು ಸ್ಮರಿಸುತ್ತೇನೆ. ರುದ್ರರನ್ನು ಸಂತೋಷಪಡಿಸು . ಆದಿತ್ಯದೇವನೇ! ನೀನು ಸುದೀತಿರೂಪನು. ಆದಿತ್ಯಪ್ರೀತಿಗಾಗಿ ನಿನ್ನನ್ನು ಸ್ಮರಿಸುತ್ತೇನೆ. ಆದಿತ್ಯರನ್ನು ಸಂತೋಷಪಡಿಸು] ಹೀಗೆ ಮಂತ್ರಸಮೂಹವು ಹೇಳುತ್ತದೆ. |
| **ಅಷ್ಟೌ ವಸವಃ ಏಕಾದಶ ರುದ್ರಾಃ ದ್ವಾದಶ ಆದಿತ್ಯಾಃ** | ವಸುದೇವತೆಗಳು ಎಂಟು ಮಂದಿ; ರುದ್ರರು ಹನ್ನೊಂದು ಮಂದಿ; ಆದಿತ್ಯರು ಹನ್ನೆರಡು ಮಂದಿ. |
| **ಏತಾವಂತಃ ವೈ ದೇವಾಃ** | ದೇವತೆಗಳು ಇಷ್ಟು ಜನರೇ. |

ಸ್ತೇಭ್ಯ ಏವ ಯಜ್ಞಂ ಪ್ರಾಹೌಜೋಽಸಿ ಪಿತೃಭ್ಯಸ್ತ್ವಾ

ಪಿತೄಞ್ಜಿನ್ವೇತ್ಯಾಹ ದೇವಾನೇವ ಪಿತೄನನು ಸಂತನೋತಿ

---

ತೇಭ್ಯಃ । ಏವ । ಯಜ್ಞಮ್ । ಪ್ರೇತಿ । ಆಹ । ಓಜಃ । ಅಸಿ । ಪಿತೃಭ್ಯ ಇತಿ ಪಿತೃ-ಭ್ಯಃ ।

ತ್ವಾ । ಪಿತೄನ್ । ಜಿನ್ವ । ಇತಿ । ಆಹ । ದೇವಾನ್ । ಏವ । ಪಿತೄನ್ । ಅನು । ಸಮಿತಿ ।

ತನೋತಿ ।

---

| | |
|---|---|
| ತೇಭ್ಯಃ ಏವ ಯಜ್ಞಮ್ ಪ್ರಾಹ | ಆ ದೇವತೆಗಳ ಪ್ರೀತಿಗಾಗಿಯೇ ಹೋತೃವು ಯಜ್ಞವನ್ನು ಸಮರ್ಪಿಸುತ್ತಾನೆ. |

**ಹನ್ನೆರಡನೆಯ ಸ್ತೋಮಭಾಗಮಂತ್ರದ ವಿವರಣೆ**

| | |
|---|---|
| ಓಜೋಽಸಿ | [ಪಿತೃಪಾಲಕನೇ!] ನೀನು ಬಲಸ್ವರೂಪನಾಗಿದ್ದೀಯೆ. |
| ಪಿತೃಭ್ಯಃ ತ್ವಾ ಪಿತೄನ್ ಜಿನ್ವ ಇತಿ ಆಹ | ಪಿತೃಗಳಿಗಾಗಿ [ಪಿತೃಪ್ರೀತಿಗಾಗಿ] ನಿನ್ನನ್ನು ಸ್ಮರಿಸುತ್ತೇನೆ. ಪಿತೃದೇವತೆಗಳನ್ನು ತೃಪ್ತಿಪಡಿಸು. ಹೀಗೆ ಮಂತ್ರವು ಹೇಳುತ್ತದೆ. |
| ದೇವಾನ್ ಏವ ಪಿತೄನ್ ಅನು ಸಂ ತನೋತಿ | ದೇವತೆಗಳನ್ನು ಅನುಸರಿಸಿ ನಿರಂತರವಾಗಿ ಪಿತೃಗಳನ್ನೂ ವಿಸ್ತರಿಸಿದವನಾಗುತ್ತಾನೆ. |

---

ವ್ಯಾಖ್ಯಾನವನ್ನು ಮಾಡಲಾಗಿದೆ. ಹಾಗೆಯೇ ಮುಂದಿನ ಮಂತ್ರಗಳ ವ್ಯಾಖ್ಯಾನವನ್ನೂ ಮಾಡಲಾಗಿದೆ.

ಈ ಮಂತ್ರಗಳಲ್ಲಿ ಮೊದಲು ಆದಿತ್ಯನನ್ನು ಸ್ಮರಿಸಲಾಗಿದೆ. ಅವನು ಸರ್ವಸ್ವರೂಪನು. ಉಳಿದ ಮಂತ್ರಗಳಲ್ಲಿ ಧರ್ಮ ಮೊದಲಾದುದನ್ನು ಸ್ಮರಿಸಲಾಗಿದೆ.

ಆಯಾ ಸ್ತೋಮಗಾನಗಳ ಆರಂಭದಲ್ಲಿ ಬ್ರಹ್ಮನ ಅನುಮತಿಯಾದ ಅನಂತರ ಬಹಿಷ್ಪವಮಾನಾದಿಸ್ತೋತ್ರಗಳನ್ನು ಉದ್ಗಾತೃಗಣದವರು ಹೇಳುತ್ತಾರೆ.

ತಂತುರಸಿ ಪ್ರಜಾಭ್ಯಸ್ತ್ವಾ ಪ್ರಜಾ ಜಿನ್ವೇ[ಜಿನ್ವ(೭) ಇತ್ಯಾಹ]

ತ್ಯಾಹ ಪಿತೃನೇವ ಪ್ರಜಾ ಅನು ಸಂತನೋತಿ

---

ತಂತುಃ । ಅಸಿ । ಪ್ರಜಾಭ್ಯ ಇತಿ ಪ್ರ–ಜಾಭ್ಯಃ । ತ್ವಾ । ಪ್ರಜಾ ಇತಿ ಪ್ರ–ಜಾಃ । ಜಿನ್ವ ।(೭)। ಇತಿ । ಆಹ । ಪಿತೄನ್ । ಏವ । ಪ್ರಜಾ ಇತಿ ಪ್ರ–ಜಾಃ । ಅನು । ಸಮಿತಿ । ತನೋತಿ ।

---

**ಹದಿಮೂರನೆಯ ಸ್ತೋಮಭಾಗಮಂತ್ರದ ವಿವರಣೆ**

| | |
|---|---|
| **ತಂತುಃ ಅಸಿ** | [ಪ್ರಜಾಭಿಮಾನಿದೇವನೇ!] ನೀನು ಪುತ್ರಪೌತ್ರಾದಿ ಕಾರಣವಾದ ತಂತುಸ್ವರೂಪನಾಗಿದ್ದೀಯೆ. |
| **ಪ್ರಜಾಭ್ಯಃ ತ್ವಾ** | ಪ್ರಜಾವೃದ್ಧಿಗಾಗಿ ನಿನ್ನನ್ನು ಸ್ಮರಿಸುತ್ತೇನೆ. |
| **ಪ್ರಜಾಃ ಜಿನ್ವ ಇತಿ ಆಹ** | ಪ್ರಜೆಗಳನ್ನು ಸಂತೋಷಪಡಿಸು ಎಂದು ಈ ಮಂತ್ರವು ಹೇಳುತ್ತದೆ. |
| **ಪಿತೄನ್ ಏವ ಪ್ರಜಾಃ ಅನು ಸಂತನೋತಿ** | ಈ ಮಂತ್ರದಿಂದ ಪಿತೃದೇವತೆಗಳನ್ನೇ ಅನುಸರಿಸಿ ನಿರಂತರವಾಗಿ ಪುತ್ರ–ಪೌತ್ರಾದಿಪ್ರಜೆಗಳನ್ನೂ ವೃದ್ಧಿಗೊಳಿಸುತ್ತಾನೆ. |

---

ಈ ಬ್ರಾಹ್ಮಣದಲ್ಲಿ ಅನ್ವಿತಿರಸಿ ಎಂಬ ಪ್ರತೀಕವನ್ನು ಮಾತ್ರವೇ ಹೇಳಿದ್ದರೂ **'ಸಂಧಿರಸಿ ಅಂತರಿಕ್ಷಾಯ ತ್ವಾ ಅಂತರಿಕ್ಷಂ ಜಿನ್ವ ಪ್ರತಿಧಿಃ ಅಸಿ ಪೃಥಿವ್ಯೈ ತ್ವಾ ಪೃಥಿವೀಂ ಜಿನ್ವ'** ಎಂಬ ಮಂತ್ರಗಳನ್ನು ಜೋಡಿಸಿಕೊಳ್ಳಬೇಕು. ಆ ಮಂತ್ರಗಳು ಅಂತರಿಕ್ಷಾಭಿಮಾನಿ–ಭೂಲೋಕಾಭಿಮಾನಿದೇವತೆಗಳನ್ನು ಪ್ರಾರ್ಥಿಸುತ್ತವೆ.

ಇಲ್ಲಿ ದ್ಯುಲೋಕವನ್ನು ಮಾತ್ರ ಹೇಳಿದ್ದರೂ ಅಂತರಿಕ್ಷ–ಭೂಲೋಕಾಭಿಮಾನಿ ದೇವತೆಗಳನ್ನೂ ಗಮನದಲ್ಲಿಟ್ಟುಕೊಂಡು 'ಏಭ್ಯಃ ಏವ ಲೋಕೇಭ್ಯಃ' ಎಂದು ಈ ಮಂತ್ರವಿವರಣೆಯು ಹೇಳುತ್ತದೆ.

ಪೃತನಾಷಾಡಸಿ ಪಶುಭ್ಯಸ್ತ್ವಾ ಪಶೂಞ್ಜಿನ್ವೇತ್ಯಾಹ ಪ್ರಜಾ ಏವ ಪಶೂನನು ಸಂತನೋತಿ ರೇವದಸ್ಯೋಷಧೀಭ್ಯಸ್ತ್ವಾ–

---

ಪೃತನಾಷಾಟ್ । ಅಸಿ । ಪಶುಭ್ಯ ಇತಿ ಪಶು–ಭ್ಯಃ । ತ್ವಾ । ಪಶೂನ್ । ಜಿನ್ವ । ಇತಿ । ಆಹ । ಪ್ರಜಾ ಇತಿ ಪ್ರ–ಜಾಃ । ಏವ । ಪಶೂನ್ । ಅನು । ಸಮಿತಿ । ತನೋತಿ । ರೇವತ್ । ಅಸಿ । ಓಷಧೀಭ್ಯ ಇತ್ಯೋಷಧಿ–ಭ್ಯಃ । ತ್ವಾ ।

---

## ಹದಿನಾಲ್ಕನೆಯ ಸ್ತೋಮಭಾಗಮಂತ್ರದ ವಿವರಣೆ

| | |
|---|---|
| **ಪೃತನಾಷಾಟ್ ಅಸಿ** | [ಪಶುಪಾಲಕದೇವನೇ!] ನಮ್ಮ ಪಶುಗಳನ್ನು ಅಪಹರಿಸುವ ಶತ್ರುಸೇನೆಯನ್ನು ಸೋಲಿಸತಕ್ಕವನಾಗಿದ್ದೀಯೆ. |
| **ಪಶುಭ್ಯಃ ತ್ವಾ** | ಪಶುಗಳಿಗಾಗಿ ನಿನ್ನ ಸ್ಮರಣೆ ಮಾಡುತ್ತೇನೆ. |
| **ಪಶೂನ್ ಜಿನ್ವ** | ಪಶುಗಳನ್ನು ರಕ್ಷಿಸಿ, ಸಂತೋಷಪಡಿಸು. |
| **ಇತಿ ಆಹ** | ಹೀಗೆಂದು ಈ ಮಂತ್ರವು ಹೇಳುತ್ತದೆ. |
| **ಪ್ರಜಾಃ ಏವ ಪಶೂನ್ ಅನು ಸಂತನೋತಿ** | ಪ್ರಜೆಗಳನ್ನೇ ಅನುಸರಿಸಿ[ಅವರ ಸುಖಕ್ಕಾಗಿ]ಪಶುಗಳನ್ನು ಹೋತೃವು ಈ ಮಂತ್ರದಿಂದ ವೃದ್ಧಿಗೊಳಿಸುತ್ತಾನೆ. |

## ಹದಿನೈದನೆಯ ಸ್ತೋಮಭಾಗದ ವಿವರಣೆ

| | |
|---|---|
| **ರೇವತ್ ಅಸಿ** | [ಓಷಧಿಪಾಲಕನೇ!] ನೀನು ಧನವುಳ್ಳವನಾಗಿದ್ದೀಯೆ. |
| **ಓಷಧೀಭ್ಯಃ ತ್ವಾ** | ಓಷಧಿ(ಸಸ್ಯ)ಗಳಿಗಾಗಿ ನಿನ್ನನ್ನು ಸ್ಮರಿಸುತ್ತೇನೆ. |

---

ವೃಷ್ಟ್ಯಭಿಮಾನಿದೇವನನ್ನೂ ಹೀಗೆಯೇ ಸ್ಮರಿಸಲಾಗಿದೆ.

'ಪ್ರವಾಸಿ–ಅನುವಾಸಿ' ಎಂಬಲ್ಲಿ ಅಹರಭಿಮಾನಿದೇವತೆಯು ಪುರುಷಪ್ರತೀಕವಾಗಿದೆ. ರಾತ್ರಿಯು ಸ್ತ್ರೀಪ್ರತೀಕವಾಗಿದೆ. ಈ ಮಂತ್ರಗಳ ಪ್ರವಚನದಿಂದ ಯುಗ್ಮ ಸಂಪತ್ತಿಯುಂಟಾಗುತ್ತದೆ. ಇದನ್ನು ಪ್ರತೀಕಗ್ರಹಣದಿಂದ ವಿವರಿಸಲಾಗಿದೆ.

–ಷಧೀರ್ಜಿನ್ವೇತ್ಯಾಹೌಷಧೀಷ್ವೇವ ಪಶೂನ್ಪ್ರತಿಷ್ಠಾಪಯತ್ಯ
ಭಿಜಿದಸಿ ಯುಕ್ತಗ್ರಾವೇಂದ್ರಾಯ ತ್ವೇಂದ್ರಂ ಜಿನ್ವೇತ್ಯಾಹಾ–

---

ಓಷಧೀಃ । ಜಿನ್ವ । ಇತಿ । ಆಹ । ಓಷಧೀಷು । ಏವ । ಪಶೂನ್ । ಪ್ರತೀತಿ । ಸ್ಥಾಪಯತಿ । ಅಭಿಜಿದಿತ್ಯಭಿ–ಜಿತ್ । ಅಸಿ । ಯುಕ್ತಗ್ರಾವೇತಿ ಯುಕ್ತ–ಗ್ರಾವಾ । ಇಂದ್ರಾಯ । ತ್ವಾ । ಇಂದ್ರಮ್ । ಜಿನ್ವ । ಇತಿ । ಆಹ ।

---

| | |
|---|---|
| **ಓಷಧೀಃ ಜಿನ್ವ** | ಓಷಧಿಗಳನ್ನು ಸಂತೋಷಪಡಿಸು. |
| **ಇತಿ ಆಹ** | ಹೀಗೆಂದು ಈ ಮಂತ್ರವು ಹೇಳುತ್ತದೆ. |
| **ಓಷಧೀಷು ಏವ ಪಶೂನ್ ಪ್ರತಿಷ್ಠಾಪಯತಿ** | [ಈ ಮಂತ್ರಪಾಠದಿಂದ ಹೋತೃವು] ಸಸ್ಯಸಮೃದ್ಧಿಯನ್ನು ಉಂಟುಮಾಡಿ ಪಶುಗಳು ಚೆನ್ನಾಗಿರುವಂತೆ ಮಾಡುತ್ತಾನೆ. |

## ಹದಿನಾರನೆಯ ಸ್ತೋಮಭಾಗಮಂತ್ರದ ವಿವರಣೆ

| | |
|---|---|
| **ಅಭಿಜಿತ್ ಅಸಿ** | *[ಎಲೈ ವಜ್ರವೇ!] ನೀನು ಸರ್ವತ್ರ ಜಯಶೀಲನಾಗಿರುವೆ. |
| **ಯುಕ್ತಗ್ರಾವಾ** | ಒಟ್ಟುಗೂಡಿಸಿದ ಕಲ್ಲುಗಳಂತೆ ನೀನು ಗಟ್ಟಿಯಾಗಿರತಕ್ಕವನು. |
| **ಇಂದ್ರಾಯ ತ್ವಾ** | [ಇಂತಹ ವಜ್ರರೂಪನಾದ] ನಿನ್ನನ್ನು ಇಂದ್ರನಿಗಾಗಿ ಸ್ಮರಿಸುತ್ತೇನೆ. |
| **ಇಂದ್ರಮ್ ಜಿನ್ವ** | ನೀನೂ ಪ್ರೀತನಾಗು. ಇಂದ್ರನನ್ನೂ ಸುಪ್ರೀತನಾಗುವಂತೆ ಮಾಡು. |
| **ಇತಿ ಆಹ** | ಹೀಗೆಂದು ಈ ಮಂತ್ರಭಾಗವು ಹೇಳುತ್ತದೆ. |

---

* ಈ ಮಂತ್ರದ ಬ್ರಾಹ್ಮಣದಲ್ಲಿ ವಜ್ರಪ್ರಹಾರರೂಪವಾಗಿ ಈ ಮಂತ್ರವನ್ನು ವಿವರಿಸಿರುವುದರಿಂದ ಇಲ್ಲಿಯೂ ಅದನ್ನು ಅನುಸರಿಸಿದೆ.

ಭಿಜಿತ್ಯಾ ಅಧಿಪತಿರಸಿ ಪ್ರಾಣಾಯ ತ್ವಾ

ಪ್ರಾಣ[ಪ್ರಾಣಮ್(ಲ)ಜಿನ್ವೇತ್ಯಾ]ಇಜ್ಜಿನ್ವೇತ್ಯಾಹ

ಪ್ರಜಾಸ್ವೇವ ಪ್ರಾಣಾನ್ದಧಾತಿ

---

ಅಭಿಜಿತ್ಯಾ ಇತ್ಯಭಿ-ಜಿತ್ಯೈ । ಅಧಿಪತಿರಿತ್ಯಧಿ-ಪತಿಃ । ಅಸಿ । ಪ್ರಾಣಾಯೇತಿ ಪ್ರ-ಅನಾಯ । ತ್ವಾ । ಪ್ರಾಣಮಿತಿ ಪ್ರ-ಅನಮ್ ।(ಲ)। ಜಿನ್ವ । ಇತಿ । ಆಹ । ಪ್ರಜಾಸ್ವಿತಿ ಪ್ರ-ಜಾಸು । ಏವ । ಪ್ರಾಣಾನಿತಿ ಪ್ರ-ಅನಾನ್ । ದಧಾತಿ ।

---

| | |
|---|---|
| ಅಭಿಜಿತ್ಯಾ | [ಹೋತೃವು ಈ ಮಂತ್ರಪಾಠದಿಂದ] ಯಜಮಾನನ ಸರ್ವತೋಮುಖವಾದ ಜಯಕ್ಕೆ ಕಾರಣನಾಗುತ್ತಾನೆ. |

ಹದಿನೇಳನೆಯ ಸ್ತೋಮಭಾಗಮಂತ್ರದ ವಿವರಣೆ ಹಾಗೂ ಹದಿನೆಂಟು, ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಸ್ತೋಮಭಾಗಗಳ ಸಂಯುಕ್ತವಿವರಣೆ

| | |
|---|---|
| ಅಧಿಪತಿಃ ಅಸಿ | [ಪ್ರಾಣಾಭಿಮಾನಿದೇವನೇ!] ನೀನು ಪ್ರಾಣಗಳ ರಕ್ಷಕನಾಗಿರುವೆ |
| ಪ್ರಾಣಾಯ ತ್ವಾ | ಪ್ರಾಣಧಾರಣೆಗಾಗಿ ನಿನ್ನನ್ನು ಸ್ಮರಿಸುತ್ತೇನೆ. ನೀನು ಪ್ರಾಣವನ್ನು ಸಂತೋಷಪಡಿಸು. |
| ಪ್ರಾಣಮ್ ಜಿನ್ವ [ಯಂತಾಸಿ ಅಪಾನಾಯ ತ್ವಾ ಅಪಾನಮ್ ಜಿನ್ವ ಸ್ವರ್ಗಂಸರ್ಪೋಽಸಿ ಚಕ್ಷುಷೇ ತ್ವಾ ಚಕ್ಷುಃ ಜಿನ್ವ ವಯೋಧಾಃ ಅಸಿ ಶ್ರೋತ್ರಾಯ ತ್ವಾ ಶ್ರೋತ್ರಮ್ ಜಿನ್ವ] ಇತಿ ಆಹ ಪ್ರಜಾಸು ಏವ ಪ್ರಾಣಾನ್ ದಧಾತಿ | ಹೀಗೆ ಈ ಮಂತ್ರಸಮೂಹವು ಹೇಳುತ್ತದೆ. ಈ ಮಂತ್ರಪಾಠದಿಂದ ಹೋತೃವು ಪ್ರಜೆಗಳಲ್ಲಿ ಪ್ರಾಣ, ಅಪಾನ, ಚಕ್ಷುಸ್ಸು ಹಾಗೂ ಶ್ರೋತ್ರಗಳನ್ನು ನೆಲೆಗೊಳಿಸುತ್ತಾನೆ. |

ತ್ರಿವೃದಸಿ ಪ್ರವೃದಸೀತ್ಯಾಹ ಮಿಥುನತ್ವಾಯ

ಸಗ್ಂರೋಹೋಽಸಿ

---

ತ್ರಿವೃದಿತಿ ತ್ರಿ-ವೃತ್ । ಅಸಿ । ಪ್ರವೃದಿತಿ ಪ್ರ-ವೃತ್ । ಅಸಿ । ಇತಿ । ಆಹ ।

ಮಿಥುನತ್ವಾಯೇತಿ ಮಿಥುನ-ತ್ವಾಯ । ಸಗ್ಂರೋಹ ಇತಿ ಸಮ್-ರೋಹಃ । ಅಸಿ ।

---

ಇಪ್ಪತ್ತೊಂದರಿಂದ ಇಪ್ಪತ್ತನಾಲ್ಕನೆಯವರೆಗೆ ನಾಲ್ಕು ಸ್ತೋಮಭಾಗ ಮಂತ್ರಗಳ ವಿವರಣೆ

| | |
|---|---|
| **ತ್ರಿವೃತ್ ಅಸಿ** | [ಪ್ರಜೋತ್ಪತ್ತಿಸಾಧಕವಾದ ಸಂಯೋಗಭಾವಪ್ರವರ್ತಕ ದೇವನೇ!] ನೀನು ತ್ರೈಗುಣ್ಯಯುಕ್ತನಾಗಿದ್ದೀಯೆ. |
| **ಪ್ರವೃತ್ ಅಸಿ** | ಪ್ರವೃತ್ತಿಸ್ವರೂಪನಾಗಿದ್ದೀಯೆ. |
| [ಸಂವೃತ್ ಅಸಿ, ವಿವೃತ್ ಅಸಿ] | [ಸಂಯೋಗಸಮಾಪ್ತಿರೂಪನೂ, ವಿಶ್ಲೇಷರೂಪನೂ ಆಗಿರುತ್ತೀಯೆ] |
| **ಇತಿ ಆಹ** | ಹೀಗೆ ಈ ನಾಲ್ಕು ಮಂತ್ರಗಳ ಸಮೂಹವು ಹೇಳುತ್ತದೆ. |
| **ಮಿಥುನತ್ವಾಯ** | ಇದು ಮಿಥುನೀಭಾವಕ್ಕೆ ಸಾಧನವಾಗುತ್ತದೆ. |

ಇಪ್ಪತ್ತೈದರಿಂದ ಇಪ್ಪತ್ತೆಂಟರವರೆಗಿನ ನಾಲ್ಕು ಸ್ತೋಮಭಾಗಮಂತ್ರಗಳ ವಿವರಣೆ

| | |
|---|---|
| **ಸಂರೋಹಃ ಅಸಿ** | [ಪ್ರಜನನವ್ಯಾಪಾರಪ್ರವರ್ತಕದೇವನೇ!] ನೀನು ಗರ್ಭಾಭಿವ್ಯಕ್ತಿರೂಪನಾಗಿದ್ದೀಯೆ. |

---

ವಸುರೂಪದೇವನ ಮಂತ್ರದ ಪ್ರತೀಕವನ್ನು ಗ್ರಹಿಸಿದ್ದರೂ ರುದ್ರ ಹಾಗೂ ಆದಿತ್ಯರ ಮಂತ್ರಗಳಿಗೂ ಅದು ಸೂಚಕವಾಗಿದೆ. ಆ ದೇವತೆಗಳ ಪ್ರೀತಿಗಾಗಿ ಯಜ್ಞವನ್ನು ಹೋತೃವು ಸಮರ್ಪಿಸುತ್ತಾನೆ.

ಪಿತೃಪಾಲಕದೇವನೇ! ನೀನು ಬಲಸ್ವರೂಪನಾಗಿದ್ದೀಯೆ. ಪಿತೃದೇವತೆಗಳನ್ನು ತೃಪ್ತಿಪಡಿಸು ಎಂದು ಈ ಮಂತ್ರವು ಹೇಳುತ್ತದೆ. ಈ ಮಂತ್ರದಿಂದ ಹೋತೃವು ಪಿತೃದೇವತೆಗಳನ್ನು ತೃಪ್ತಿಪಡಿಸಿದವನಾಗುತ್ತಾನೆ.

ನೀರೋಽಹೋಽಸೀತ್ಯಾಹ ಪ್ರಜಾತ್ಯೈ ವಸುಕೋಽಸಿ ವೇಷಶ್ರೀರಸಿ

---

ನೀರೋಹ ಇತಿ ನಿಃ-ರೋಹಃ । ಅಸಿ । ಇತಿ । ಆಹ । ಪ್ರಜಾತ್ಯಾ ಇತಿ ಪ್ರ-ಜಾತ್ಯೈ । ವಸುಕಃ । ಅಸಿ । ವೇಷಶ್ರೀರಿತಿ ವೇಷ-ಶ್ರೀಃ । ಅಸಿ ।

---

| | |
|---|---|
| **ನೀರೋಹಃ ಅಸಿ** | ಎಲ್ಲ ಅವಯವಗಳ ಅಭಿವ್ಯಕ್ತಿರೂಪನೂ ಆಗಿದ್ದೀಯೆ. |
| [ಪ್ರರೋಹಃ ಅಸಿ, ಅನುರೋಹಃ ಅಸಿ] | [ಮೊದಲನೆಯ ಮಗುವಿನ ಉತ್ಪತ್ತಿಗೂ, ಅನಂತರ ಹುಟ್ಟುವ ಮಕ್ಕಳ ಉತ್ಪತ್ತಿಗೂ ಕಾರಣನಾಗಿರುವೆ.] |
| **ಇತಿ ಆಹ ಪ್ರಜಾತ್ಯೈ** | ಹೀಗೆಂದು ಈ ಮಂತ್ರಸಮೂಹವು ಹೇಳುತ್ತದೆ. ಇದು ಒಳ್ಳೆಯ ಮಕ್ಕಳ ಉತ್ಪತ್ತಿಗೆ ಕಾರಣ ವಾಗುತ್ತದೆ. |

**ಕೊನೆಯ ಮೂರು [ಇಪ್ಪತ್ತೊಂಬತ್ತು, ಮೂವತ್ತು ಹಾಗೂ ಮೂವತ್ತೊಂದು] ಸ್ತೋಮಭಾಗಮಂತ್ರಗಳ ವಿವರಣೆ**

| | |
|---|---|
| **ವಸುಕಃ ಅಸಿ** | [ಉತ್ಪನ್ನಪ್ರಜಾಭಿಮಾನಿದೇವನೇ!] ನೀನು ಧನವಂತನಾಗಿದ್ದೀಯೆ. |
| **ವೇಷಶ್ರೀಃ ಅಸಿ** | ಗವಾಶ್ವಾದಿ ಬಹುರೂಪಗಳುಳ್ಳ ಸಿರಿವಂತನಾ ಗಿದ್ದೀಯೆ. |

---

ಪ್ರಜಾಭಿಮಾನಿದೇವತೆಯನ್ನು ಕುರಿತು ಹೇಳುವ ಈ ಮಂತ್ರದಿಂದ ಹೋತೃವು ಪ್ರಜಾವೃದ್ಧಿಯಾಗುವಂತೆ ಮಾಡುತ್ತಾನೆ.

ಪಶುಪಾಲಕದೇವನ ಸ್ಮರಣೆಯಿಂದ ಪ್ರಜೆಗಳ ಸುಖಕ್ಕಾಗಿ ಮಂತ್ರಪಾಠದಿಂದ ಹೋತೃವು ಪಶುಗಳು ವರ್ಧಿಸುವಂತೆ ಮಾಡುತ್ತಾನೆ. ಪ್ರಜಾಕ್ಷೇಮಕ್ಕಾಗಿ ಪಶುಗಳೂ ಆವಶ್ಯಕವಷ್ಟೆ.

ಓಷಧಿಪಾಲಕದೇವನ ಸ್ಮರಣೆಯಿಂದ ಸಸ್ಯಗಳನ್ನುಂಟುಮಾಡುವುದರ ಮೂಲಕ ಪಶುಗಳು ಚೆನ್ನಾಗಿರುವಂತೆ ಮಾಡುತ್ತಾನೆ.

ವಸ್ಯಷ್ಟಿರಸೀತ್ಯಾಹ ಪ್ರತಿಷ್ಠಿತ್ಯೈ ॥೯–2॥

[ಜಿನ್ವೇತ್ಯವ ಪ್ರಜಾ ಜಿನ್ವ ಪ್ರಾಣಂ ತ್ರಿಗ್ಂಶಚ್ಚ ॥]

---

ವಸ್ಯಷ್ಟಿಃ । ಅಸಿ । ಇತಿ । ಆಹ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ ॥೯॥

---

ವಸ್ಯಷ್ಟಿಃ ಅಸಿ — ಗೃಹಾದಿವಾಸವ್ಯಾಪ್ತಿಯುಳ್ಳವನಾಗಿದ್ದೀಯೆ.

ಇತಿ ಆಹ ಪ್ರತಿಷ್ಠಿತ್ಯೈ — ಹೀಗೆ ಈ ಮಂತ್ರಸಮೂಹವು ಹೇಳುತ್ತದೆ. ಇದು ಯಜಮಾನನ ಒಳ್ಳೆಯ ಸ್ಥಿತಿಗೆ ಕಾರಣವಾಗುತ್ತದೆ.

---

ಐದನೆಯ ಕಾಂಡದಲ್ಲಿ 'ರಶ್ಮಿರಸಿ...' ಎಂಬ ಮಂತ್ರಗಳಿಗೆ ವ್ಯಾಖ್ಯಾನ ಮಾಡುವಾಗ ಬ್ರಾಹ್ಮಣದಲ್ಲಿ– 'ರಶ್ಮಿರಿತ್ಯೇವಾದಿತ್ಯಮಸೃಜತ' ಎಂದು ಆರಂಭಿಸಿ, 'ರೇವದಿತ್ಯೋಷಧೀಃ' ಎಂಬಲ್ಲಿಯವರೆಗೆ ಹದಿನೈದು ಮಂತ್ರಗಳಲ್ಲಿ 'ಅಸೃಜತ' ಎಂದು–ಸೃಷ್ಟಿಯನ್ನು ತಿಳಿಸುವುದರಿಂದ ಇಲ್ಲಿಯವರೆಗೆ ಈಶ್ವರಸೃಷ್ಟಿಯ ಆಯಾ ವಸ್ತುಗಳ ಅಭಿಮಾನಿಯಾದ ದೇವತೆಗಳ ಪರವಾಗಿ ವಿವರಣೆಯಾಯಿತು.

ಹದಿನಾರನೆಯ ಸ್ತೋಮಭಾಗದಲ್ಲಿ ಬ್ರಾಹ್ಮಣದಲ್ಲಿ ವಜ್ರ ಎಂಬ ಅರ್ಥವನ್ನಿಟ್ಟು ಕೊಂಡಿರುವುದರಿಂದ ಇಲ್ಲಿಯೂ ಹಾಗೆಯೇ ವಿವರಿಸಲಾಗಿದೆ.

ಹದಿನೇಳನೆಯದರಿಂದ ಇಪ್ಪತ್ತನೆಯ ಸ್ತೋಮಭಾಗಮಂತ್ರಗಳ ವಿವರಣೆಯಲ್ಲಿ 'ಪ್ರಾಣಾನ್' ಎಂಬುದಾಗಿ ಬಹುವಚನವಿರುವುದರಿಂದ ಅಪಾನ ಮುಂತಾದವುಗಳ ಗ್ರಹಣವೂ ಆಗುತ್ತದೆ. ಈ ಮಂತ್ರಪಾಠದಿಂದ ಪ್ರಜೆಗಳಲ್ಲಿ ಪ್ರಾಣಾದಿಗಳ ನೆಲೆಯಾಗುತ್ತದೆ.

ಇಪ್ಪತ್ತೊಂದರಿಂದ ಇಪ್ಪತ್ನಾಲ್ಕನೆಯ ಸ್ತೋಮಭಾಗದಮಂತ್ರದ ವಿವರಣೆಯಲ್ಲಿ ಎರಡು ಮಂತ್ರಗಳು ಲಾಕ್ಷಣಿಕವಾಗಿವೆ. ಈ ಮಂತ್ರಗಳಲ್ಲಿ ಸ್ತ್ರೀ, ಪುರುಷ, ಸಂಯೋಗ –ಇವು ತ್ರೈಗುಣ್ಯ. ಸಂಯೋಗಾನಂತರ ವ್ಯಾಪಾರವು ಪ್ರವೃತ್ತಿ. ಸಂಯೋಗಸಮಾಪ್ತಿ, ದಂಪತಿಗಳ ವಿಶ್ಲೇಷ–ಇವು ಪ್ರಜೋತ್ಪತ್ತಿಸಾಧನವಾದ ಮಿಥುನೀಭಾವದ ಭಾಗಗಳು. ಈ ನಾಲ್ಕು ಸ್ತೋಮಭಾಗಮಂತ್ರಗಳಿಂದ ಮಿಥುನೀಭಾವಸಂಪತ್ತಿ ಯಾಗುತ್ತದೆ.

ಇಪ್ಪತ್ತೈದರಿಂದ ಇಪ್ಪತ್ತೆಂಟರವರೆಗಿನ ಸ್ತೋಮಭಾಗಮಂತ್ರಗಳ ವಿವರಣೆಯಲ್ಲಿ

ಕೊನೆಯ ಎರಡು ಮಂತ್ರಗಳು ಲಾಕ್ಷಣಿಕವಾಗಿವೆ. ಇಲ್ಲಿಯೂ ಸಹ ಆಯಾ ಅಭಿಮಾನಿದೇವತೆಯ ಸ್ಮರಣೆಯಿಂದ ಒಳ್ಳೆಯ ಮಕ್ಕಳ ಉತ್ಪತ್ತಿಯಾಗುತ್ತದೆ.

ಇಪ್ಪತ್ತೊಂಬತ್ತರಿಂದ ಮೂವತ್ತೊಂದರವರೆಗಿನ ಕೊನೆಯ ಮೂರು ಸ್ತೋಮ ಭಾಗಮಂತ್ರಗಳಿಂದ ಯಜಮಾನನಿಗೆ ಒಳ್ಳೆಯ ಸ್ಥಿತಿಯುಂಟಾಗುತ್ತದೆ.

ಹೀಗೆ ಸೌಮಿಕಬ್ರಹ್ಮತ್ವದ ಮಂತ್ರಗಳನ್ನು ವಿವರಿಸಲಾಗಿದೆ. ಆ ರೀತಿಯ ಬ್ರಹ್ಮತ್ವವು ಈ ಅನುವಾಕದಲ್ಲಿ ಹೇಳಲ್ಪಟ್ಟಿದೆ.

## ॥ ತೃತೀಯೋಽನುವಾಕಃ ॥

ಅಗ್ನಿನಾ ದೇವೇನ ಪೃತನಾ ಜಯಾಮಿ ಗಾಯತ್ರೇಣ ಛಂದಸಾ ತ್ರಿವೃತಾ ಸ್ತೋಮೇನ ರಥಂತರೇಣ ಸಾಮ್ನಾ

---

ಅಗ್ನಿನಾ । ದೇವೇನ । ಪೃತನಾಃ । ಜಯಾಮಿ । ಗಾಯತ್ರೇಣ । ಛಂದಸಾ । ತ್ರಿವೃತೇತಿ ತ್ರಿ–ವೃತಾ । ಸ್ತೋಮೇನ । ರಥಂತರೇಣೇತಿ ರಥಮ್–ತರೇಣ । ಸಾಮ್ನಾ ।

---

ಎರಡನೆಯ ಅನುವಾಕದಲ್ಲಿ ಸೌಮಿಕಬ್ರಹ್ಮತ್ವದ ಸ್ತೋಮಭಾಗಮಂತ್ರಗಳ ವ್ಯಾಖ್ಯಾನವನ್ನು ತಿಳಿಸಲಾಯಿತು.

ಈ ಮೂರನೆಯ ಅನುವಾಕದಲ್ಲಿ ವಿಷ್ಣುವಿಕ್ರಮಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
| --- | --- |
| ಅಗ್ನಿನಾ ದೇವೇನ...ವಿನಾನ್ಯಾಮಾಮಿ ॥ | ಮೊದಲನೆಯ ವಿಷ್ಣುಕ್ರಮವನ್ನು ಅನುಷ್ಠಿಸಲು |

---

+ಅಗ್ನಿನಾ ದೇವೇನ=[ನಾನು] ಅಗ್ನಿದೇವನಿಂದಲೂ; ಗಾಯತ್ರೇಣ ಛಂದಸಾ= ಗಾಯತ್ರೀಛಂದಸ್ಸಿನಿಂದಲೂ; ತ್ರಿವೃತಾ ಸ್ತೋಮೇನ=ತ್ರಿವೃತ್ ಸ್ತೋಮ ದಿಂದಲೂ; ರಥಂತರೇಣ ಸಾಮ್ನಾ=ರಥಂತರಸಾಮದಿಂದಲೂ;

---

ಇಲ್ಲಿ ಮೂರು ವಿಷ್ಣುವಿಕ್ರಮಗಳಿಗೆ ಮಂತ್ರಗಳು ಇವೆ. ಎರಡನೆಯ ಮತ್ತು ಮೂರನೆಯ ಮಂತ್ರಗಳಲ್ಲಿ 'ಭ್ರಾತೃವ್ಯಾನ್ ಅಧರಾನ್ ಪಾದಯಾಮಿ' ಎಂಬುದರಿಂದ 'ಅತ್ಯೇನಾನ್ಯಾಮಾಮಿ' ವರೆಗಿನ ಮಂತ್ರಭಾಗವು ಅನುಷಂಗವಾಗಿ ಅನ್ವಯಿಸುತ್ತದೆ.

# ವಷಟ್ಕಾರೇಣ ವಜ್ರೇಣ ಪೂರ್ವಜಾನ್ಭ್ರಾತೃವ್ಯಾನಧರಾನ್ಪಾ ದಯಾಮ್ಯವೈನಾನ್ಬಾಧೇ ಪ್ರತ್ಯೇನಾನ್ನುದೇಽಸ್ಮಿನ್ಕ್ಷಯೇಽಸ್ಮಿ ನ್ಭೂಮಿಲೋಕೇ ಯೋಽಸ್ಮಾನ್ದ್ವೇಷ್ಟಿ

---

ವಷಟ್ಕಾರೇಣೇತಿ ವಷಟ್-ಕಾರೇಣ । ವಜ್ರೇಣ । ಪೂರ್ವಜಾನಿತಿ ಪೂರ್ವ-ಜಾನ್ । ಭ್ರಾತೃವ್ಯಾನ್ । ಅಧರಾನ್ । ಪಾದಯಾಮಿ । ಅವೇತಿ । ಏನಾನ್ । ಬಾಧೇ । ಪ್ರತೀತಿ । ಏನಾನ್ । ನುದೇ । ಅಸ್ಮಿನ್ನ್ । ಕ್ಷಯೇ । ಅಸ್ಮಿನ್ನ್ । ಭೂಮಿಲೋಕ ಇತಿ ಭೂಮಿ-ಲೋಕೇ । ಯಃ । ಅಸ್ಮಾನ್ । ದ್ವೇಷ್ಟಿ ।

---

ವಷಟ್ಕಾರೇಣ ವಜ್ರೇಣ=ವಷಟ್ಕಾರರೂಪವಾದ ವಜ್ರಾಯುಧದಿಂದಲೂ; ಪೃತನಾಃ ಜಯಾಮಿ=ಶತ್ರುಸೇನೆಯನ್ನು ಗೆಲ್ಲುತ್ತೇನೆ; ಪೂರ್ವಜಾನ್ ಭ್ರಾತೃವ್ಯಾನ್=ಹಿಂದೆ ಹುಟ್ಟಿರುವ ಹಗೆಗಳನ್ನು/ಪಿತೃಪಿತಾಮಹಕಾಲದಿಂದಲೂ ವೈರಿಗಳಾಗಿರುವವರನ್ನು; ಅಧರಾನ್ ಪಾದಯಾಮಿ=ನನಗಿಂತ ಕೀಳಾದವರನ್ನಾಗಿ ಮಾಡಿಕೊಳ್ಳುತ್ತೇನೆ; ಏನಾನ್ ಅವ ಬಾಧೇ=ಈ ಶತ್ರುಗಳನ್ನು ಅವಮಾನ ಮಾಡಿ ಹಿಂಸಿಸುತ್ತೇನೆ. ಏನಾನ್ ಪ್ರತಿ ನುದೇ=ಇವರನ್ನು ಪ್ರತ್ಯೇಕವಾಗಿ ನಾಶಪಡಿಸುತ್ತೇನೆ/ಪೀಡಿಸುತ್ತೇನೆ. ಅಸ್ಮಿನ್ ಕ್ಷಯೇ=ಈ ನಮ್ಮ ಮನೆಯಲ್ಲಿಯೂ; ಅಸ್ಮಿನ್ ಭೂಮಿಲೋಕೇ=ಈ ಭೂಲೋಕದಲ್ಲಿಯೂ; ಯಃ ಅಸ್ಮಾನ್ ದ್ವೇಷ್ಟಿ=ಯಾವನು ನಮ್ಮನ್ನು ದ್ವೇಷಿಸುತ್ತಾನೆಯೋ:

---

ಇವುಗಳು ಅಭಿಚಾರಕ್ಕಾಗಿ/ಶತ್ರುಹಿಂಸೆಗಾಗಿ ಒಂದು ಸಂವತ್ಸರಕಾಲ ಹೇಳಲ್ಪಡ ಬೇಕೆಂಬುದು ಭಟ್ಟಭಾಸ್ಕರಮತ. ಸೋಮಯಾಗದಲ್ಲಿಯೇ ಅನ್ವಯಿಸುತ್ತದೆಯೆಂಬುದು ಸಾಯಣರ ಮತ. ಬೇರೆಯ ಶತ್ರುಗಳಿರದಿದ್ದರೂ ಪಾಪವನ್ನೇ ಶತ್ರುವನ್ನಾಗಿ ಭಾವಿಸಿ ಅನುಷ್ಠಾನ ಮಾಡಬಹುದು. ಅಗ್ನಿ, ಇಂದ್ರ ಹಾಗೂ ವಿಶ್ವೇದೇವರುಗಳು ಶತ್ರುಸೈನ್ಯ ನಾಶಕರು. ಅವರಿಂದ ಶತ್ರುಸೈನ್ಯವು ನಾಶವಾಗುತ್ತದೆ.

# ಯಂ ಚ ವಯಂ ದ್ವಿಷ್ಮೋ ವಿಷ್ಣೋಃ ಕ್ರಮೇಣಾತ್ಯೇನಾ ನ್ಕ್ರಾಮಾಮೀಂದ್ರೇಣ ದೇವೇನ ಪೃತನಾ ಜಯಾಮಿ ತ್ರೈಷ್ಟುಭೇನ ಛಂದಸಾ ಪಂಚದಶೇನ ಸ್ತೋಮೇನ ಬೃಹತಾ ಸಾಮ್ನಾ ವಷಟ್ಕಾರೇಣ ವಜ್ರೇಣ[(೧೦)

---

ಯಮ್ । ಚ । ವಯಮ್ । ದ್ವಿಷ್ಮಃ । ವಿಷ್ಣೋಃ । ಕ್ರಮೇಣ । ಅತೀತಿ । ಏನಾನ್ । ಕ್ರಾಮಾಮಿ । ಇಂದ್ರೇಣ । ದೇವೇನ । ಪೃತನಾಃ । ಜಯಾಮಿ । ತ್ರೈಷ್ಟುಭೇನ । ಛಂದಸಾ । ಪಂಚದಶೇನೇತಿ ಪಂಚ-ದಶೇನ । ಸ್ತೋಮೇನ । ಬೃಹತಾ । ಸಾಮ್ನಾ । ವಷಟ್ಕಾರೇಣೇತಿ ವಷಟ್-ಕಾರೇಣ । ವಜ್ರೇಣ ।(೧೦)

---

| ಮಂತ್ರ | ವಿನಿಯೋಗ |
|---|---|
| ಇಂದ್ರೇಣ ದೇವೇನ...ಸಹಜಾನ್ [ಕ್ರಾಮಾಮಿ]॥ | ಎರಡನೆಯ ವಿಷ್ಣ್ವತಿಕ್ರಮವನ್ನು ಅನುಷ್ಠಿಸಲು |

---

ಯಮ್ ಚ ವಯಮ್ ದ್ವಿಷ್ಮಃ=ಮತ್ತು ನಾವು ಯಾವನನ್ನು ದ್ವೇಷಿಸುತ್ತೇವೆಯೋ; ಏನಾನ್=ಇವರನ್ನು; ವಿಷ್ಣೋಃ ಕ್ರಮೇಣ=ವಿಷ್ಣುರೂಪನಾದ ಯಜಮಾನನ ಹೆಜ್ಜೆಯಿಡುವಿಕೆಯಿಂದ; ಅತಿ ಕ್ರಾಮಾಮಿ=ಮೀರುತ್ತೇನೆ/ಮೆಟ್ಟಿ ನಡೆಯುತ್ತೇನೆ. +ಇಂದ್ರೇಣ ದೇವೇನ=[ನಾನು] ಇಂದ್ರದೇವನಿಂದಲೂ; ತ್ರೈಷ್ಟುಭೇನ ಛಂದಸಾ=ತ್ರಿಷ್ಟುಪ್ ಛಂದಸ್ಸಿನಿಂದಲೂ; ಪಂಚದಶೇನ ಸ್ತೋಮೇನ=ಪಂಚದಶಸ್ತೋಮದಿಂದಲೂ; ಬೃಹತಾ ಸಾಮ್ನಾ=ಬೃಹತ್ಸಾಮದಿಂದಲೂ; ವಷಟ್ಕಾರೇಣ ವಜ್ರೇಣ=ವಜ್ರರೂಪವಾದ ವಷಟ್ಕಾರದಿಂದಲೂ; ಪೃತನಾಃ ಜಯಾಮಿ=ಶತ್ರುಸೈನ್ಯಗಳನ್ನು ಸೋಲಿಸುತ್ತೇನೆ.

ಸಹಜಾನ್] ಸಹಜಾನ್ ವಿಶ್ವೇಭಿರ್ದೇವೇಭಿಃ ಪೃತನಾ ಜಯಾಮಿ ಜಾಗತೇನ ಛಂದಸಾ ಸಪ್ತದಶೇನ ಸ್ತೋಮೇನ ವಾಮದೇವ್ಯೇನ ಸಾಮ್ನಾ ವಷಟ್ಕಾರೇಣ ವಜ್ರೇಣಾ-

---

ಸಹಜಾನಿತಿ ಸಹ-ಜಾನ್ । ವಿಶ್ವೇಭಿಃ । ದೇವೇಭಿಃ । ಪೃತನಾಃ । ಜಯಾಮಿ । ಜಾಗತೇನ । ಛಂದಸಾ । ಸಪ್ತದಶೇನೇತಿ ಸಪ್ತ-ದಶೇನ । ಸ್ತೋಮೇನ । ವಾಮದೇವ್ಯೇನೇತಿ ವಾಮ-ದೇವ್ಯೇನ । ಸಾಮ್ನಾ । ವಷಟ್ಕಾರೇಣೇತಿ ವಷಟ್-ಕಾರೇಣ । ವಜ್ರೇಣ ।

---

| ಮಂತ್ರ | ವಿನಿಯೋಗ |
| --- | --- |
| ವಿಶ್ವೇಭಿರ್ದೇವೇಭಿಃ...ಅಹರಜಾನ್ [ಕ್ರಾಮಾಮಿ]॥ | ಮೂರನೆಯ ವಿಷ್ಣುಕ್ರಮವನ್ನು ಅನುಷ್ಠಿಸಲು |

---

ಸಹಜಾನ್ ಭ್ರಾತೃವ್ಯಾನ್=ಸವತಿ ತಾಯಿಯ ಮಕ್ಕಳಾದ/ಜ್ಞಾತಿಗಳಾದ ಶತ್ರುಗಳನ್ನು; ಅಧರಾನ್ ಪಾದಯಾಮಿ....ಅತ್ಯೇನಾನ್ ಕ್ರಾಮಾಮಿ=ನನಗಿಂತ ಕೀಳಾದವರನ್ನಾಗಿ ಮಾಡಿಕೊಳ್ಳುತ್ತೇನೆ. ಈ ಶತ್ರುಗಳನ್ನು ಅವಮಾನ ಮಾಡಿ ಹಿಂಸಿಸುತ್ತೇನೆ. ಇವರನ್ನು ಪ್ರತ್ಯೇಕವಾಗಿ ನಾಶಪಡಿಸುತ್ತೇನೆ/ಪೀಡಿಸುತ್ತೇನೆ. ಈ ನಮ್ಮ ಮನೆಯಲ್ಲಿಯೂ, ಈ ಭೂಲೋಕದಲ್ಲಿಯೂ ಯಾವನು ನಮ್ಮನ್ನು ದ್ವೇಷಿಸುತ್ತಾನೆಯೋ, ಮತ್ತು ನಾವು ಯಾವನನ್ನು ದ್ವೇಷಿಸುತ್ತೇವೆಯೋ, ಇವರನ್ನು ವಿಷ್ಣುರೂಪನಾದ ಯಜಮಾನನ ಹೆಜ್ಜೆಯಿಡುವಿಕೆಯಿಂದ ಮೀರುತ್ತೇನೆ/ಮೆಟ್ಟಿ ನಡೆಯುತ್ತೇನೆ. ✦**ವಿಶ್ವೇಭಿಃ ದೇವೇಭಿಃ**=[ನಾನು] ವಿಶ್ವೇದೇವರಿಂದಲೂ; **ಜಾಗತೇನ ಛಂದಸಾ**=ಜಗತೀಛಂದಸ್ಸಿನಿಂದಲೂ; **ಸಪ್ತದಶೇನ ಸ್ತೋಮೇನ**=ಸಪ್ತದಶಸ್ತೋಮದಿಂದಲೂ; **ವಾಮದೇವ್ಯೇನ ಸಾಮ್ನಾ**=ವಾಮದೇವ್ಯಸಾಮದಿಂದಲೂ; **ವಷಟ್ಕಾರೇಣ ವಜ್ರೇಣ**=ವಜ್ರದಂತೆ ಶತ್ರುನಾಶಕವಾದ ವಷಟ್ಕಾರದಿಂದಲೂ; **ಪೃತನಾಃ ಜಯಾಮಿ**=ಹಗೆಗಳ ಸೇನೆಯನ್ನು ಜಯಿಸುತ್ತೇನೆ.

-ಪರಜಾನಿಂದ್ರೇಣ ಸಯುಜೋ ವಯಗ್ಂ ಸಾಸಹ್ಯಾಮ

ಪೃತನ್ಯತಃ । ಘ್ನಂತೋ ವೃತ್ರಾಣ್ಯಪ್ರತಿ ॥

---

ಅಪರಜಾನಿತ್ಯಪರ-ಜಾನ್ । ಇಂದ್ರೇಣ । ಸಯುಜ ಇತಿ ಸ-ಯುಜಃ । ವಯಮ್ ।

ಸಾಸಹ್ಯಾಮ । ಪೃತನ್ಯತಃ ॥ ಘ್ನಂತಃ । ವೃತ್ರಾಣಿ । ಅಪ್ರತಿ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರೇಣ..ಭೂಯಾಸಮ್ ॥ | ಆಹವನೀಯೋಪಸ್ಥಾನವನ್ನು ಮಾಡಲು - ಅಪಸ್ತಂಬ |
| ಇಂದ್ರೇಣ...ಪ್ರತಿ ॥<br>ಯತ್ತೇ...ಹರಸ್ವೀ ಭೂಯಾಸಮ್ ॥ | ಶುಕ್ರ-ಮಂಥಿಗ್ರಹಗಳ ಅಧಿದ್ರವಣಕ್ಕಾಗಿ ಉಪಸ್ಥಾನಕ್ಕಾಗಿ -ಭ.ಭಾ.ಭಾ |

---

ಅಪರಜಾನ್ ಭ್ರಾತೃವ್ಯಾನ್= ಈಚೆಗೆ ಹುಟ್ಟಿರುವ ಶತ್ರುಗಳನ್ನು; ಅಧರಾನ್ ಪಾದಯಾಮಿ....ಅತ್ಯೇನಾನ್ ಕ್ರಾಮಾಮಿ=ನನಗಿಂತ ಕೀಳಾದವರನ್ನಾಗಿ ಮಾಡಿಕೊಳ್ಳುತ್ತೇನೆ. ಈ ಶತ್ರುಗಳನ್ನು ಅವಮಾನ ಮಾಡಿ ಹಿಂಸಿಸುತ್ತೇನೆ. ಇವರನ್ನು ಪ್ರತ್ಯೇಕವಾಗಿ ನಾಶಪಡಿಸುತ್ತೇನೆ/ಪೀಡಿಸುತ್ತೇನೆ. ಈ ನಮ್ಮ ಮನೆಯಲ್ಲಿಯೂ, ಈ ಭೂಲೋಕದಲ್ಲಿಯೂ ಯಾವನು ನಮ್ಮನ್ನು ದ್ವೇಷಿಸುತ್ತಾನೆಯೋ ಮತ್ತು ನಾವು ಯಾವನನ್ನು ದ್ವೇಷಿಸುತ್ತೇವೆಯೋ ಇವರನ್ನು ವಿಷ್ಣುರೂಪನಾದ ಯಜಮಾನನ ಹೆಜ್ಜೆಯಿಡುವಿಕೆಯಿಂದ ಮೀರುತ್ತೇನೆ/ಮೆಟ್ಟಿ ನಡೆಯುತ್ತೇನೆ. ✦[ಪರಮೈಶ್ವರ್ಯ ಯುಕ್ತನಾದ/ಇಂದ್ರನಾದ ಆಹವನೀಯಾಗ್ನಿಯೇ!]ಇಂದ್ರೇಣ ಸಯುಜಃ==ಇಂದ್ರ ನೊಡನೆ/ಅಗ್ನಿಯೊಡನೆ ಕೂಡಿರುವ; ವಯಮ್=ನಾವು; ವೃತ್ರಾಣಿ=ಶತ್ರುಗಳನ್ನು ಅಪ್ರತಿ =ನಮಗೆ ಪ್ರತಿಬಂಧಕರಾಗದಂತೆ; ಘ್ನಂತಃ=ಅಡಗಿಸುತ್ತಾ; ಪೃತನ್ಯತಃ=[ನಮ್ಮೊಡನೆ] ಯುದ್ಧ ಮಾಡಲು ಇಚ್ಛಿಸುವ [ಹಗೆಗಳನ್ನು]; ಸಾಸಹ್ಯಾಮ=ಸಹಿಸಿಕೊಳ್ಳುತ್ತೇವೆ.

---

ಮೂರು ಬಗೆಯ ಶತ್ರುಗಳಿರುತ್ತಾರೆ. ಅವರನ್ನು ಶ್ರುತಿಯಲ್ಲಿ ಪೂರ್ವಜರು, ಸಹಜರು

ಯತ್ತೇ ಅಗ್ನೇ ತೇಜಸ್ತೇನಾಹಂ ತೇಜಸ್ವೀ ಭೂಯಾಸಂ

ಯತ್ತೇ ಅಗ್ನೇ ವರ್ಚಸ್ತೇನಾಹಂ ವರ್ಚಸ್ವೀ ಭೂಯಾಸಂ

---

ಯತ್ । ತೇ । ಅಗ್ನೇ । ತೇಜಃ । ತೇನ । ಅಹಮ್ । ತೇಜಸ್ವೀ । ಭೂಯಾಸಮ್ ।

ಯತ್ । ತೇ । ಅಗ್ನೇ । ವರ್ಚಃ । ತೇನ । ಅಹಮ್ । ವರ್ಚಸ್ವೀ । ಭೂಯಾಸಮ್ ।

---

ಅಗ್ನೇ=ಹೇ! ಅಗ್ನಿದೇವನೇ! ಯತ್ ತೇ ತೇಜಃ=ನಿನ್ನ ಯಾವ ಕಾಂತಿ ಇದೆಯೋ; ತೇನ=ಅದರಿಂದ; ಅಹಮ್=ನಾನು; ತೇಜಸ್ವೀ ಭೂಯಾಸಮ್=ಕಾಂತಿಮಂತನಾಗುತ್ತೇನೆ. ಅಗ್ನೇ=ಎಲೈ! ಅಗ್ನಿಯೇ! ಯತ್ ತೇ ವರ್ಚಃ=ಯಾವ ನಿನ್ನ ಬಲವಿದೆಯೋ/ಅನ್ನವಿದೆಯೋ; ತೇನ=ಅದರಿಂದ; ಅಹಮ್=ನಾನು; ವರ್ಚಸ್ವೀ ಭೂಯಾಸಮ್=ಬಲವಂತನಾಗುತ್ತೇನೆ/ಅನ್ನವುಳ್ಳವನಾಗುತ್ತೇನೆ.

---

ಮತ್ತು ಅಪರಜರು ಎಂದು ಹೇಳಲಾಗಿದೆ. ಪಿತೃಪಿತಾಮಹಾದಿಕಾಲದಿಂದಲೂ ಯಾರೊಡನೆ ವೈರವೋ ಅವರು ಪೂರ್ವಜರು. ಸವತಿಯ ಮಕ್ಕಳಾದ ಜ್ಞಾತಿಗಳು ನಮ್ಮೊಡನೆಯೇ ಇರುವುದರಿಂದ ಸಹಜರು. ಈಗ ನಮ್ಮ ಕಾರ್ಯಕ್ಕೆ ವಿಘ್ನವನ್ನೊಡ್ಡುವವರು ಅಪರಜರು. ಅವರಲ್ಲಿ ಒಂದೊಂದು ಬಗೆಯವರನ್ನು ಒಂದೊಂದು ಅತಿಕ್ರಮದಿಂದ ಅಡಗಿಸುತ್ತೇನೆ ಎಂದು ಹೇಳಿ ಯಜಮಾನನು ಒಂದೊಂದು ಹೆಜ್ಜೆಯನ್ನಿಡಬೇಕು. ಇದರಿಂದ ಎಲ್ಲ ಶತ್ರುಗಳನ್ನೂ ಅಡಗಿಸಿದಂತಾಗುತ್ತದೆ.

ಎರಡನೆಯ ವಿಷ್ಣುತ್ರಿಕ್ರಮಣದಲ್ಲಿ ಇಂದ್ರ-ತ್ರಿಷ್ಟುಪ್ ಛಂದಸ್ಸು-ಪಂಚದಶಸ್ತೋಮ-ಬೃಹತ್ಸಾಮಗಳಿಂದಲೂ ವಷಟ್ಕಾರನೆಂಬ ವಜ್ರದಿಂದಲೂ ಸಹಜಶತ್ರುಗಳನ್ನು ಅಡಗಿಸುತ್ತಾನೆ.

ಮೂರನೆಯ ಅತಿಕ್ರಮದಲ್ಲಿ ವಿಶ್ವೇದೇವರು-ಜಗತೀಛಂದಸ್ಸು-ಸಪ್ತದಶಸ್ತೋಮ-ವಾಮದೇವ್ಯಸಾಮ ಮತ್ತು ವಜ್ರದಂತಹ ವಷಟ್ಕಾರದಿಂದ ಅಪರಜಶತ್ರುಗಳನ್ನು ಅಡಗಿಸುತ್ತಾನೆ.

ಹೇ! ಅಗ್ನಿದೇವನೇ! ನಿನ್ನ ತೇಜಸ್ಸು, ಬಲ, ಆಕರ್ಷಕವಾದ ವ್ಯಕ್ತಿತ್ವ, ಅನ್ನ, ಕಿರಣಗಳಂತಹ ತೇಜಸ್ಸು-ಇವುಗಳನ್ನು ನಿನ್ನ ಉಪಸ್ಥಾನ ಮಾಡುವುದರಿಂದ ನಾನು ಪಡೆಯುವೆನು.

ಯತ್ತೇ ಅಗ್ನೇ ಹರಸ್ತೇನಾಹಗ್ಂ ಹರಸ್ವೀ

ಭೂಯಾಸಮ್ ॥ ೧೧-3 ॥

ಬೃಹತಾ ಸಾಮ್ನಾ ವಷಟ್ಕಾರೇಣ ವಜ್ರೇಣ ಷಟ್ಚತ್ವಾರಿಗ್ಂಶಚ್ಚ ॥]

---

ಯತ್ । ತೇ । ಅಗ್ನೇ । ಹರಃ । ತೇನ । ಅಹಮ್ । ಹರಸ್ವೀ । ಭೂಯಾಸಮ್ ॥(೧೧)

---

ಅಗ್ನೇ=ಹೇ! ಅಗ್ನಿದೇವನೇ! ಯತ್ ತೇ ಹರಃ=ಯಾವ ನಿನ್ನ ಆಕರ್ಷಕವ್ಯಕ್ತಿತ್ವ ವಿದೆಯೋ [ಕಿರಣಗಳಂತಹ ವಿಶೇಷ ತೇಜಸ್ಸು]/ಬಲವಿದೆಯೋ; ತೇನ ಅಹಮ್ ಹರಸ್ವೀ ಭೂಯಾಸಮ್=ಅದರಿಂದ ನಾನು ಆಕರ್ಷಕವ್ಯಕ್ತಿತ್ವವುಳ್ಳವನಾಗುತ್ತೇನೆ/ ಬಲಶಾಲಿಯಾಗುತ್ತೇನೆ.

---

ಈ ಮಂತ್ರದಲ್ಲಿ ಇಂದ್ರಶಬ್ದವಿದ್ದರೂ ಅದಕ್ಕೆ ಅಗ್ನಿಯೆಂಬ ಅರ್ಥವನ್ನು ವಿವರಿಸಿದೆ. 'ಇದಿ ಪರಮೈಶ್ವರ್ಯೇ' ಎಂಬ ಧಾತುವಿನಿಂದ ಉಂಟಾದುದು ಇಂದ್ರಶಬ್ದ. ಈ ಅವಯವಾರ್ಥವನ್ನು ಇಟ್ಟುಕೊಂಡು ಈ ರೀತಿ ಹೇಳಲಾಗಿದೆ. 'ಐಂದ್ರ್ಯಾ ಗಾರ್ಹಪತ್ಯ ಮುಪತಿಷ್ಠತೇ' ಎಂಬ ವೈದಿಕಪ್ರಯೋಗದಲ್ಲಿಯೂ ಧಾತ್ವರ್ಥವನ್ನು ಗಮನಿಸಿ ಪ್ರಯೋಗಿಸಿರುವುದನ್ನು ಕಾಣಬಹುದು.

---

## ವಿನಿಯೋಗಸಂಗ್ರಹ

ಯಜಮಾನೋ[1]ಽಗ್ನಿನೇಂದ್ರೇಣ[2] ವಿಶ್ವೇಭಿ[3]ರ್ವಿಷ್ಣ್ವತಿಕ್ರಮಾನ್ ।
ಕ್ರಾಮತ್ಯುತ್ತರಯೋರ್ಭ್ರಾತೃವ್ಯಾನಿತ್ಯಾದ್ಯನುವರ್ತತೇ ॥
[4]ಇಂದ್ರೇ ಪೂರ್ವಾಗ್ನ್ಯುಪಸ್ಥಾನಂ ಮಂತ್ರಾಶ್ಚತ್ವಾರ ಈರಿತಾಃ ॥

ಅನುವಾಕದಲ್ಲಿರುವ ಮಂತ್ರಸಂಖ್ಯೆ-4

-5 ಭ.ಭಾ.ಭಾ

## ॥ ಚತುರ್ಥೋಽನುವಾಕಃ ॥

ಯೇ ದೇವಾ ಯಜ್ಞಹನೋ ಯಜ್ಞಮುಷಃ ಪೃಥಿವ್ಯಾ

ಮಧ್ಯಾಸತೇ । ಅಗ್ನಿರ್ಮಾ ತೇಭ್ಯೋ ರಕ್ಷತು ಗಚ್ಛೇಮ

ಸುಕೃತೋ ವಯಮ್ ॥

---

ಯೇ । ದೇವಾಃ । ಯಜ್ಞಹನ ಇತಿ ಯಜ್ಞ–ಹನಃ । ಯಜ್ಞಮುಷ ಇತಿ ಯಜ್ಞ–ಮುಷಃ । ಪೃಥಿವ್ಯಾಮ್ । ಅಧೀತಿ । ಆಸತೇ ॥ ಅಗ್ನಿಃ । ಮಾ । ತೇಭ್ಯಃ । ರಕ್ಷತು । ಗಚ್ಛೇಮ । ಸುಕೃತ ಇತಿ ಸು–ಕೃತಃ । ವಯಮ್ ॥

---

ಈ ಅನುವಾಕದಲ್ಲಿ ಅತಿಮೋಕ್ಷಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಯೇ ದೇವಾಃ...ವಯಮ್ । | ಮೊದಲಿನ ಎರಡು ಅತಿಮೋಕ್ಷಮಂತ್ರಗಳು |
| ಯೇ...ಯಜ್ಞಮುಷಃ...ವಯಮ್ ॥ | [ಅನುಷಂಗದಿಂದ ೨ ಮಂತ್ರಗಳು] |

---

+ಯೇ ಯಜ್ಞಹನಃ ದೇವಾಃ=ಯಜ್ಞಕ್ಕೆ ವಿಘಾತವನ್ನುಂಟುಮಾಡುವ ಯಾವ ಕ್ಷುದ್ರದೇವತೆಗಳು; ಪೃಥಿವ್ಯಾಮ್ ಅಧ್ಯಾಸತೇ=ಭೂಮಿಯಲ್ಲಿ ಇರುತ್ತಾರೆಯೋ; ಅಗ್ನಿಃ=ಅಗ್ನಿದೇವನು, ತೇಭ್ಯಃ=ಆಕ್ಷುದ್ರದೇವತೆಗಳಿಂದ/ದೆಸೆಯಿಂದ; ಮಾ ರಕ್ಷತು= ನನ್ನನ್ನು ಕಾಪಾಡಲಿ. ವಯಮ್=ನಾವು; ಸುಕೃತಃ=[ಉಪಹತಿಯಿಲ್ಲದೆ] ಉತ್ತಮ ಯಾಗರೂಪವಾದ ಒಳ್ಳೆಯ ಕರ್ಮಾನುಷ್ಠಾನ ಮಾಡಿರುವವರಾಗಿ; ಗಚ್ಛೇಮ= [ಯಜ್ಞಫಲವನ್ನು] ಹೊಂದುವೆವು/ಹೊಂದುತ್ತೇವೆ. ಯೇ ದೇವಾಃ ಯಜ್ಞಮುಷಃ= ಯಾವ ಕ್ಷುದ್ರದೇವತೆಗಳು ಯಜ್ಞಕ್ಕೆ ಸಂಬಂಧಿಸಿದ ವಸ್ತುಗಳನ್ನು ಅಪಹರಿಸುವವರಾಗಿ;

ಆऽಗನ್ಮ ಮಿತ್ರಾವರುಣಾ ವರೇಣ್ಯಾ ರಾತ್ರೀಣಾಂ ಭಾಗೋ ಯುವಯೋರ್ಯೋ ಅಸ್ತಿ । ನಾಕಂ ಗೃಹ್ಣಾನಾಸ್ಸುಕೃತಸ್ಯ ಲೋಕೇ ತೃತೀಯೇ ಪೃಷ್ಠೇ ಅಧಿ ರೋಚನೇ ದಿವಃ ॥

---

ಏತಿ । ಅಗನ್ಮ । ಮಿತ್ರಾವರುಣೇತಿ ಮಿತ್ರಾ-ವರುಣಾ । ವರೇಣ್ಯಾ । ರಾತ್ರೀಣಾಮ್ । ಭಾಗಃ । ಯುವಯೋಃ । ಯಃ । ಅಸ್ತಿ ॥ ನಾಕಮ್ । ಗೃಹ್ಣಾನಾಃ । ಸುಕೃತಸ್ಯೇತಿ ಸು-ಕೃತಸ್ಯ । ಲೋಕೇ । ತೃತೀಯೇ । ಪೃಷ್ಠೇ । ಅಧೀತಿ । ರೋಚನೇ । ದಿವಃ ॥

---

| ಮಂತ್ರ | ವಿನಿಯೋಗ |
|---|---|
| ಆಗನ್ಮ...ರೋಚನೇ ದಿವಃ ॥ | ಮೂರನೆಯ ಅತಿಮೋಕ್ಷಮಂತ್ರ. |

---

**ಪೃಥಿವ್ಯಾಮ್...ವಯಮ್**=ಭೂಮಿಯಲ್ಲಿ ಇರುತ್ತಾರೆಯೋ, ಅವರ ದೆಸೆಯಿಂದ ಅಗ್ನಿಯು ನನ್ನನ್ನು ಕಾಪಾಡಲಿ. ನಿರ್ವಿಘ್ನವಾಗಿ ಸತ್ಕರ್ಮಾನುಷ್ಠಾನವನ್ನು ಮಾಡಿದ ನಾವು ಯಜ್ಞಫಲವನ್ನು ಪಡೆಯುವೆವು.✚**ವರೇಣ್ಯಾ**=ಶ್ರೇಷ್ಠರಾದ; **ಮಿತ್ರಾವರುಣಾ**=ಮಿತ್ರಾವರುಣದೇವತೆಗಳೇ! **ರಾತ್ರೀಣಾಮ್**=[ಯಜ್ಞಕ್ಕೆ ಸಂಬಂಧಿಸಿದ] ರಾತ್ರಿಗಳ ಮಧ್ಯದಲ್ಲಿ; **ಯುವಯೋಃ**= ನಿಮ್ಮಿಬ್ಬರಿಗೆ ಸಂಬಂಧಿಸಿದ; **ಯಃ ಭಾಗಃ ಅಸ್ತಿ**=[ವಶಾನೂಬಂಧ್ಯಾಯಾಗಗಳ] ಯಾವ ಭಾಗವು ಇದೆಯೋ; [ಅದರಿಂದ] **ಅಧಿರೋಚನೇ**=ಅಧಿಕವಾಗಿ ಪ್ರಕಾಶಿಸುವ; **ದಿವಃ ಪೃಷ್ಠೇ**=ಸ್ವರ್ಗದ ಮೇಲಿರುವ; **ಸುಕೃತಸ್ಯ**=ಈ ಯಾಗದ ಫಲವಾದ; **ತೃತೀಯೇ ಲೋಕೇ**=[ಭೂಮಿ-ಅಂತರಿಕ್ಷ-ಸ್ವರ್ಗಗಳಲ್ಲಿ] ಮೂರನೆಯದಾದ ಸ್ವರ್ಗಲೋಕದಲ್ಲಿ; **ನಾಕಮ್ ಗೃಹ್ಣಾನಾಃ**=ಸ್ವರ್ಗ ಸುಖವನ್ನು ಅನುಭವಿಸುವವರಾಗಿ; **ಆಗನ್ಮ**=[ಸರ್ವಯಜ್ಞಫಲವನ್ನು] ನಾವು [ನಿಮ್ಮ ಅನುಗ್ರಹದಿಂದ] ಹೊಂದಿದವರಾಗುವೆವು.

---

ಇಲ್ಲಿ ಅನುಷಂಗದಿಂದ ಎರಡು ಮಂತ್ರಗಳಾಗಿವೆ. ಅವುಗಳ ಅರ್ಥವು ಹೀಗಿದೆ;

# ಯೇ ದೇವಾ ಯಜ್ಞಹನೋ ಯಜ್ಞಮುಷೋಽಂತರಿಕ್ಷೇಽಧ್ಯಾಸತೇ । ವಾಯುರ್ಮಾ ತೇಭ್ಯೋ ರಕ್ಷತು ಗಚ್ಛೇಮ ಸುಕೃತೋ ವಯಮ್ ॥

---

ಯೇ । ದೇವಾಃ । ಯಜ್ಞಹನ ಇತಿ ಯಜ್ಞ–ಹನಃ । ಯಜ್ಞಮುಷ ಇತಿ ಯಜ್ಞ–ಮುಷಃ । ಅಂತರಿಕ್ಷೇ । ಅಧೀತಿ । ಆಸತೇ ॥ ವಾಯುಃ । ಮಾ । ತೇಭ್ಯಃ । ರಕ್ಷತು । ಗಚ್ಛೇಮ । ಸುಕೃತ ಇತಿ ಸು–ಕೃತಃ । ವಯಮ್ ॥

---

| ಮಂತ್ರ | ವಿನಿಯೋಗ |
|---|---|
| **ಯೇ ದೇವಾಃ... ವಾಯುಃ...ವಯಮ್ ।** ಯೇ ದೇವಾಃ..**ಯಜ್ಞಮುಷಃ** ವಾಯುಃ..ವಯಮ್ ॥ | ನಾಲ್ಕು ಮತ್ತು ಐದನೆಯ ಅತಿಮೋಕ್ಷ ಮಂತ್ರಗಳು [ಅನುಷಂಗದಿಂದ ೨ ಮಂತ್ರಗಳು] |

---

✦**ಯೇ ಯಜ್ಞಹನಃ ದೇವಾಃ**=ಯಜ್ಞಕ್ಕೆ ವಿಘಾತವನ್ನುಂಟುಮಾಡುವ ಯಾವ ಕ್ಷುದ್ರದೇವತೆಗಳು; **ಅಂತರಿಕ್ಷೇ ಅಧಿ ಆಸತೇ**=ಅಂತರಿಕ್ಷದಲ್ಲಿ ಇರುವರೋ, **ವಾಯುಃ**=ವಾಯುದೇವನು; **ತೇಭ್ಯಃ**=ಆ ಕ್ಷುದ್ರದೇವತೆಗಳಿಂದ/ದೆಸೆಯಿಂದ; **ಮಾ ರಕ್ಷತು**=ನನ್ನನ್ನು ಕಾಪಾಡಲಿ; **ವಯಮ್**=ನಾವು; **ಸುಕೃತಃ**=[ಉಪಹತಿಯಿಲ್ಲದೆ] ಉತ್ತಮಯಾಗರೂಪವಾದ ಒಳ್ಳೆಯ ಕರ್ಮಾನುಷ್ಠಾನ ಮಾಡಿರುವವರಾಗಿ; **ಗಚ್ಛೇಮ**=[ಯಜ್ಞಫಲವನ್ನು] ಹೊಂದುವೆವು/ಹೊಂದುತ್ತೇವೆ; **ಯೇ ದೇವಾಃ ಯಜ್ಞಮುಷಃ**=ಯಾವ ಕ್ಷುದ್ರದೇವತೆಗಳು ಯಜ್ಞಕ್ಕೆ ಸಂಬಂಧಿಸಿದ ವಸ್ತುಗಳನ್ನು ಅಪಹರಿಸುವವರಾಗಿ; **ಅಂತರಿಕ್ಷೇ...ವಯಮ್**=ಅಂತರಿಕ್ಷದಲ್ಲಿ ಇರುತ್ತಾರೆಯೋ ಅವರ ದೆಸೆಯಿಂದ ವಾಯುವು ನನ್ನನ್ನು ಕಾಪಾಡಲಿ. ನಿರ್ವಿಘ್ನವಾಗಿ ಸತ್ಕರ್ಮಾನುಷ್ಠಾನ ಮಾಡಿದ ನಾವು ಯಜ್ಞಫಲವನ್ನು ಪಡೆಯುವೆವು.

ಯಾಸ್ತೇ ರಾತ್ರೀಸ್ಸವಿತ[ಸವಿತಃ(೧೨)ದೇವಯಾನೀ]

ದೇವಯಾನೀರಂತರಾ ದ್ಯಾವಾಪೃಥಿವೀ ವಿಯಂತಿ ।

ಗೃಹೈಶ್ಚ ಸರ್ವೈಃ ಪ್ರಜಯಾನ್ವಗ್ರೇ ಸುವೋ

ರುಹಾಣಾಸ್ತರತಾ ರಜಾಗ್ಂಸಿ ॥

---

ಯಾಃ । ತೇ । ರಾತ್ರೀಃ । ಸವಿತಃ ।(೧೨)। ದೇವಯಾನೀರಿತಿ ದೇವ-ಯಾನೀಃ । ಅಂತರಾ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ವಿಯಂತೀತಿ ವಿ-ಯಂತಿ ॥ ಗೃಹೈಃ । ಚ । ಸರ್ವೈಃ । ಪ್ರಜಯೇತಿ ಪ್ರ-ಜಯಾ । ನು । ಅಗ್ರೇ । ಸುವಃ । ರುಹಾಣಾಃ । ತರತ । ರಜಾಗ್ಂಸಿ ॥

---

| ಮಂತ್ರ | ವಿನಿಯೋಗ |
|---|---|
| ಯಾಸ್ತೇ...ರಜಾಗ್ಂಸಿ ॥ | ಆರನೆಯ ಅತಿಮೋಕ್ಷಮಂತ್ರ. |

---

✦ಸವಿತಃ=ಸವಿತೃದೇವನೇ! ದ್ಯಾವಾಪೃಥಿವೀ ಅಂತರಾ=ದ್ಯಾವಾಭೂಮಿಗಳ ಮಧ್ಯದಲ್ಲಿ; ತೇ=ನಿನಗೆ ಸಂಬಂಧಿಸಿದ; ದೇವಯಾನೀಃ=ದೈವಿಕಕರ್ಮಗಳಿಂದ ಕೂಡಿದ; ಯಾಃ ರಾತ್ರೀಃ=ರಾತ್ರಿಗಳು; ವಿಯಂತಿ=ಪ್ರವರ್ತಿಸುತ್ತವೆಯೋ; [ಆ ರಾತ್ರಿಗಳಲ್ಲಿ ಯಜ್ಞಾನುಷ್ಠಾನವನ್ನು ಮಾಡುವ ಯಜಮಾನರು] ಅಗ್ರೇ=ಮೊದಲೇ; ಸರ್ವೈಃ ಗೃಹೈಃ ಚ=ಮನೆಯಲ್ಲಿರುವ ಮಿತ್ರ-ಭೃತ್ಯಾದಿಗಳಿಂದಲೂ; ನು=ಮತ್ತು; ಪ್ರಜಯಾ=ಪುತ್ರರಿಂದಲೂ ಕೂಡಿದವರಾಗಿ; ಸುವಃ=ಸ್ವರ್ಗವನ್ನು; ರುಹಾಣಾಃ=ಏರಿದವರಾಗಿ/ಹೊಂದಿದವರಾಗಿ; ರಜಾಗ್ಂಸಿ=ರಂಜನೀಯವಾದ ಸುಖಗಳನ್ನು; ತರತ=ಹೊಂದಿದವರಾಗಲಿ/ದುಃಖಗಳನ್ನು ದಾಟಿದವರಾಗಲಿ.

**ಯೇ ದೇವಾ ಯಜ್ಞಹನೋ ಯಜ್ಞಮುಷೋ ದಿವ್ಯಧ್ಯಾಸತೇ ।**

---

ಯೇ । ದೇವಾಃ । ಯಜ್ಞಹನ ಇತಿ ಯಜ್ಞ-ಹನಃ । ಯಜ್ಞಮುಷ ಇತಿ ಯಜ್ಞ-ಮುಷಃ ।

ದಿವಿ । ಅಧೀತಿ । ಆಸತೇ ॥

---

| ಮಂತ್ರ | ವಿನಿಯೋಗ |
|---|---|
| **ಯೇ ದೇವಾಃ...ಸೂರ್ಯೋ...ವಯಮ್ । ಯೇ ದೇವಾಃ..ಯಜ್ಞಮುಷಃ ಸೂರ್ಯೋ..ವಯಮ್ ॥** | ಏಳು ಮತ್ತು ಎಂಟನೆಯ ಅತಿಮೋಕ್ಷ ಮಂತ್ರಗಳು [ಅನುಷಂಗದಿಂದ ೨ ಮಂತ್ರಗಳು] |

---

**+ಯೇ ಯಜ್ಞಹನಃ ದೇವಾಃ=ಯಜ್ಞಕ್ಕೆ ವಿಘಾತವನ್ನುಂಟುಮಾಡುವ ಯಾವ ಕ್ಷುದ್ರದೇವತೆಗಳು; ದಿವಿ ಅಧಿ ಆಸತೇ=ದೇವಲೋಕದ ಮೇಲೆ ಇದ್ದಾರೆಯೋ;**

---

ಯಜ್ಞಕ್ಕೆ ಅಡ್ಡಿಪಡಿಸುವ ಕ್ಷುದ್ರದೇವತೆಗಳು ಎರಡು ಬಗೆ. ಯಜ್ಞಾಂಗಗಳನ್ನು ನಾಶಪಡಿಸುವವರು. ಯಜ್ಞಾಂಗಗಳನ್ನು ಅಪಹರಿಸುವವರು... ಹೀಗಿರುವುದರಿಂದ ಅಗ್ನಿಯು ನನ್ನನ್ನು ಕಾಪಾಡಲಿ. ನಿರ್ವಿಘ್ನವಾಗಿ ಸತ್ಕರ್ಮಾನುಷ್ಠಾನವನ್ನು ಮಾಡಿದ ನಾವು ಯಜ್ಞಫಲವನ್ನು ಪಡೆಯುವೆವು.

ಇಂದ್ರನು ಸಗರನ ಯಜ್ಞಾಶ್ವವನ್ನು ಅಪಹರಿಸಿದುದನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಮತ್ತೊಬ್ಬನು ಶತಕ್ರತುವಾಗಬಾರದೆಂಬುದು ಆ ಅಪಹರಣಕ್ಕೆ ನಿಮಿತ್ತ. ಆ ಎರಡು ಬಗೆಯ ಭೂಮಿಯಲ್ಲಿರುವ ಯಜ್ಞವಿಘ್ನಕಾರಿಗಳಿಂದ ರಕ್ಷಿಸಿ ಯಜ್ಞಫಲವನ್ನು ಕರುಣಿಸು ಎಂಬುದಾಗಿ ಅಗ್ನಿಯ ಪ್ರಾರ್ಥನೆಯಿದು.

ಶ್ರೇಷ್ಠರಾದ ಮಿತ್ರಾವರುಣರೇ! ಯಜ್ಞಕ್ಕೆ ಸಂಬಂಧಿಸಿದ ರಾತ್ರಿಗಳ ಮಧ್ಯದಲ್ಲಿ ಈ ರಾತ್ರಿಯಲ್ಲಿ ನಿಮ್ಮ ಭಾಗವಾದ ವಶಾನೂಬಂಧ್ಯಾಯಾಗಗಳ ಹವಿರ್ಭಾಗವನ್ನು ಸ್ವೀಕರಿಸಿರಿ. ನಿಮ್ಮ ಅನುಗ್ರಹದಿಂದ ನಾವು ಪ್ರಕಾಶಿಸುವ, ಯಜ್ಞಫಲವಾದ ಸ್ವರ್ಗಲೋಕದಲ್ಲಿ ಸುಖವನ್ನು ಹೊಂದಿ ಸರ್ವಯಜ್ಞಫಲವನ್ನೂ ಹೊಂದುವೆವು.

ಸೂರ್ಯೋ ಮಾ ತೇಭ್ಯೋ ರಕ್ಷತು ಗಚ್ಛೇಮ ಸುಕೃತೋ ವಯಮ್ ॥

---

ಸೂರ್ಯಃ । ಮಾ । ತೇಭ್ಯಃ । ರಕ್ಷತು । ಗಚ್ಛೇಮ । ಸುಕೃತ ಇತಿ ಸು-ಕೃತಃ । ವಯಮ್ ॥

---

ಸೂರ್ಯಃ=ಸೂರ್ಯದೇವನು; ತೇಭ್ಯಃ=ಆ ಕ್ಷುದ್ರದೇವತೆಗಳಿಂದ/ದೆಸೆಯಿಂದ; ಮಾ ರಕ್ಷತು=ನನ್ನನ್ನು ಕಾಪಾಡಲಿ; ವಯಮ್=ನಾವು; ಸುಕೃತಃ=[ಉಪಹತಿಯಿಲ್ಲದೆ] ಉತ್ತಮಯಾಗರೂಪವಾದ ಒಳ್ಳೆಯ ಕರ್ಮಾನುಷ್ಠಾನವನ್ನು ಮಾಡಿದವರಾಗಿ; ಗಚ್ಛೇಮ=[ಯಜ್ಞಫಲವನ್ನು] ಹೊಂದುವೆವು/ಹೊಂದುತ್ತೇವೆ; ಯೇ ದೇವಾಃ ಯಜ್ಞಮುಷಃ=ಯಾವ ಕ್ಷುದ್ರದೇವತೆಗಳು ಯಜ್ಞಕ್ಕೆ ಸಂಬಂಧಿಸಿದ ವಸ್ತುಗಳನ್ನು ಅಪಹರಿಸುವವರಾಗಿ; ದಿವಿ...ವಯಮ್=ದೇವಲೋಕದ ಮೇಲೆ ಇರುತ್ತಾರೆಯೋ ಅವರ ದೆಸೆಯಿಂದ ಸೂರ್ಯದೇವನು ನನ್ನನ್ನು ಕಾಪಾಡಲಿ. ನಿರ್ವಿಘ್ನವಾಗಿ ಸತ್ಕರ್ಮಾನುಷ್ಠಾನ ಮಾಡಿದ ನಾವು ಯಜ್ಞಫಲವನ್ನು ಪಡೆಯುವೆವು.

---

ಯಜ್ಞವನ್ನು ನಾಶಪಡಿಸುವ ಅಥವಾ ಯಜ್ಞವಿಘ್ನಕಾರಿಗಳಾದ ಅಂತರಿಕ್ಷದಲ್ಲಿರುವ ಕ್ಷುದ್ರದೇವತೆಗಳ ದೆಸೆಯಿಂದ ವಾಯುದೇವನು ನಮ್ಮನ್ನು ಕಾಪಾಡಲಿ. ನಾವು ನಿರ್ವಿಘ್ನವಾಗಿ ಯಜ್ಞಾನುಷ್ಠಾನವನ್ನು ಮಾಡಿ ಫಲವನ್ನು ಹೊಂದೋಣ.

ಸವಿತೃದೇವನೇ! ದೇವಲೋಕಸಾಧಕವಾಗಿ ಭೂಮಿ-ಅಂತರಿಕ್ಷಗಳ ಮಧ್ಯದಲ್ಲಿ ಪ್ರವರ್ತಿಸುವ *ರಾತ್ರಿಗಳಲ್ಲಿ ಕರ್ಮಾನುಷ್ಠಾನವನ್ನು ಮಾಡುವ ಯಜಮಾನರು ಮಿತ್ರ-ಭೃತ್ಯಸಹಿತರಾಗಿ ಸ್ವರ್ಗವನ್ನು ಹೊಂದಲಿ. ಸ್ವರ್ಗಸುಖವನ್ನು ಪಡೆಯಲಿ. ದುಃಖಗಳನ್ನು ಕಳೆದುಕೊಳ್ಳಲಿ. ಹೀಗೆ ನೀನು ಅನುಗ್ರಹಿಸು.

ಯಜ್ಞವನ್ನು ನಾಶಪಡಿಸುವ ಅಥವಾ ಯಜ್ಞವಿಘ್ನಕಾರಿಗಳಾದ ದೇವಲೋಕದ ಮೇಲೆ ಇರುವ ಕ್ಷುದ್ರದೇವತೆಗಳ ದೆಸೆಯಿಂದ ಸೂರ್ಯದೇವನು ನಮ್ಮನ್ನು ಕಾಪಾಡಲಿ. ನಾವು ನಿರ್ವಿಘ್ನವಾಗಿ ಯಜ್ಞಾನುಷ್ಠಾನವನ್ನು ಮಾಡಿ ಯಜ್ಞಫಲವನ್ನು ಹೊಂದೋಣ/ಹೊಂದುತ್ತೇವೆ.

---

*ಸುತ್ಯಾದಿನವು ಒಂದೇ ಆದರೂ ದೀಕ್ಷಣೀಯಾದಿರಾತ್ರಿಗಳನ್ನು ಸೇರಿಸಿಕೊಂಡು ಶ್ರುತಿಯಲ್ಲಿ 'ರಾತ್ರೀಃ' ಎಂದು ಬಹುವಚನಪ್ರಯೋಗವಿದೆ.

**ಯೇನೇಂದ್ರಾಯ ಸಮಭರಃ ಪಯಾಗ್ಂಸ್ಯುತ್ತಮೇನ**
**ಹವಿಷಾ ಜಾತವೇದಃ । ತೇನಾಗ್ನೇ ತ್ವಮುತ ವರ್ಧಯೇ**
**ಮಗ್ಂ ಸಜಾತಾನಾಗ್ಂ ಶ್ರೈಷ್ಠ್ಯ ಆಧೇಹ್ಯೇನಮ್ ॥**

---

ಯೇನ । ಇಂದ್ರಾಯ । ಸಮಭರ ಇತಿ ಸಮ್-ಅಭರಃ । ಪಯಾಗ್ಂಸಿ । ಉತ್ತಮೇನೇತ್ಯುತ್-ತಮೇನ । ಹವಿಷಾ । ಜಾತವೇದ ಇತಿ ಜಾತ-ವೇದಃ ॥ ತೇನ । ಅಗ್ನೇ । ತ್ವಮ್ । ಉತ । ವರ್ಧಯ । ಇಮಮ್ । ಸಜಾತಾನಾಮಿತಿ ಸ-ಜಾತಾನಾಮ್ । ಶ್ರೈಷ್ಠ್ಯೇ । ಏತಿ । ಧೇಹಿ । ಏನಮ್ ॥

---

| ಮಂತ್ರ | ವಿನಿಯೋಗ |
|---|---|
| ಯೇನೇಂದ್ರಾಯ...ಆಧೇಹ್ಯೇನಮ್ ॥* | ಒಂಬತ್ತನೆಯ ಅತಿಮೋಕ್ಷಮಂತ್ರ. |

---

+ಜಾತವೇದಃ ಅಗ್ನೇ!=ಹುಟ್ಟಿದುದೆಲ್ಲವನ್ನು ತಿಳಿದಿರುವ ಸರ್ವಜ್ಞನಾದ ಅಗ್ನಿದೇವನೇ! ಯೇನ ಉತ್ತಮೇನ ಹವಿಷಾ=ಯಾವ ಶ್ರೇಷ್ಠವಾದ ಹವಿಸ್ಸಿನಿಂದ [ಕೂಡಿದ]; ಪಯಾಗ್ಂಸಿ=ಕ್ಷೀರದಂತೆ ರುಚಿಯಾದ ಸೋಮರಸವನ್ನು; ಇಂದ್ರಾಯ= ಇಂದ್ರದೇವನಿಗೆ; ಸಮಭರಃ=ಒದಗಿಸಿಕೊಟ್ಟೆಯೋ; ತೇನ=ಆ ಹವಿರ್ಯಾಗಫಲ ದಿಂದ; ತ್ವಮ್=ನೀನು; ಇಮಮ್=ಈ ಯಜಮಾನನನ್ನು; ವರ್ಧಯ=ಅಭಿವೃದ್ಧಿ ಗೊಳಿಸು; ಉತ=ಮತ್ತು; ಏನಮ್=ಈ ಯಜಮಾನನನ್ನು; ಸಜಾತಾನಾಮ್= ಜ್ಞಾತಿಗಳ/ಸಮಾನರ [ನಡುವೆ] ಶ್ರೈಷ್ಠ್ಯೇ=ಪ್ರಾಮುಖ್ಯದಲ್ಲಿ; ಆ ಧೇಹಿ=ಸ್ಥಾಪಿಸು;

---

*ಈ ಅತಿಮೋಕ್ಷಮಂತ್ರಗಳು 'ಯೇ ದೇವಾ...' ಎಂಬುದರಿಂದ 'ಯೇನೇಂದ್ರಾಯ' ಎಂಬಲ್ಲಿಯವರೆಗೆ ಒಂಬತ್ತು ಇವೆ. ಆಪಸ್ತಂಬರು ಈ ಒಂಬತ್ತು ಮಂತ್ರಗಳ ಜಪವನ್ನು ಹೇಳಿರುತ್ತಾರೆ. ಬೌಧಾಯನರು ಗಾರ್ಹಪತ್ಯ, ಆಹವನೀಯ ಮತ್ತು ಆಗ್ನೀಧ್ರಗಳಲ್ಲಿ ಮೂರು ಮೂರು ಹೋಮಗಳನ್ನು ಹೇಳಿರುತ್ತಾರೆ. ಗಾರ್ಹಪತ್ಯ, ಆಗ್ನೀಧ್ರ, ಮತ್ತು ಆಹವನೀಯಗಳಲ್ಲಿ ಹೋಮ ಮತ್ತು ಉಪಸ್ಥಾನವೆಂಬ ಇನ್ನೊಂದು ಪಕ್ಷವನ್ನೂ ಮಿಶ್ರರು ತಿಳಿಸಿರುತ್ತಾರೆ.

ಯಜ್ಞಹನೋ ವೈ ದೇವಾ ಯಜ್ಞಮುಷಃ [(೧೩)ಸಂತಿ ತ]

ಸಂತಿ ತ ಏಷು ಲೋಕೇಷ್ವಾಸತ

---

ಯಜ್ಞಹನ ಇತಿ ಯಜ್ಞ-ಹನಃ। ವೈ। ದೇವಾಃ। ಯಜ್ಞಮುಷ ಇತಿ ಯಜ್ಞ-ಮುಷಃ।

(೧೩)। ಸಂತಿ। ತೇ। ಏಷು। ಲೋಕೇಷು। ಆಸತೇ।

---

ಅತಿಮೋಕ್ಷಮಂತ್ರಗಳ ಬ್ರಾಹ್ಮಣ

| ಬ್ರಾಹ್ಮಣಭಾಗ | ವಿವರಣೆ |
|---|---|
| ಯಜ್ಞಹನಃ ಯಜ್ಞಮುಷಃ ದೇವಾಃ ಸಂತಿ ವೈ | ಯಜ್ಞಭಾಗರಹಿತರಾದ ಯಜ್ಞನಾಶಕರಾದ ದೇವತೆಗಳೂ, ಯಜ್ಞದ್ರವ್ಯಗಳನ್ನು ಕದಿಯುವ ಕ್ಷುದ್ರದೇವತೆಗಳೂ/ಮ್ಲೇಚ್ಛದೇವತೆಗಳೂ ಇರುತ್ತಾರೆ. |
| ತೇ ಏಷು ಲೋಕೇಷು ಆಸತೇ | ಅವರು ಈ ಭೂಮಿ-ಅಂತರಿಕ್ಷ-ದ್ಯುಲೋಕಗಳಲ್ಲಿ ಇರುತ್ತಾರೆ. |

---

ಅಗ್ನಿಯೇ! ನೀನು ಜಾತವೇದನು. ಹುಟ್ಟಿದುದೆಲ್ಲವನ್ನೂ ಬಲ್ಲವನು. ಹವ್ಯವಾಹನನಾದ ನೀನು ಇಂದ್ರನಿಗೆ ಹಾಲಿನಂತೆ ಮಧುರವಾದ ಸೋಮರಸವನ್ನೂ, ಉತ್ತಮವಾದ ಹವಿಸ್ಸನ್ನೂ ಒಯ್ದು ಸಮರ್ಪಿಸಿರುವೆ. ಹವಿಸ್ಸುಗಳಿಂದ ತೃಪ್ತನಾಗಿ ನೀನು ಈ ಯಜಮಾನನನ್ನು ವೃದ್ಧಿಗೊಳಿಸು. ಸಮಾನರ ಮಧ್ಯದಲ್ಲಿ ಶ್ರೇಷ್ಠನನ್ನಾಗಿ ಮಾಡು.

ಯಜ್ಞವನ್ನು ಕೆಡಿಸುವ, ಯಜ್ಞದ್ರವ್ಯಗಳನ್ನು ಅಪಹರಿಸುವ ಕ್ಷುದ್ರದೇವತೆಗಳು ಭೂಮ್ಯಂತರಿಕ್ಷದ್ಯುಲೋಕಗಳಲ್ಲಿ ಇರುತ್ತಾರೆ. ಮಾರೀಚಾದಿಗಳು ವಿಶ್ವಾಮಿತ್ರ ಮುನಿಗಳ ಯಜ್ಞನಾಶಕ್ಕಾಗಿ ಯತ್ನಿಸಿದರು ಮೊದಲಾದ ಕಥೆಗಳನ್ನು ಗಮನಿಸಬಹುದು.

ಆದದಾನಾ ವಿಮಥ್ನಾನಾ ಯೋ ದದಾತಿ ಯೋ ಯಜತೇ

ತಸ್ಯ । ಯೇ ದೇವಾ ಯಜ್ಞಹನಃ ಪೃಥಿವ್ಯಾಮಧ್ಯಾಸತೇ

ಯೇ ಅಂತರಿಕ್ಷೇ ಯೇ ದಿವೀತ್ಯಾಹೇ-

---

ಆದದಾನಾ ಇತ್ಯಾ-ದದಾನಾಃ । ವಿಮಥ್ನಾನಾ ಇತಿ ವಿ-ಮಥ್ನಾನಾಃ । ಯಃ । ದದಾತಿ । ಯಃ । ಯಜತೇ । ತಸ್ಯ ॥ ಯೇ । ದೇವಾಃ । ಯಜ್ಞಹನ ಇತಿ ಯಜ್ಞ-ಹನಃ । ಪೃಥಿವ್ಯಾಮ್ । ಅಧೀತಿ । ಆಸತೇ । ಯೇ । ಅಂತರಿಕ್ಷೇ । ಯೇ । ದಿವಿ । ಇತಿ । ಆಹ ।

---

| | |
|---|---|
| **ಯಃ ದದಾತಿ ಯಃ ಯಜತೇ** | [ಅವರು] ಯಾವ ಯಜಮಾನನು ಗವಾದಿಗಳನ್ನು ದಾನ ಮಾಡುತ್ತಾನೆಯೋ, ಯಾವನು ಹವಿಸ್ಸನ್ನು ಯಾಗ ಮಾಡುತ್ತಾನೆಯೋ |
| **ತಸ್ಯ ಆದದಾನಾಃ ವಿಮಥ್ನಾನಾಃ** ಆಸತೇ | ಅವನ [ವಸ್ತುಗಳನ್ನು] ತಾವೇ ಬಲಾತ್ಕಾರದಿಂದ ತೆಗೆದುಕೊಳ್ಳುವವರಾಗಿಯೂ, ಯಜ್ಞದ್ರವ್ಯಗಳನ್ನು ನಾಶಪಡಿಸುವವರಾಗಿಯೂ ಇರುತ್ತಾರೆ. |

**ಈ ಹೋಮ-ಜಪಗಳ ಪ್ರಶಂಸೆ**

| | |
|---|---|
| **ಯೇ ದೇವಾಃ ಯಜ್ಞಹನಃ ಪೃಥಿವ್ಯಾಮ್ ಅಧ್ಯಾಸತೇ** | ಯಾವ ಯಜ್ಞನಾಶಕರು ಭೂಮಿಯಲ್ಲಿ ಇರುತ್ತಾರೆಯೋ |
| **ಯೇ ಅಂತರಿಕ್ಷೇ** ಅಧ್ಯಾಸತೇ | ಯಾರು ಅಂತರಿಕ್ಷದಲ್ಲಿ ಇರುತ್ತಾರೆಯೋ |
| **ಯೇ ದಿವಿ** ಅಧ್ಯಾಸತೇ **ಇತಿ ಆಹ** | ಯಾರು ದ್ಯುಲೋಕದಲ್ಲಿ ಇರುತ್ತಾರೆಯೋ [ಅವರಿಂದ ದೇವತೆಗಳು ರಕ್ಷಣೆಯನ್ನು ನೀಡಲಿ] ಎಂದು ಮಂತ್ರವು ಹೇಳುತ್ತದೆ. |

-ಮಾನೇವ ಲೋಕಾಗ್ಂಸ್ತೀರ್ತ್ವಾ ಸಗೃಹಸ್ಸಪಶು

ಸ್ಸುವರ್ಗಂ ಲೋಕಮೇತ್ಯಪ ವೈ

ಸೋಮೇನೇಜಾನಾದ್ದೇವತಾಶ್ಚ ಯಜ್ಞಶ್ಚ ಕ್ರಾಮಂತ್ಯಾ-

---

ಇಮಾನ್ । ಏವ । ಲೋಕಾನ್ । ತೀರ್ತ್ವಾ । ಸಗೃಹ ಇತಿ ಸ-ಗೃಹಃ । ಸಪಶುರಿತಿ ಸ-ಪಶುಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ । ಅಪೇತಿ । ವೈ । ಸೋಮೇನ । ಈಜಾನಾತ್ । ದೇವತಾಃ । ಚ । ಯಜ್ಞಃ । ಚ । ಕ್ರಾಮಂತಿ ।

---

| | |
|---|---|
| ಸಗೃಹಃ | [ಯಜಮಾನನು ಈ ಜಪ-ಹೋಮಗಳ ಪ್ರಭಾವದಿಂದ] ಮನೆಯವರೊಡನೆಯೂ |
| ಸಪಶುಃ | ಗವಾದಿಪಶುಸಹಿತನಾಗಿಯೂ |
| ಇಮಾನ್ ಲೋಕಾನ್ ತೀರ್ತ್ವಾ ಏವ | ಈ ಮೂರು ಲೋಕಗಳಲ್ಲಿರುವ ಯಜ್ಞಹಂತಕರನ್ನು ಅತಿಕ್ರಮಿಸಿ/ನಾಶಪಡಿಸಿ |
| ಸುವರ್ಗಮ್ ಲೋಕಮ್ ಏತಿ | ಸ್ವರ್ಗಲೋಕಕ್ಕೆ ಹೋಗುತ್ತಾನೆ. |

ಉದವಸಾನೀಯಯಾಗವಿಧಿಗಾಗಿ ಉಪೋದ್ಘಾತ

| | |
|---|---|
| ಸೋಮೇನ ಈಜಾನಾತ್ | ಸೋಮಯಾಗವನ್ನು ಮಾಡಿದ ಯಜಮಾನನಿಂದ |
| ದೇವತಾಃ ಚ ಯಜ್ಞಃ ಚ ಅಪ ಕ್ರಾಮಂತಿ ವೈ | ದೇವತೆಗಳೂ, ಯಜ್ಞವೂ ದೂರವಾಗುತ್ತವೆ. |

---

ಯಜ್ಞನಾಶಕರೂ, ಯಜ್ಞದ್ರವ್ಯಾಪಹಾರಕರೂ ಆದ ಭೂಮಿ-ಅಂತರಿಕ್ಷ-ದ್ಯುಲೋಕಗಳಲ್ಲಿರುವ ಕ್ಷುದ್ರದೇವತೆಗಳನ್ನು ಈ ಜಪ-ಹೋಮಗಳಿಂದ ದೂರಮಾಡುವನೆಂಬುದಾಗಿ ಇದು ಫಲಪ್ರಶಂಸೆ. ಮಂತ್ರಾರ್ಥದಿಂದಲೇ ಇದು ಸ್ಪಷ್ಟವಾಗುತ್ತದೆ.

–ಗ್ನೇಯಂ ಪಂಚಕಪಾಲಮುದವಸಾನೀಯಂ ನಿರ್ವಪೇದಗ್ನಿ

ಸ್ಸರ್ವಾ ದೇವತಾಃ [ದೇವತಾಃ(೧೪)]ಪಾಙ್ಕ್ತೋ

ಯಜ್ಞೋ ದೇವತಾಶ್ಚೈವ ಯಜ್ಞಂ ಚಾವರುಂಧೇ

---

ಆಗ್ನೇಯಮ್ । ಪಂಚಕಪಾಲಮಿತಿ ಪಂಚ–ಕಪಾಲಮ್ । ಉದವಸಾನೀಯಮಿತ್ಯುತ್–

ಅವಸಾನೀಯಮ್ । ನಿರಿತಿ । ವಪೇತ್ । ಅಗ್ನಿಃ । ಸರ್ವಾಃ । ದೇವತಾಃ । (೧೪) ।

ಪಾಙ್ಕ್ತಃ । ಯಜ್ಞಃ । ದೇವತಾಃ । ಚ । ಏವ । ಯಜ್ಞಮ್ । ಚ । ಅವೇತಿ । ರುಂಧೇ ।

---

### ಉದವಸಾನೀಯಯಾಗವಿಧಿ;ಅದರ ಫಲಪ್ರಶಂಸೆ

| | |
|---|---|
| ಆಗ್ನೇಯಮ್ ಪಂಚಕಪಾಲಮ್ ಉದವಸಾನೀಯಮ್ ನಿರ್ವಪೇತ್ | [ಈ ದೋಷಪರಿಹಾರಕ್ಕಾಗಿ] ಅಗ್ನಿದೇವತಾಕವಾದ, ಪಂಚಕಪಾಲಪುರೋಡಾಶದ್ರವ್ಯವುಳ್ಳ ಉದವಸಾನೀಯವೆಂಬ ಯಾಗವನ್ನು ಮಾಡಬೇಕು. |
| ಅಗ್ನಿಃ ಸರ್ವಾಃ ದೇವತಾಃ | ಅಗ್ನಿಯು ಸರ್ವದೇವತಾಸ್ವರೂಪನು. |
| ಯಜ್ಞಃ ಪಾಙ್ಕ್ತಃ | ಯಜ್ಞವು ಪಂಚಸಂಖ್ಯೆಯ ದ್ರವ್ಯಗಳನ್ನು ಹೊಂದಿರುವುದರಿಂದ ಪಾಂಕ್ತವಾಗಿದೆ. |
| ದೇವತಾಃ ಯಜ್ಞಮ್ ಚ ಏವ ಅವರುಂಧೇ | [ಈ ಉದವಸಾನೀಯದಿಂದ] ದೇವತೆಗಳನ್ನೂ, ಯಜ್ಞವನ್ನೂ ಮತ್ತೆ ಪಡೆಯುತ್ತಾನೆ. |

---

ಯಾಗವು ಮುಗಿದ ಬಳಿಕ ಈ ಯಜಮಾನನಿಂದ ಪ್ರಯೋಜನವಿಲ್ಲವೆಂದು/ಯಜಮಾನನು ಯಾತಯಾಮ(ಗತರಸ)ನೆಂದು ಭಾವಿಸಿದ ದೇವತೆಗಳೂ, ಯಜ್ಞವೂ ದೂರವಾಗುತ್ತಾರೆ. ಈ ದೋಷಪರಿಹಾರಾರ್ಥವಾಗಿ ಉದವಸಾನೀಯೇಷ್ಟಿಯನ್ನು ಅನುಷ್ಠಿಸಬೇಕು.

'ದೇವಾಃ ಬಿಭ್ಯತಃ ಅಗ್ನಿಮ್ ಪ್ರಾವಿಶನ್' ಎಂದು ಶ್ರುತಿಯು ಇದೆ. ಇದರಿಂದ ಅಗ್ನಿಯು ಸರ್ವದೇವತಾಸ್ವರೂಪನೆಂದು ತಿಳಿಯುತ್ತದೆ.

ಗಾಯತ್ರೋ ವಾ ಅಗ್ನಿರ್ಗಾಯತ್ರಛಂದಾಸ್ತಂ ಛಂದಸಾ

ವ್ಯರ್ಧಯತಿ ಯತ್ಪಂಚಕಪಾಲಂ ಕರೋತ್ಯಷ್ಟಾಕಪಾಲಃ

ಕಾರ್ಯೋಽಷ್ಟಾಕ್ಷರಾ ಗಾಯತ್ರೀ ಗಾಯತ್ರೋಽಗ್ನಿ-

---

ಗಾಯತ್ರಃ । ವೈ । ಅಗ್ನಿಃ । ಗಾಯತ್ರಛಂದಾ ಇತಿ ಗಾಯತ್ರ-ಛಂದಾಃ । ತಮ್ । ಛಂದಸಾ । ವೀತಿ । ಅರ್ಧಯತಿ । ಯತ್ । ಪಂಚಕಪಾಲಮಿತಿ ಪಂಚ-ಕಪಾಲಮ್ । ಕರೋತಿ । ಅಷ್ಟಾಕಪಾಲ ಇತ್ಯಷ್ಟಾ-ಕಪಾಲಃ । ಕಾರ್ಯಃ । ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ । ಗಾಯತ್ರಃ । ಅಗ್ನಿಃ ।

---

ಅಷ್ಟಾಕಪಾಲವಿಧಿ; ಯಾಜ್ಯಾಪುರೋನುವಾಕ್ಯಾವಿಧಿ;ಅವುಗಳ ಬ್ರಾಹ್ಮಣ

| | |
|---|---|
| ಅಗ್ನಿಃ ಗಾಯತ್ರಃ ವೈ | [ಗಾಯತ್ರೀಛಂದಸ್ಸಿನೊಡನೆ ಪ್ರಜಾಪತಿಯ ಮುಖದಿಂದ ಜನಿಸಿದ] ಅಗ್ನಿಯು ಗಾಯತ್ರನು. |
| ಗಾಯತ್ರಛಂದಾಃ | ಗಾಯತ್ರೀಛಂದಸ್ಸುಳ್ಳವನೂ ಆಗಿದ್ದಾನೆ. [ಪ್ರಾತಃ ಸವನವು ಅಗ್ನೇಯ, ಗಾಯತ್ರೀಛಂದಸ್ಸುಳ್ಳದ್ದು] |
| ಯತ್ ಪಂಚಕಪಾಲಮ್ ಕರೋತಿ | ಉದವಸಾನೀಯಯಾಗದಲ್ಲಿ ಪಂಚಕಪಾಲ ಪುರೋಡಾಶವನ್ನು ಹವಿಸ್ಸನ್ನಾಗಿ ಮಾಡಿದರೆ |
| ತಮ್ ಛಂದಸಾ ವ್ಯರ್ಧಯತಿ | ಅಗ್ನಿಯನ್ನು ತನ್ನ ಛಂದಸ್ಸಿನಿಂದ ದೂರ ಮಾಡಿ ದಂತಾಗುತ್ತದೆ. |
| ಅಷ್ಟಾಕಪಾಲಃ ಕಾರ್ಯಃ | ಆ ಉದವಸಾನೀಯಯಾಗವನ್ನು ಅಷ್ಟಾಕಪಾಲ ಪುರೋಡಾಶಹವಿಸ್ಸನ್ನಾಗಿ ಮಾಡಬೇಕು. |
| ಅಷ್ಟಾಕ್ಷರಾ ಗಾಯತ್ರೀ | ಗಾಯತ್ರೀಛಂದಸ್ಸು ಎಂಟು ಅಕ್ಷರಗಳುಳ್ಳದ್ದು. |
| ಅಗ್ನಿಃ ಗಾಯತ್ರಃ | ಅಗ್ನಿಯೂ ಗಾಯತ್ರೀಸಂಬಂಧವುಳ್ಳವನು. |

ಗಾಯತ್ರಛಂದಾಸ್ಸ್ವೇನೈವೈನಂ ಛಂದಸಾ ಸಮರ್ಧಯತಿ

ಪಙ್ಕ್ತ್ಯೌ ಯಾಜ್ಯಾನುವಾಕ್ಯೇ ಭವತಃ ಪಾಙ್ಕ್ತೋ

ಯಜ್ಞಸ್ತೇನೈವ ಯಜ್ಞಾನ್ನೈತಿ ॥ ೧೫–4 ॥

ಸವಿತರ್ದೇವಾ ಯಜ್ಞಮುಷಸ್ಸರ್ವಾ ದೇವತಾಸ್ತ್ರಿಚತ್ವಾರಿಗ್ಂಶಚ್ಚ ॥]

---

ಗಾಯತ್ರಛಂದಾ ಇತಿ ಗಾಯತ್ರ–ಛಂದಾಃ । ಸ್ವೇನ । ಏವ । ಏನಮ್ । ಛಂದಸಾ । ಸಮಿತಿ । ಅರ್ಧಯತಿ । ಪಙ್ಕ್ತ್ಯೌ । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ । ಭವತಃ । ಪಾಙ್ಕ್ತಃ । ಯಜ್ಞಃ । ತೇನ । ಏವ । ಯಜ್ಞಾತ್ । ನ । ಏತಿ ॥೧೫॥

---

| | |
|---|---|
| ಗಾಯತ್ರಛಂದಾಃ | ಗಾಯತ್ರೀಛಂದಸ್ಸಿನೊಡನೆಯೇ ಹುಟ್ಟಿದವನು. |
| ಸ್ವೇನ ಛಂದಸಾ ಏವ ಏನಮ್ ಸಮರ್ಧಯತಿ | ಅಷ್ಟಾಕಪಾಲಯಾಗದಿಂದ ಅಗ್ನಿಯನ್ನು ತನ್ನ ಛಂದಸ್ಸಿನಿಂದಲೇ ಸಮೃದ್ಧನನ್ನಾಗಿಸುತ್ತಾನೆ. |
| ಪಙ್ಕ್ತ್ಯೌ ಯಾಜ್ಯಾನುವಾಕ್ಯೇ ಭವತಃ | 'ಅಗ್ನೇ ತಮದ್ಯಾಶ್ವಮ್' ಎಂಬ ಪಂಕ್ತಿ ಛಂದಸ್ಸಿನ ಮಂತ್ರಗಳು ಈ ಯಾಗದ ಯಾಜ್ಯಾ-ಪುರೋನುವಾಕ್ಯೆಗಳಾಗುತ್ತವೆ. |
| ಪಾಙ್ಕ್ತಃ ಯಜ್ಞಃ | ಐದು ಹವಿಸ್ಸುಳ್ಳ ಯಜ್ಞವೂ ಪಾಂಕ್ತ (ಪಂಚ ಸಂಖ್ಯಾವಿಶಿಷ್ಟ) ವಾಗಿದೆ. |
| ತೇನ ಏವ ಯಜ್ಞಾನ್ ನ ಏತಿ | ಆದರಿಂದ ಯಜಮಾನನು ಯಜ್ಞದಿಂದ ದೂರವಾಗುವುದಿಲ್ಲ. [ಮತ್ತೆ ಯಜ್ಞವನ್ನು ಪಡೆಯುತ್ತಾನೆ] |

---

'ಧಾನಾಃ, ಕರಂಭಃ, ಪರಿವಾಪಃ, ಪುರೋಡಾಶಃ, ಪಯಸ್ಯಾ ತೇನ ಪಂಕ್ತಿರಾಪ್ಯತೇ ತದ್ಯಜ್ಞಸ್ಯ ಪಾಂಕ್ತತ್ವಮ್' ಎಂಬ ಶ್ರುತಿವಚನವು ಯಾಗವನ್ನು

ಪಾಂಕ್ತವೆಂದು ಹೇಳಿದೆ. ಇವೆರಡರಿಂದ ದೇವತಾಪ್ರಾಪ್ತಿಯೂ, ಯಜ್ಞಪ್ರಾಪ್ತಿಯೂ ಯುಕ್ತವಾಗಿಯೇ ಇದೆ.

ಈ ಉದವಸಾನೀಯೇಷ್ಟಿಯಲ್ಲಿ ಪಂಚಕಪಾಲಪುರೋಡಾಶವನ್ನು ಮಾಡಿದರೆ ಅಗ್ನಿಯನ್ನು ಅವನ ಛಂದಸ್ಸಿನಿಂದ ದೂರ ಮಾಡಿದಂತಾಗುತ್ತದೆ. ಹೀಗಾಗಿ ಈ ಉದವಸಾನೀಯೇಷ್ಟಿಯಲ್ಲಿ ಅಷ್ಟಾಕಪಾಲಪುರೋಡಾಶವನ್ನೂ, ಪಂಕ್ತಿಛಂದಸ್ಸಿನಿಂದ ಕೂಡಿರುವ ಯಾಜ್ಯಾ-ಪುರೋನುವಾಕ್ಯೆಗಳನ್ನು ಇಟ್ಟುಕೊಳ್ಳುವುದರಿಂದ ಯಜಮಾನನು ದೇವತೆಗಳಿಂದಲೂ, ಯಜ್ಞಗಳಿಂದಲೂ ದೂರನಾಗದೇ ಮತ್ತೆ ಅವುಗಳನ್ನು ಪಡೆಯುತ್ತಾನೆ. ಸರ್ವದೇವತಾಪ್ರಾಪ್ತಿಯೂ ಆಗುತ್ತದೆ.

---

## ವಿನಿಯೋಗಸಂಗ್ರಹ

1-9 ಯೇ ದೇವಾ ಇತ್ಯತೀವಮೋಕ್ಷಾನ್ ಮಂತ್ರಾನೇತಾಙ್ಜಪೇನ್ನವ ।
ಯಜ್ಞಹನ್ ಯಜ್ಞಮುಟ್ ಚೇತಿ ಭೇದಾನ್ಮಂತ್ರಭಿದೇಷ್ಯತೇ ॥

ಅನುವಾಕದಲ್ಲಿರುವ ಮಂತ್ರಸಂಖ್ಯೆ-9

## ॥ ಪಂಚಮೋಽನುವಾಕಃ ॥

ಸೂರ್ಯೋ ಮಾ ದೇವೋ ದೇವೇಭ್ಯಃ ಪಾತು ವಾಯು

ರಂತರಿಕ್ಷಾದ್ಯಜಮಾನೋಽಗ್ನಿರ್ಮಾ ಪಾತು ಚಕ್ಷುಷಃ ।

---

ಸೂರ್ಯಃ । ಮಾ । ದೇವಃ । ದೇವೇಭ್ಯಃ । ಪಾತು । ವಾಯುಃ । ಅಂತರಿಕ್ಷಾತ್ ।

ಯಜಮಾನಃ । ಅಗ್ನಿಃ । ಮಾ । ಪಾತು । ಚಕ್ಷುಷಃ ॥

---

ನಾಲ್ಕನೆಯ ಅನುವಾಕದಲ್ಲಿ ಅತಿಮೋಕ್ಷಮಂತ್ರಗಳು ಹೇಳಲ್ಪಟ್ಟವು. ಈ ಐದನೆಯ ಅನುವಾಕದಲ್ಲಿ ಆದಿತ್ಯಗ್ರಹಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಸೂರ್ಯೋ...ವಿಧೇಮ ತೇ ॥ | ಅಧ್ವರ್ಯುವು ಆದಿತ್ಯಗ್ರಹವನ್ನು ದರ್ಭಗಳಿಂದಲೋ ಕೈಯಿಂದಲೋ ಮುಚ್ಚಿಕೊಂಡು ನಿಲ್ಲಲು–ಸಾಯಣ.<br>ಮೂರನೆಯ ಪ್ರವೃತಾ ಹುತಿಯನ್ನು ಮಾಡಲು ಭ.ಭಾ.ಭಾ |

---

✦ **ಸೂರ್ಯಃ ದೇವಃ**=[ಸೂರ್ಯ–ವಾಯು–ಅಗ್ನಿಸ್ವರೂಪನಾದ ಆದಿತ್ಯಗ್ರಹ ಸ್ವರೂಪನಾದ]ಸೂರ್ಯದೇವನು; **ಮಾ**=ನನ್ನನ್ನು; **ದೇವೇಭ್ಯಃ ಪಾತು**=ಯಜ್ಞ ವಿಘಾತಕಾರಿಗಳಾದ ದೇವತೆಗಳಿಂದ ಕಾಪಾಡಲಿ; **ವಾಯುಃ**=ವಾಯುದೇವನು; **ಅಂತರಿಕ್ಷಾತ್**=ಅಂತರಿಕ್ಷದಲ್ಲಿರುವ [ಯಜ್ಞವಿಘಾತಕಾರಿಗಳಿಂದ ನನ್ನನ್ನು ಕಾಪಾಡಲಿ;] **ಯಜಮಾನಃ ಅಗ್ನಿಃ**=ಯಾಗನಿರ್ವಾಹಕನಾದ ಅಗ್ನಿದೇವನು; **ಚಕ್ಷುಷಃ**=[ದೇವತೆಗಳ] ಕ್ರೂರವಾದ ದೃಷ್ಟಿಯಿಂದ; **ಮಾ ಪಾತು**=ನನ್ನನ್ನು ಕಾಪಾಡಲಿ.

ಸಕ್ಷ ಶೂಷ ಸವಿತರ್ವಿಶ್ವಚರ್ಷಣ ಏತೇಭಿಸ್ಸೋಮ

ನಾಮಭಿರ್ವಿಧೇಮ ತೇ ತೇಭಿಸ್ಸೋಮ ನಾಮಭಿ

ರ್ವಿಧೇಮ ತೇ ॥ ಅಹಂ ಪರಸ್ತಾ-

---

ಸಕ್ಷ । ಶೂಷ । ಸವಿತಃ । ವಿಶ್ವಚರ್ಷಣ ಇತಿ ವಿಶ್ವ-ಚರ್ಷಣೇ । ಏತೇಭಿಃ ।

ಸೋಮ । ನಾಮಭಿರಿತಿ ನಾಮ-ಭಿಃ । ವಿಧೇಮ । ತೇ । ತೇಭಿಃ । ಸೋಮ ।

ನಾಮಭಿರಿತಿ ನಾಮ-ಭಿಃ । ವಿಧೇಮ । ತೇ ॥ ಅಹಮ್ । ಪರಸ್ತಾತ್ ।

---

| ಮಂತ್ರ | ವಿನಿಯೋಗ |
|---|---|
| ಅಹಂ...ಸಮಾನಾನಾಮ್ ॥ | ಯಜಮಾನನು ಆದಿತ್ಯಗ್ರಹಾನ್ವಾರಂಭವನ್ನು ಅನುಷ್ಠಿಸಲು |

---

**ಸೋಮ** ದೇವ=ಸೋಮದೇವನೇ! ಸಕ್ಷ=ಪಾತ್ರದಲ್ಲಿರುವವನೇ! **ಶೂಷ**= ಬಲವಂತನೇ! **ಸವಿತಃ**=ಪ್ರೇರಕನೇ! **ವಿಶ್ವಚರ್ಷಣೇ**=ಮನುಷ್ಯರೆಲ್ಲರನ್ನೂ ಅನುಗ್ರಹಿಸುವವನೇ! **ಏತೇಭಿಃ ನಾಮಭಿಃ**=ಈ ನಿನ್ನ ಪ್ರಿಯವಾದ ನಾಮಧೇಯಗಳಿಂದ; **ತೇ ವಿಧೇಮ**=ನಿನ್ನ ಪರಿಚರ್ಯೆಯನ್ನು ಮಾಡುವೆವು; **ಸೋಮ**= ಸೋಮದೇವನೇ! **ತೇಭಿಃ ನಾಮಭಿಃ**=ಆದಿತ್ಯ, ವಾಯು, ಅಗ್ನಿ ಎಂಬ ಆ ನಿನ್ನ ಹೆಸರುಗಳಿಂದಲೂ; **ತೇ ವಿಧೇಮ**=ನಿನ್ನ ಪರಿಚರ್ಯೆಯನ್ನು ಮಾಡುತ್ತೇವೆ. **✦ಅಹಮ್**= ನಾನು; **ಪರಸ್ತಾತ್**=ಮೇಲುಭಾಗದಲ್ಲಿ[ಅನ್ವಾರಭೇ=ಆದಿತ್ಯಗ್ರಹವನ್ನು ಸ್ಪರ್ಶಿಸುತ್ತೇನೆ;]

---

ಆದಿತ್ಯಗ್ರಹವು ಆದಿತ್ಯ-ವಾಯು-ಅಗ್ನಿರೂಪವಾಗಿದೆ. ಈ ದೇವತೆಗಳು ದ್ಯುಲೋಕ-ಅಂತರಿಕ್ಷ-ಭೂಮಿಗಳಲ್ಲಿರುವ ಯಜ್ಞವಿಘ್ನಕಾರಿಗಳಿಂದ ನನ್ನನ್ನು ರಕ್ಷಿಸಲಿ.

ದೇವತೆಗಳ ಕ್ರೂರದೃಷ್ಟಿಯು ನಮ್ಮ ಮೇಲೆ ಬೀಳದಿರಲಿ. ಸೋಮನೇ! ಸಕ್ಷಾದಿಗಳು ನಿನ್ನ ಪ್ರಿಯವಾದ ಹೆಸರುಗಳು. ಈ ಹೆಸರುಗಳಿಂದ ಸಂಬೋಧಿಸಿ ನಿನ್ನ ಪರಿಚರ್ಯೆ

ದಹಮವಸ್ತಾದಹಂ ಜ್ಯೋತಿಷಾ ವಿತಮೋ ವವಾರ ।

ಯದಂತರಿಕ್ಷಂ ತದು ಮೇ ಪಿತಾಽಭೂದಹಗ್ಂ

ಸೂರ್ಯಮುಭಯತೋ ದದರ್ಶಾಹಂ ಭೂಯಾಸ

ಮುತ್ತಮಸ್ಸಮಾನಾನಾ-

---

ಅಹಮ್ । ಅವಸ್ತಾತ್ । ಅಹಮ್ । ಜ್ಯೋತಿಷಾ । ವೀತಿ । ತಮಃ । ವವಾರ ॥ ಯತ್ । ಅಂತರಿಕ್ಷಮ್ । ತತ್ । ಉ । ಮೇ । ಪಿತಾ । ಅಭೂತ್ । ಅಹಮ್ । ಸೂರ್ಯಮ್ । ಉಭಯತಃ । ದದರ್ಶ । ಅಹಮ್ । ಭೂಯಾಸಮ್ । ಉತ್ತಮ ಇತ್ಯುತ್-ತಮಃ । ಸಮಾನಾನಾಮ್ ।(೧೭)।

---

**ಅಹಮ್ ಅವಸ್ತಾತ್**=ನಾನು ಕೆಳಭಾಗದಲ್ಲಿ [ಆದಿತ್ಯಗ್ರಹವನ್ನು ಮುಟ್ಟಿಕೊಂಡಿರುತ್ತೇನೆ;] **ಅಹಮ್ ಜ್ಯೋತಿಷಾ**=ನಾನು ಆದಿತ್ಯಗ್ರಹದ ಬೆಳಕಿನಿಂದ; **ತಮಃ**=ಕತ್ತಲೆಯನ್ನು; **ವಿ ವವಾರ**=ವಿಶೇಷವಾಗಿ ನಿವಾರಿಸಿದೆನು; **ಯತ್ ಅಂತರಿಕ್ಷಮ್**=[ಆದಿತ್ಯಗ್ರಹದ ಊರ್ಧ್ವಾಧೋಭಾಗಗಳ ನಡುವೆ] ಯಾವ ಅಂತರಿಕ್ಷವಿದೆಯೋ; **ತತ್ ಉ**=ಅದೂ ಕೂಡ; **ಮೇ ಪಿತಾ ಅಭೂತ್**=ನನಗೆ ತಂದೆಯಂತೆ ಪಾಲಕನಾಯಿತು; **ಅಹಮ್**=ನಾನು; **ಸೂರ್ಯಮ್**=ಆದಿತ್ಯಗ್ರಹರೂಪನಾದ ಸೂರ್ಯನನ್ನು; **ಉಭಯತಃ**=ಮೇಲ್ಭಾಗ-ಕೆಳಭಾಗಗಳಲ್ಲಿಯೂ/ದಕ್ಷಿಣೋತ್ತರಭಾಗಗಳಲ್ಲಿಯೂ **ದದರ್ಶ**=ನೋಡಿದೆನು; **ಅಹಮ್**=ನಾನು [ನಿನ್ನ ಅನುಗ್ರಹದಿಂದ] **ಸಮಾನಾನಾಮ್**=ಸಮಾನರ ಮಧ್ಯದಲ್ಲಿ; **ಉತ್ತಮಃ ಭೂಯಾಸಮ್**=ಶ್ರೇಷ್ಠನಾಗುವೆನು.

---

ಯನ್ನು ಮಾಡುವೆವು. ಸೂರ್ಯ, ವಾಯು, ಅಗ್ನಿ ಎಂಬ ಆ ನಾಮಗಳಿಂದಲೂ ನಿನ್ನ ಪರಿಚರ್ಯೆಯನ್ನು ಮಾಡುವೆವು.

[ಸಮಾನಾನಾಮ್(೧೬)ಆ ಸಮುದ್ರಾತ್] ಮಾ ಸಮುದ್ರಾ

ದಾಽಂತರಿಕ್ಷಾತ್ಪ್ರಜಾಪತಿರುದಧಿಂ ಚ್ಯಾವಯಾತೀಂದ್ರಃ

ಪ್ರಸ್ನೌತು ಮರುತೋ ವರ್ಷಯಂತೂ–

---

ಏತಿ । ಸಮುದ್ರಾತ್ । ಏತಿ । ಅಂತರಿಕ್ಷಾತ್ । ಪ್ರಜಾಪತಿರಿತಿ ಪ್ರಜಾ–ಪತಿಃ । ಉದಧಿಮಿತ್ಯುದ–ಧಿಮ್ । ಚ್ಯಾವಯಾತಿ । ಇಂದ್ರಃ । ಪ್ರೇತಿ । ಸ್ನೌತು । ಮರುತಃ । ವರ್ಷಯಂತು ।

---

| ಮಂತ್ರ | ವಿನಿಯೋಗ |
|---|---|
| ಆ ಸಮುದ್ರಾತ್...ವರ್ಷಯಂತು ॥ | ದರ್ಭಗಳಿಂದ ಆದಿತ್ಯಗ್ರಹವನ್ನು ಆಚ್ಯಾವನ [ಸುರಿಸುವುದು] ಮಾಡಲು–ಸಾಯಣ.ಭಾ ಆದಿತ್ಯಗ್ರಹವನ್ನು ಉದ್ಧನನ ಮಾಡಲು– ಭ.ಭಾ.ಭಾ. |

---

+ಪ್ರಜಾಪತಿಃ=ಪ್ರಜಾಪತಿದೇವನು; **ಉದಧಿಮ್**=ಸಮುದ್ರಸಮಾನವಾದ [ಆದಿತ್ಯ ಗ್ರಹವನ್ನು] **ಆ ಸಮುದ್ರಾತ್**=ಸಮುದ್ರಪರ್ಯಂತವಾಗಿ; **ಆ ಚ್ಯಾವಯಾತಿ** = ಸುರಿಸುತ್ತಾನೆ/ಸುರಿಸಲಿ. **ಆ ಅಂತರಿಕ್ಷಾತ್**=ಅಂತರಿಕ್ಷಪರ್ಯಂತವಾಗಿ [ಸುರಿಸಲಿ] **ಇಂದ್ರಃ ಪ್ರಸ್ನೌತು**=[ಹಸುಗಳ ಕೆಚ್ಚಲಿನಂತೆ] ಇಂದ್ರನು [ಆದಿತ್ಯಗ್ರಹವನ್ನು] ಸುರಿಸಲಿ; **ಮರುತಃ ವರ್ಷಯಂತು**=ಮರುತ್ತುಗಳೂ/ವಾಯುವೂ/ಮೋಡಗಳಂತೆ ಮಳೆಗರೆಯಲಿ/ಇಂದ್ರನಿಗೆ ಸಹಾಯಕರಾಗಲಿ.

---

ಈ ಮಂತ್ರದಲ್ಲಿ ಆದಿತ್ಯಗ್ರಹವನ್ನು ಸೂರ್ಯನಂತೆ ವರ್ಣಿಸಿ ಅನ್ವಾರಂಭವನ್ನು ಪ್ರಶಂಸಿಸಲಾಗಿದೆ. ಆದಿತ್ಯಗ್ರಹವು ಕತ್ತಲೆಯನ್ನು ಹೋಗಲಾಡಿಸಲಿ. ತಂದೆಯಂತೆ ರಕ್ಷಿಸಲಿ. ಸಮಾನರ ನಡುವೆ ಶ್ರೇಷ್ಠನನ್ನಾಗಿ ಮಾಡಲಿ ಎಂಬ ಪ್ರಾರ್ಥನೆಯು ಇಲ್ಲಿದೆ.

–ನ್ನಮ್ಭಯ ಪೃಥಿವೀಂ ಭಿಂಧೀದಂ ದಿವ್ಯಂ ನಭಃ । ಉದ್ನೋ

ದಿವ್ಯಸ್ಯ ನೋ ದೇಹೀಶಾನೋ ವಿಸೃಜಾ ದೃತಿಮ್ ॥

---

ಉದಿತಿ । ನಮ್ಭಯ । ಪೃಥಿವೀಮ್ । ಭಿಂಧಿ । ಇದಮ್ । ದಿವ್ಯಮ್ । ನಭಃ ॥

ಉದ್ನಃ । ದಿವ್ಯಸ್ಯ । ನಃ । ದೇಹಿ । ಈಶಾನಃ । ವೀತಿ । ಸೃಜ । ದೃತಿಮ್ ॥

---

| ಮಂತ್ರ | ವಿನಿಯೋಗ |
|---|---|
| ಉನ್ನಮ್ಭಯ...ದೃತಿಮ್ ॥ | ವೃಷ್ಟಿಕಾಮನಿಗೆ ಕಾಮ್ಯವಾಗಿ ವಿಹಿತವಾಗಿರುವ ಹೋಮವನ್ನು ಅನುಷ್ಠಿಸಲು |

---

✦[ಆದಿತ್ಯನೇ!] ಪೃಥಿವೀಮ್=ಭೂಮಿಯನ್ನು; ಉನ್ನಮ್ಭಯ=ನೀರಿನಿಂದ ತೋಯಿಸು; ಇದಮ್ ದಿವ್ಯಮ್ ನಭಃ=ಈ ದ್ಯುಲೋಕದಲ್ಲಿ/ಅಂತರಿಕ್ಷಲೋಕ ದಲ್ಲಿ ಇರುವ ಮೋಡವನ್ನು/[ಮೋಡದಂತೆ ಆದಿತ್ಯಗ್ರಹವನ್ನು] ಭಿಂಧಿ=ಮಳೆ ಯನ್ನು ಸುರಿಸಲು ಭೇದಿಸು. ನಃ=ನಮಗೆ; ದಿವ್ಯಸ್ಯ ಉದ್ನಃ=ಅಂತರಿಕ್ಷದಲ್ಲಿರುವ ನೀರಿನ ಸಮೃದ್ಧಿಯನ್ನು; ದೇಹಿ=ಕೊಡು; ಈಶಾನಃ=ಪ್ರಭುವಾದ ನೀನು; ದೃತಿಮ್ ವಿಸೃಜ=ನೀರು ತುಂಬಿದ ಚರ್ಮದ ಚೀಲದಂತಿರುವ [ಮೋಡವನ್ನು] ನೀರನ್ನು ಸುರಿಸುವಂತೆ ಮಾಡು.

---

ಈ ಆದಿತ್ಯಗ್ರಹವನ್ನು ಸ್ರವಿಸುವಂತೆ ಮಾಡಲು ಈ ಮಂತ್ರದಲ್ಲಿ ಪ್ರಜಾಪತಿ,ಇಂದ್ರ, ಮರುದ್ದೇವತೆಗಳು–ಇವರನ್ನು ಪ್ರಾರ್ಥಿಸಲಾಗಿದೆ. ಈ ಪ್ರಾರ್ಥನೆಯಿಂದ ಸುವೃಷ್ಟಿಯಾಗಲೆಂದು ಕೋರಿದೆ.

ಎಲೈ! ಆದಿತ್ಯನೇ! ನೀನು ಸಮೃದ್ಧವಾದ ಮಳೆಯಿಂದ ಭೂಮಿಯನ್ನು ತೋಯಿಸು. ಅಂತರಿಕ್ಷದಲ್ಲಿರುವ ಮೋಡಗಳನ್ನು ನೀರನ್ನು ಸುರಿಸುವಂತೆ ಭೇದಿಸು. ಸಮರ್ಥನಾದ ನೀನು ನೀರು ತುಂಬಿರುವ ದೊಡ್ಡ ಚರ್ಮ ಚೀಲಗಳ ರೀತಿಯಲ್ಲಿ ಇರುವ ಮೋಡಗಳ ಸಮೂಹವನ್ನು ಸಡಿಲಿಸಿ ನೀರನ್ನು ಸುರಿಸು.

ಇಲ್ಲಿ ಆದಿತ್ಯಗ್ರಹವನ್ನು ಆದಿತ್ಯನಂತೆ ಭಾವಿಸಿ ವರ್ಣಿಸಲಾಗಿದೆ.

ಪಶವ್ರೋ ವಾ ಏತೇ ಯದಾದಿತ್ಯ ಏಷ ರುದ್ರೋ

ಯದಗ್ನಿರೋಷಧೀಃ ಪ್ರಾಸ್ಯಾಗ್ನಾವಾದಿತ್ಯಂ ಜುಹೋತಿ

ರುದ್ರಾದೇವ ಪಶೂನಂತರ್ದಧಾತ್ಯಥೋ ಓಷಧೀಷ್ವೇವ

ಪಶೂ[ಪಶೂನ್(೧೭)ಪ್ರತಿಷ್ಠಾಪಯತಿ]ನ್ಪ್ರತಿಷ್ಠಾಪಯತಿ

---

ಪಶವಃ। ವೈ। ಏತೇ। ಯತ್। ಆದಿತ್ಯಃ। ಏಷಃ। ರುದ್ರಃ। ಯತ್। ಅಗ್ನಿಃ। ಓಷಧೀಃ। ಪ್ರಾಸ್ಯೇತಿ ಪ್ರ-ಅಸ್ಯ। ಅಗ್ನೌ। ಆದಿತ್ಯಮ್। ಜುಹೋತಿ। ರುದ್ರಾತ್। ಏವ। ಪಶೂನ್। ಅಂತಃ। ದಧಾತಿ। ಅಥೋ ಇತಿ। ಓಷಧೀಷು। ಏವ। ಪಶೂನ್।(೧೭)। ಪ್ರತೀತಿ। ಸ್ಥಾಪಯತಿ।

---

ಬ್ರಾಹ್ಮಣಭಾಗ ಏವರಣೆ

**ಹೋಮವಿಧಿ-ಫಲಪ್ರಶಂಸೆ**

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಆದಿತ್ಯಃ ಏತೇ ಪಶವಃ ವೈ** | ಆದಿತ್ಯಗ್ರಹವು ಯಾವುದುಂಟೋ ಅದು [ಪಶುಸಾಧನವಾಗಿ] ಪಶುಸ್ವರೂಪವೇ ಆಗಿದೆ. |
| **ಯತ್ ಅಗ್ನಿಃ ಏಷಃ ರುದ್ರಃ** | ಅಗ್ನಿದೇವನು ರುದ್ರಸ್ವರೂಪನೇ ಆಗಿರುತ್ತಾನೆ. |
| **ಓಷಧೀಃ ಪ್ರಾಸ್ಯ** | ಮೊದಲು ಸಸ್ಯಗಳನ್ನು [ಅಗ್ನಿಯಲ್ಲಿ ಹಾಕಿ] |
| **ಅಗ್ನೌ ಆದಿತ್ಯಮ್ ಜುಹೋತಿ** | ಅಗ್ನಿಯಲ್ಲಿ ಆದಿತ್ಯಗ್ರಹವನ್ನು ಹೋಮ ಮಾಡಬೇಕು [ವಿಧಿ] |
| **ರುದ್ರಾತ್ ಏವ ಪಶೂನ್ ಅಂತಃ ದಧಾತಿ** | ರುದ್ರರೂಪನಾದ ಅಗ್ನಿಯ ಸಮೀಪದಿಂದ ಪಶುಗಳನ್ನು ದೂರ[ಕಾಣದಂತೆ] ಮಾಡುತ್ತಾನೆ. |
| **ಅಥೋ ಓಷಧೀಷು ಏವ ಪಶೂನ್ ಪ್ರತಿಷ್ಠಾಪಯತಿ** | ಮತ್ತು ಓಷಧಿಗಳಲ್ಲಿಯೇ ಪಶುಗಳನ್ನು ನೆಲೆಗೊಳಿಸುತ್ತಾನೆ. |

ಕವಿರ್ಯಜ್ಞಸ್ಯ ವಿತನೋತಿ ಪಂಥಾಂ ನಾಕಸ್ಯ ಪೃಷ್ಠೇ ಅಧಿ ರೋಚನೇ ದಿವಃ । ಯೇನ ಹವ್ಯಂ ವಹಸಿ ಯಾಸಿ ದೂತ ಇತಃ ಪ್ರಚೇತಾ ಅಮುತಸ್ಸನೀಯಾನ್ ।

---

ಕವಿಃ । ಯಜ್ಞಸ್ಯ । ವೀತಿ । ತನೋತಿ । ಪಂಥಾಮ್ । ನಾಕಸ್ಯ । ಪೃಷ್ಠೇ । ಅಧೀತಿ । ರೋಚನೇ । ದಿವಃ ॥ ಯೇನ । ಹವ್ಯಮ್ । ವಹಸಿ । ಯಾಸಿ । ದೂತಃ । ಇತಃ । ಪ್ರಚೇತಾ ಇತಿ ಪ್ರ-ಚೇತಾಃ । ಅಮುತಃ । ಸನೀಯಾನ್ ॥

---

| ಮಂತ್ರ | ವಿನಿಯೋಗ |
|---|---|
| ಕವಿರ್ಯಜ್ಞಸ್ಯ...ಸನೀಯಾನ್ ॥ | ಆದಿತ್ಯಗ್ರಹವನ್ನು ಒಯ್ಯಲು -ಸಾ.ಭಾ. ಪ್ರಾಯಣೀಯ-ಉದಯನೀಯಗಳ ಸ್ರುವ ಹೋಮಕ್ಕಾಗಿ -ಭ.ಭಾ.ಭಾ |

---

✦**ಪ್ರಚೇತಾಃ**=ಕರ್ಮಾನುಷ್ಠಾನವನ್ನೂ, ಕರ್ಮಗಳನ್ನೂ ಚೆನ್ನಾಗಿ ತಿಳಿದಿರುವ; **ಅಮುತಃ ಸನೀಯಾನ್**=ಸ್ವರ್ಗಲೋಕದಲ್ಲಿ ಅತಿಶಯವಾಗಿ ಫಲವನ್ನು ಕೊಡುವ; **ದೂತಃ**=ದೇವತೆಗಳಿಗೆ ಹವ್ಯವನ್ನು ಒಯ್ಯುವ ದೂತನಂತಿರುವ [ಅಗ್ನಿದೇವನೇ!] [ನೀನು] **ಯೇನ ಹವ್ಯಮ್ ವಹಸಿ**=ಯಾವ ಮಾರ್ಗದಿಂದ ಹವಿಸ್ಸುಗಳನ್ನು ಒಯ್ಯುತ್ತೀಯೋ; **ಇತಃ**=ಈ ಲೋಕದಿಂದ [ಹೊರಟು] **ಯಾಸಿ**=[ಯಾವ ಮಾರ್ಗದಿಂದ] ಹೋಗುತ್ತೀಯೋ; [ಅಂತಹ] **ಅಧಿರೋಚನೇ**=ಅಧಿಕವಾಗಿ ಪ್ರಕಾಶಿಸುವ ದೇವಮಾರ್ಗದಲ್ಲಿ; **ದಿವಃ ಪೃಷ್ಠೇ**=ದ್ಯುಲೋಕದ ಮೇಲ್ಭಾಗದಲ್ಲಿ; **ಯಜ್ಞಸ್ಯ ಕವಿಃ**=ಯಾಗದ ವಿದ್ವಾಂಸನಾದ [ಈ ಆದಿತ್ಯಗ್ರಹವು/ಆದಿತ್ಯನು] **ನಾಕಸ್ಯ ಪಂಥಾಮ್**=ಸ್ವರ್ಗದಮಾರ್ಗವನ್ನು; **ವಿತನೋತಿ**=ತಡೆಯಿಲ್ಲದಂತೆ ವಿಸ್ತರಿಸುತ್ತಾನೆ.

---

**ಆದಿತ್ಯಗ್ರಹಹೋಮವನ್ನು ಮಾಡುವಾಗ ಓಷಧಿಗಳನ್ನು ಅಗ್ನಿಯಲ್ಲಿ ಹಾಕಿ ಹೋಮ ಮಾಡುವುದರಿಂದ ಪಶುಗಳಿಗೂ ರುದ್ರನಿಗೂ ಸಂಬಂಧವಿಲ್ಲದಂತೆ ಆಗುತ್ತದೆ.**

ಯಾಸ್ತೇ ವಿಶ್ವಾಸ್ಸಮಿಧಸ್ಸಂತ್ಯಗ್ನೇ ಯಾಃ ಪೃಥಿವ್ಯಾಂ ಬರ್‌ಹಿಷಿ ಸೂರ್ಯೇ ಯಾಃ । ತಾಸ್ತೇ ಗಚ್ಛಂತ್ವಾಹುತಿಂ ಘೃತಸ್ಯ ದೇವಾಯತೇ ಯಜಮಾನಾಯ ಶರ್ಮ ॥

---

ಯಾಃ । ತೇ । ವಿಶ್ವಾಃ । ಸಮಿಧ ಇತಿ ಸಮ್-ಇಧಃ । ಸಂತಿ । ಅಗ್ನೇ । ಯಾಃ । ಪೃಥಿವ್ಯಾಮ್ । ಬರ್‌ಹಿಷಿ । ಸೂರ್ಯೇ । ಯಾಃ ॥ ತಾಃ । ತೇ । ಗಚ್ಛಂತು । ಆಹುತಿಮಿತ್ಯಾ-ಹುತಿಮ್ । ಘೃತಸ್ಯ । ದೇವಾಯತ ಇತಿ ದೇವ-ಯತೇ । ಯಜಮಾನಾಯ । ಶರ್ಮ ॥

---

| ಮಂತ್ರ | ವಿನಿಯೋಗ |
|---|---|
| ಯಾಸ್ತೇ...ಶರ್ಮ ॥ | ಆಹವನೀಯದಲ್ಲಿ ದರ್ಭೆಗಳನ್ನು ಹಾಕಲು-ಸಾ.ಭಾ<br>ಪ್ರಾಯಣೀಯ-ಉದಯನೀಯಗಳ ಸ್ರುವಹೋಮಕ್ಕಾಗಿ<br>-ಭ.ಭಾ.ಭಾ |

---

✦ಅಗ್ನೇ=ಅಗ್ನಿದೇವನೇ! ತೇ=ನಿನ್ನ; ಯಾಃ=ಯಾವ; ವಿಶ್ವಾಃ ಸಮಿಧಃ=ಪ್ರಕಾಶಿಸುವ ಎಲ್ಲ ಜ್ವಾಲೆಗಳು; ಪೃಥಿವ್ಯಾಮ್=ಭೂಲೋಕದಲ್ಲಿ; ಸಂತಿ=ಇವೆಯೋ; ಯಾಃ= ಯಾವ ಜ್ವಾಲೆಗಳು; ಬರ್‌ಹಿಷಿ=ಯಜ್ಞದಲ್ಲಿ [ಇವೆಯೋ]; ಪೃಥಿವ್ಯಾಮ್ ಬರ್‌ಹಿಷಿ=ಭೂಲೋಕದಲ್ಲಿ ಯಜ್ಞವೇದಿಯಲ್ಲಿ ಇವೆಯೋ; ಯಾಃ=ಯಾವ ಜ್ವಾಲೆಗಳು ಸೂರ್ಯೇ=ಸೂರ್ಯನಲ್ಲಿ [ಇವೆಯೋ] ತಾಃ ತೇ ಸಮಿಧಃ=ಆ ನಿನ್ನ ಪ್ರಕಾಶಿಸುವ ಜ್ವಾಲೆಗಳು; ಘೃತಸ್ಯ=ತುಪ್ಪದಂತೆ ಪ್ರಿಯವಾದ; ಆಹುತಿಮ್ ಗಚ್ಛಂತು= ಆಹುತಿಯನ್ನು ಹೊಂದಲಿ; ದೇವಾಯತೇ=ದೇವತೆಗಳನ್ನು ಒಲಿಸಿಕೊಳ್ಳಲು ಬಯಸುವ; ಯಜಮಾನಾಯ=ಯಜಮಾನನಿಗೆ; ಶರ್ಮ=ಸುಖವನ್ನು [ಕೊಡಲಿ]

---

ಇದರಿಂದ ಯಜಮಾನನ ಪಶುಗಳಿಗೆ ಬಾಧೆಯಾಗುವುದಿಲ್ಲ. ಪಶುಗಳು ಕ್ಷೇಮವಾಗಿರುತ್ತವೆ.

ಆಶಾಸಾನಸ್ಸುವೀರ್ಯಗ್‍ಂ ರಾಯಸ್ಪೋಷಗ್‍ಗ್ಂ

ಸ್ವಶ್ವಿಯಮ್ । ಬೃಹಸ್ಪತಿನಾ ರಾಯಾ ಸ್ವಗಾಕೃತೋ

ಮಹ್ಯಂ ಯಜಮಾನಾಯ ತಿಷ್ಠ ॥ ೧೮-5 ॥

[ಸಮಾನಾನಾಮೋಷಧೀಷ್ವೇವ ಪಶೂನ್ಮಹ್ಯಂ ಯಜಮಾನಾಯೈಕಂ ಚ ॥]

---

ಆಶಾಸಾನ ಇತ್ಯಾ-ಶಾಸಾನಃ । ಸುವೀರ್ಯಮಿತಿ ಸು-ವೀರ್ಯಮ್ । ರಾಯಃ । ಪೋಷಮ್ । ಸ್ವಶ್ವಿಯಮಿತಿ ಸು-ಅಶ್ವಿಯಮ್ ॥ ಬೃಹಸ್ಪತಿನಾ । ರಾಯಾ । ಸ್ವಗಾಕೃತ ಇತಿ ಸ್ವಗಾ-ಕೃತಃ । ಮಹ್ಯಮ್ । ಯಜಮಾನಾಯ । ತಿಷ್ಠ ॥ ೧೮ ॥

---

| ಮಂತ್ರ | ವಿನಿಯೋಗ |
| --- | --- |
| ಆಶಾಸಾನಃ...ತಿಷ್ಠ ॥* | ಯೂಪೋಪಸ್ಥಾನವನ್ನು ಮಾಡಲು |

---

✦[ಎಲೈ ಯೂಪವೇ!] ಸುವೀರ್ಯಮ್=ಒಳ್ಳೆಯ ಶಕ್ತಿಯಿಂದ ಕೂಡಿರುವ; ಸ್ವಶ್ವಿಯಮ್=ಒಳ್ಳೆಯ ಅಶ್ವಾದಿ ಪಶುಸಂಪತ್ತಿನಿಂದ ಯುಕ್ತವಾದ; ರಾಯಃ ಪೋಷಮ್ =ನಾನಾವಿಧವಾದ ಐಶ್ವರ್ಯದ ಪುಷ್ಟಿಯನ್ನೂ; ಮಹ್ಯಮ್ ಯಜಮಾನಾಯ= ಯಜಮಾನನಾದ ನನಗಾಗಿ; ಆಶಾಸಾನಃ=ಕೋರುವವನಾಗಿ; ಬೃಹಸ್ಪತಿನಾ= ಬೃಹಸ್ಪತಿದೇವನಿಂದ; ರಾಯಾ ಸ್ವಗಾಕೃತಃ=ಧನಾದಿನಿಮಿತ್ತವಾಗಿ ಯಜಮಾನನ ಸ್ವಾಧೀನ ಮಾಡಲ್ಪಟ್ಟವನಾಗಿ; ತಿಷ್ಠ=ನಿಲ್ಲು.

---

| ಪಠಿತವಾದ ಮಂತ್ರ | ಹೊಂದಿಸಿಕೊಳ್ಳಬೇಕಾದ ಮಂತ್ರಗಳು |
| --- | --- |
| *೧)ಯೇ ದೇವಾ... | ಉರುಗ್‍ಂ ಹಿ ರಾಜಾ |
| ೨)ಸೂರ್ಯೋ ಮಾ... | ಕದಾಚನ ಸ್ತರೀರಸಿ |
| ೩)ಆಶಾಸಾನಃ... | ಸಮುದ್ರಂ ಗಚ್ಛ-ತೈ.ಸಂ.1.3/4 |

* ಇಲ್ಲಿ ಪಠಿತವಾಗಿರುವ ಮಂತ್ರಗಳನ್ನು ವಿನಿಯೋಗಾನುಸಾರವಾಗಿ ಬೇರೆಯ ಕಾಂಡದಲ್ಲಿ ಪಠಿತವಾದ ಮಂತ್ರಗಳೊಡನೆ ಹೊಂದಿಸಿಕೊಳ್ಳಬೇಕೆಂದು ಸಾಯಣಭಾಷ್ಯದಲ್ಲಿ ವಿವರಿಸಿದ್ದಾರೆ.

ಇಲ್ಲಿ ಆದಿತ್ಯ-ಅಗ್ನಿಗಳ ಸ್ತುತಿಯಿದೆ. ಅಗ್ನಿದೇವನು ದೇವತೆಗಳಿಗೆ ಹವ್ಯವನ್ನು ಒಯ್ಯುತ್ತಾನೆ. ಹವ್ಯಗಳನ್ನು ಸೇವಿಸಿ ತೃಪ್ತನಾದ ಆದಿತ್ಯನು ಸ್ವರ್ಗಮಾರ್ಗವನ್ನು ವಿಸ್ತರಿಸುತ್ತಾನೆ. ಯಜಮಾನನ ಕಾಮಿಕಫಲಗಳನ್ನೂ ದೇವತೆಗಳು ಅನುಗ್ರಹಿಸು ತ್ತಾರೆ/ ಅನುಗ್ರಹಿಸಲಿ.

ಅಗ್ನಿದೇವನೇ! ಪ್ರಕಾಶಮಾನವಾದ ನಿನ್ನ ಜ್ವಾಲೆಗಳು ಭೂಲೋಕದಲ್ಲಿ, ಯಜ್ಞ ವೇದಿಯಲ್ಲಿ, ಸೂರ್ಯನಲ್ಲಿಯೂ ಇವೆ. ಅವು ಈ ಆಹುತಿಯನ್ನು ಪಡೆದು ಯಜಮಾನನಿಗೆ ಸುಖವನ್ನೀಯಲಿ.

ಈ ಮಂತ್ರದಲ್ಲಿ 'ಸಮಿಧಃ' ಎಂಬ ಪದಕ್ಕೆ ವಿನಿಯೋಗಾನುಸಾರವಾಗಿ ಚೆನ್ನಾಗಿ ಉರಿಯುವ ಜ್ವಾಲೆಗಳು ಎಂದು ಅರ್ಥ ಹೇಳಲಾಗಿದೆ. ಅಗ್ನಿಯಲ್ಲಿ ದರ್ಭೆಗಳನ್ನು ಹಾಕುವುದರಿಂದ 'ಘೃತಸ್ಯ' ಎಂಬುದಕ್ಕೆ 'ಘೃತವತ್' ಎಂದು ಅರ್ಥ ಹೇಳಲಾಗಿದೆ.

'ಉದ್ಯಂತಂ ವಾವಾऽऽದಿತ್ಯಮಗ್ನಿರನು ಸಮಾರೋಹತಿ' ಎಂದು ಅಗ್ನಿಹೋತ್ರ ಪ್ರಕರಣದಲ್ಲಿದೆ. ಉದಿಸುತ್ತಿರುವ ಸೂರ್ಯನನ್ನು ಅಗ್ನಿಯು ಪ್ರವೇಶಿಸುವನು ಎಂದು ಅದರ ಅರ್ಥ. ಹೀಗಾಗಿ ಅಗ್ನಿಯ ಜ್ವಾಲೆಯು ಸೂರ್ಯನಲ್ಲಿದೆ ಎಂದು ಹೇಳಿದೆ.

ಎಲೈ! ಯೂಪವೇ! ನನಗಾಗಿ ಐಶ್ವರ್ಯದ ಪುಷ್ಟಿಯನ್ನು ಕೋರುವವನಾಗಿ ಬೃಹಸ್ಪತಿದೇವನಿಂದ ಸ್ವಾಧೀನ ಮಾಡಲ್ಪಟ್ಟವನಾಗಿ ನಿಲ್ಲು.

---

## ವಿನಿಯೋಗ ಸಂಗ್ರಹ

[1]ಸೂರ್ಯೋ ತೃತೀಯಸವನ ಆದಿತ್ಯಗ್ರಹಹಸ್ತಕಃ ।
ಉತ್ತಿಷ್ಠೇ[2]ದಹಮಿತ್ಯಸ್ಮಾತ್ ಸ್ವಾಮ್ಯನ್ವಾರಭತೇ ಗ್ರಹಮ್ ॥
[3]ಆ ಸಮು ಚ್ಯಾವಯೇದ್ದರ್ಭೈರುನ್ನಂ[4] ವೃಷ್ಟ್ಯರ್ಥಹೋಮಕಃ ।
[5] ಕವಿರ್ಹರೇದ್ಗ್ರಹಂ ಯಾಸ್ತೇ[6] ವಹ್ನೌ ಪ್ರಾಸ್ಯತಿ ದರ್ಭಕಾನ್ ॥
[7]ಆಶಾ ಯೂಪೋಪಸ್ಥಿತಿಃ ಸ್ಯಾತ್ಸಪ್ತ ಮಂತ್ರಾ ಇಹೇರಿತಾಃ ॥

ಅನುವಾಕದ ಮಂತ್ರಗಳ ಸಂಖ್ಯೆ–7



## ॥ ಷಷ್ಠೋಽನುವಾಕಃ ॥

ಸಂ ತ್ವಾ ನಹ್ಯಾಮಿ ಪಯಸಾ ಘೃತೇನ ಸಂ ತ್ವಾ ನಹ್ಯಾಮ್ಯಪ ಓಷಧೀಭಿಃ । ಸಂ ತ್ವಾ ನಹ್ಯಾಮಿ ಪ್ರಜಯಾಽಹಮದ್ಯ ಸಾ ದೀಕ್ಷಿತಾ ಸನವೋ ವಾಜಮಸ್ಮೇ ॥

---

ಸಮಿತಿ । ತ್ವಾ । ನಹ್ಯಾಮಿ । ಪಯಸಾ । ಘೃತೇನ । ಸಮಿತಿ । ತ್ವಾ । ನಹ್ಯಾಮಿ । ಅಪಃ । ಓಷಧೀಭಿರಿತ್ಯೋಷಧಿ-ಭಿಃ ॥ ಸಮಿತಿ । ತ್ವಾ । ನಹ್ಯಾಮಿ । ಪ್ರಜಯೇತಿ ಪ್ರ-ಜಯಾ । ಅಹಮ್ । ಅದ್ಯ । ಸಾ । ದೀಕ್ಷಿತಾ । ಸನವಃ । ವಾಜಮ್ । ಅಸ್ಮೇ ಇತಿ ॥

---

ಹಿಂದಿನ ಐದನೆಯ ಅನುವಾಕದಲ್ಲಿ ಆದಿತ್ಯಗ್ರಹದ ಮಂತ್ರಗಳು ಹೇಳಲ್ಪಟ್ಟವು. ಈ ಆರನೆಯ ಅನುವಾಕದಲ್ಲಿ ಯಜಮಾನನ ಪತ್ನಿಗೆ ಸಂಬಂಧಿಸಿದ ಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಸಂ ತ್ವಾ...ವಾಜಮಸ್ಮೇ ॥ | ಪತ್ನಿಯ ಯೋಕ್ತ್ರಬಂಧನವನ್ನು ಮಾಡಲು |

---

✦[ಅಧ್ವರ್ಯುರ್ವಾದ]ಅಹಮ್=ನಾನು; ಪಯಸಾ ಘೃತೇನ=ಹಾಲಿನ ಮತ್ತು ತುಪ್ಪದ ನಿಮಿತ್ತವಾಗಿ; ತ್ವಾ=ನಿನ್ನನ್ನು; ಸಮ್ ನಹ್ಯಾಮಿ=[ಯೋಕ್ತ್ರದಿಂದ] ಬಂಧಿಸುತ್ತೇನೆ; ಓಷಧೀಭಿಃ=ಸಸ್ಯವರ್ಗದಿಂದ ಕೂಡಿದ; ಅಪಃ=ನೀರನ್ನು ಉದ್ದೇಶಿಸಿ; ತ್ವಾ=ನಿನ್ನನ್ನು; ಸಮ್ ನಹ್ಯಾಮಿ=[ಯೋಕ್ತ್ರದಿಂದ] ಕಟ್ಟುತ್ತೇನೆ; ಅದ್ಯ=ಈ ಯಜ್ಞ ಕರ್ಮದಲ್ಲಿ; ಪ್ರಜಯಾ=ಮಕ್ಕಳ ನಿಮಿತ್ತವಾಗಿ; ತ್ವಾ ಸಮ್ ನಹ್ಯಾಮಿ=ನಿನ್ನನ್ನು ಯೋಕ್ತ್ರದಿಂದ ದೃಢವಾಗಿ ಕಟ್ಟುತ್ತೇನೆ; ಸಾ=ಅಂತಹ; [ತ್ವಮ್=ನೀನು] ಅಸ್ಮೇ= ನಮ್ಮಲ್ಲಿ; ವಾಜಮ್=ಅನ್ನವನ್ನು; ಸನವಃ=ಕೊಡಲು; ದೀಕ್ಷಿತಾ=ದೀಕ್ಷಿತಳಾಗು.

**ಪ್ರೈತು ಬ್ರಹ್ಮಣಸ್ಪತ್ನೀ ವೇದಿಂ ವರ್ಣೇನ ಸೀದತು ।**

**ಅಥಾಹಮನುಕಾಮಿನೀ ಸ್ವೇ ಲೋಕೇ ವಿಶಾ ಇಹ ॥**

---

ಪ್ರೇತಿ । ಏತು । ಬ್ರಹ್ಮಣಃ । ಪತ್ನೀ । ವೇದಿಮ್ । ವರ್ಣೇನ । ಸೀದತು ॥ ಅಥ । ಅಹಮ್ । ಅನುಕಾಮಿನೀತ್ಯನು–ಕಾಮಿನೀ । ಸ್ವೇ । ಲೋಕೇ । ವಿಶೈ । ಇಹ ॥

---

| ಮಂತ್ರ | ವಿನಿಯೋಗ |
|---|---|
| ಪ್ರೈತು...ಸೀದತು ॥ | ಪ್ರತಿಪ್ರಸ್ಥಾತನು ಪತ್ನಿಯನ್ನು ವೇದಿಗೆ ಕರೆತರಲು |
| ಅಥಾಹ...ವಿಶಾ ಇಹ ॥ | ಪತ್ನಿಯು ತನ್ನ ಸ್ಥಾನದಲ್ಲಿ ಕುಳಿತುಕೊಳ್ಳಲು |
| ಪ್ರೈತು...ಇಹ ॥ | ಪತ್ನಿಯು ಹೇಳಲು – ಭ.ಭಾ.ಭಾ |

---

+**ಬ್ರಹ್ಮಣಃ ಪತ್ನೀ**=ಬ್ರಾಹ್ಮಣನಾದ ಯಜಮಾನನ ಪತ್ನಿಯು; **ವೇದಿಮ್ ಪ್ರ ಏತು**=ವೇದಿಯನ್ನು ಕುರಿತು ಬೇಗನೆ ಬರಲಿ; **ವೇದಿಮ್**=ಯಜ್ಞವೇದಿಯನ್ನು/ ಗಾರ್ಹಪತ್ಯದ ಪಶ್ಚಾದ್ಭಾಗವನ್ನು; **ವರ್ಣೇನ ಸೀದತು**=ಸ್ವರೂಪದಿಂದ ಅಲಂಕರಿಸಿ ಕುಳಿತುಕೊಳ್ಳಲಿ; +**ಅಥ**=ಯಜ್ಞವೇದಿಗೆ ಬಂದ ಬಳಿಕ; **ಅಹಮ್**=ಯಜಮಾನನ ಪತ್ನಿಯಾದ ನಾನು; **ಅನುಕಾಮಿನೀ**=ಯಜಮಾನನ ಅನುಕೂಲ್ಯವನ್ನು ಬಯಸುತ್ತಾ; **ಇಹ**=ಈ ಶಾಲಾಮುಖೀಯ ಸಮೀಪದಲ್ಲಿ; **ಸ್ವೇ ಲೋಕೇ**=ನನ್ನ ಸ್ಥಾನದಲ್ಲಿ; **ವಿಶೈ**=ಕುಳಿತುಕೊಳ್ಳುವೆನು;

---

**ಅಧ್ವರ್ಯುವಾದ ನಾನು ಕ್ಷೀರ, ಆಜ್ಯ, ನೀರು, ಓಷಧಿಗಳು, ಪ್ರಜೆಗಳು– ಇವುಗಳಿಗಾಗಿ ನಿನ್ನನ್ನು ಈ ಯೋಕ್ತ್ರದಿಂದ ದೃಢವಾಗಿ ಬಂಧಿಸುತ್ತೇನೆ. ದೀಕ್ಷಾ ಸಂಸ್ಕಾರಸಂಸ್ಕೃತಳೂ ಯಜಮಾನಪತ್ನಿಯೂ ಆದ ನೀನು ನಮಗೆ ಅನ್ನವನ್ನು (ಹವಿಸ್ಸನ್ನು) ಒದಗಿಸಿಕೊಡು.**

**ಯಜಮಾನನ ಪತ್ನಿಯು ವೇದಿಗೆ ಬೇಗನೆ ಬರಲಿ. ಬಂದು ಯಜ್ಞವೇದಿಯನ್ನು ಅಲಂಕರಿಸಿ ಕುಳಿತುಕೊಳ್ಳಲಿ.**

# ಸುಪ್ರಜಸಸ್ತ್ವಾ ವಯಗ್ಂ ಸುಪತ್ನೀರುಪಸೇದಿಮ । ಅಗ್ನೇ ಸಪತ್ನದಮ್ಭನಮದಬ್ಧಾಸೋ ಅದಾಭ್ಯಮ್ ॥

---

ಸುಪ್ರಜಸ ಇತಿ ಸು-ಪ್ರಜಸಃ । ತ್ವಾ । ವಯಮ್ । ಸುಪತ್ನೀರಿತಿ ಸು-ಪತ್ನೀಃ । ಉಪೇತಿ । ಸೇದಿಮ ॥ ಅಗ್ನೇ । ಸಪತ್ನದಂಭನಮಿತಿ ಸಪತ್ನ-ದಂಭನಮ್ । ಅದಬ್ಧಾಸಃ । ಅದಾಭ್ಯಮ್ ॥

---

| ಮಂತ್ರ | ವಿನಿಯೋಗ |
| --- | --- |
| ಸುಪ್ರಜಸಸ್ತ್ವಾ...ಅದಾಭ್ಯಮ್ ॥ | ಪತ್ನಿಯು ಜಪವನ್ನು ಮಾಡಲು |

---

+ಅಗ್ನೇ=ಅಗ್ನಿದೇವನೇ! ಸುಪ್ರಜಸಃ=ಸುಪುತ್ರವತಿಯರಾದ; ಸುಪತ್ನೀಃ=ಧರ್ಮಪತ್ನಿಯರಾದ/ಒಳ್ಳೆಯ ಗಂಡನನ್ನು ಪಡೆದಿರುವ; ಅದಬ್ಧಾಸಃ=[ನಿನ್ನ ಅನುಗ್ರಹದಿಂದ] ಯಾರಿಂದಲೂ ತಿರಸ್ಕರಿಸಲ್ಪಡದಿರುವ; ವಯಮ್=ನಾವು; ಸಪತ್ನದಂಭನಮ್=ಶತ್ರುದಮನನಾದ; ಅದಾಭ್ಯಮ್=ಯಾರಿಂದಲೂ ತಿರಸ್ಕರಿಸಲು ಸಾಧ್ಯವಿಲ್ಲದ; ತ್ವಾ ಉಪ ಸೇದಿಮ=ನಿನ್ನನ್ನು ಹೊಂದಿ [ನಿನ್ನ ಸಮೀಪದಲ್ಲಿ] ಕುಳಿತುಕೊಳ್ಳುತ್ತೇವೆ.

---

ನಾನು ಯಜಮಾನನ ಅನುಕೂಲ್ಯವನ್ನು ಬಯಸುವವಳಾಗಿ ಇಲ್ಲಿ ನನ್ನ ಸ್ಥಾನದಲ್ಲಿ ಕುಳಿತುಕೊಳ್ಳುವೆನು.

ಅಗ್ನಿಯೇ! ನಿನ್ನ ಅನುಗ್ರಹದಿಂದ ನಾವು ಸುಪುತ್ರವತಿಯರೂ ಧರ್ಮಪತ್ನಿಯರೂ ಆಗಿರುತ್ತೇವೆ. ಯಾರೂ ನಮ್ಮನು ಹಿಂಸಿಸಲಾರರು. ಯಾವ ಶತ್ರುಗಳೂ ನಿನ್ನನ್ನು ಎದುರಿಸಲಾರರು. ಅಂತಹ ನಿನ್ನ ಬಳಿಗೆ ಬಂದು ನಿನ್ನ ಸಮೀಪದಲ್ಲಿ ಕುಳಿತು ಕೊಳ್ಳುತ್ತೇವೆ.

ಇಮಂ ವಿಷ್ಯಾಮಿ ವರುಣಸ್ಯ ಪಾಶಂ [ಪಾಶಮ್(೧೯)] ಯಮ ಬಧ್ನೀತ ಸವಿತಾ ಸುಕೇತಃ । ಧಾತುಶ್ಚ ಯೋನೌ ಸುಕೃತಸ್ಯ ಲೋಕೇ ಸ್ಯೋನಂ ಮೇ ಸಹ ಪತ್ಯಾ ಕರೋಮಿ ॥ ಪ್ರೇಹ್ಯುದೇಹ್ಯ೮

---

ಇಮಮ್ । ವೀತಿ । ಸ್ಯಾಮಿ । ವರುಣಸ್ಯ । ಪಾಶಮ್ ।(೧೯)। ಯಮ್ । ಅಬಧ್ನೀತ । ಸವಿತಾ । ಸುಕೇತ ಇತಿ ಸು-ಕೇತಃ ॥ ಧಾತುಃ । ಚ । ಯೋನೌ । ಸುಕೃತಸ್ಯೇತಿ ಸು-ಕೃತಸ್ಯ । ಲೋಕೇ । ಸ್ಯೋನಮ್ । ಮೇ । ಸಹ । ಪತ್ಯಾ । ಕರೋಮಿ ॥ ಪ್ರೇತಿ । ಇಹಿ । ಉದೇಹೀತ್ಯುತ್-ಏಹಿ ।

---

| ಮಂತ್ರ | ವಿನಿಯೋಗ |
|---|---|
| ಇಮಂ...ಕರೋಮಿ ॥ | ಪತ್ನಿಯು ಯೋಕ್ತ್ರವನ್ನು ಬಿಚ್ಚಲು |
| ಪ್ರೇಹ್ಯುದೇಹಿ...ಹಿಗ್‌ಂಸೀಃ ॥ | ನೇಷ್ಟನು ಪನ್ನೇಜನೀಜಲವನ್ನು ತರಲು ಯಜಮಾನಪತ್ನಿಯನ್ನು ಕರೆದೊಯ್ಯಲು |

---

✦**ಸುಕೇತಃ**=ಒಳ್ಳೆಯ ಜ್ಞಾನವುಳ್ಳ; **ಸವಿತಾ**=ಪ್ರೇರಕನಾದ ಅಂತರ್ಯಾಮಿಯಾದ ಪರಮೇಶ್ವರನು; **ಯಮ್ ವರುಣಸ್ಯ ಪಾಶಮ್**=ವರುಣಪಾಶರೂಪವಾದ ಯಾವ ಯೋಕ್ತ್ರವನ್ನು; **ಅಬಧ್ನೀತ**=ಕಟ್ಟಿದನೋ; **ಇಮಮ್ ವಿಷ್ಯಾಮಿ**=ಅಂತಹ ಈ ಯೋಕ್ತ್ರವನ್ನು ಬಿಚ್ಚಿ ಹಾಕುತ್ತೇನೆ; [ಬಳಿಕ] **ಸುಕೃತಸ್ಯ ಲೋಕೇ**=ಪುಣ್ಯಫಲರೂಪಲೋಕವಾದ; **ಧಾತುಃ ಯೋನೌ**=ಪರಮೇಶ್ವರನ ಸ್ಥಾನದಲ್ಲಿ; **ಮೇ**=ನನ್ನ; **ಪತ್ಯಾ ಚ ಸಹ**=ಪತಿಯೊಡನೆಯೂ ಕೂಡಿದವಳಾಗಿ; **ಸ್ಯೋನಮ್ ಕರೋಮಿ**=ಸುಖವಾಗಿರುವೆನು.
✦[ಎಲೈ! ಯಜಮಾನಪತ್ನಿಯೇ!] [ಪನ್ನೇಜನೀಜಲವನ್ನು ತರಲು] **ಪ್ರೇಹಿ**=ಹೊರಡು; **ಉದೇಹಿ**=ಎದ್ದು ಬೇಗನೆ ಹೊರಡು;

ಋತಸ್ಯ ವಾಮೀರನ್ವಗ್ನಿಸ್ತೇಽಗ್ರಂ ನಯತ್ವದಿತಿರ್ಮಧ್ಯಂ ದದತಾಗ್ಂ ರುದ್ರಾವಸೃಷ್ಟಾಽಸಿ ಯುವಾ ನಾಮ ಮಾ ಮಾ ಹಿಗ್ಂಸೀಃ

---

ಋತಸ್ಯ । ವಾಮೀಃ । ಅನ್ವಿತಿ । ಅಗ್ನಿಃ । ತೇ । ಅಗ್ರಮ್ । ನಯತು । ಅದಿತಿಃ । ಮಧ್ಯಮ್ । ದದತಾಮ್ । ರುದ್ರಾವಸೃಷ್ಟೇತಿ ರುದ್ರ-ಅವಸೃಷ್ಟಾ । ಅಸಿ । ಯುವಾ । ನಾಮ । ಮಾ । ಮಾ । ಹಿಗ್ಂಸೀಃ ।

---

**ಋತಸ್ಯ ವಾಮೀಃ ಅಗ್ನಿಃ**=ಯಜ್ಞದ ಪ್ರೇರಕನಾದ ಅಗ್ನಿಯು; **ಅನು**=ಅನುಮತಿ ಕೊಡುವವನಾಗಿ; **ತೇ ಅಗ್ರಮ್ ನಯತು**=ನಿನ್ನನ್ನು ಮುಂದೆ ಹೋಗುವಂತೆ ಪ್ರೇರಿಸಲಿ; **ಅದಿತಿಃ**=ಅದಿತಿಯು; **ಮಧ್ಯಮ್ ದದತಾಮ್**=ಮಧ್ಯಮಾರ್ಗವನ್ನು ಸುರಕ್ಷಿತವನ್ನಾಗಿ ಮಾಡಿಕೊಡಲಿ; **ರುದ್ರಾವಸೃಷ್ಟಾ ಅಸಿ**=ಕ್ರೂರವಾದ ರುದ್ರನಿಂದ ಬಿಡಲ್ಪಟ್ಟವಳಾಗಿದ್ದೀಯೆ; **ಯುವಾ ನಾಮ**=ಯುವತಿಯೆಂದು/ಬಾಧಕಗಳಿಂದ ಬೇರೆಯಾದವಳೆಂದು ಪ್ರಸಿದ್ಧಳಾಗಿದ್ದೀಯೆ; **ಮಾ ಮಾ ಹಿಗ್ಂಸೀಃ**=[ನಿನ್ನನ್ನು ಕರೆದೊಯ್ಯುತ್ತಿರುವ] ನನ್ನನ್ನು ಹಿಂಸಿಸಬೇಡ.

---

**ಪ್ರೇರಕನಾದ ಅಂತರ್ಯಾಮಿಯಾದ ಸರ್ವಜ್ಞನಾದ ಪರಮೇಶ್ವರನು ಕಟ್ಟಿರುವ ಈ ಯೋಕ್ತ್ರವು ಬಂಧಿಸುವ ವರುಣಪಾಶದಂತಿದೆ. ಇದನ್ನು ಬಿಚ್ಚಿ ಹಾಕಿ ಬಂಧಮುಕ್ತಳಾಗುತ್ತೇನೆ. ಬಳಿಕ ಪತಿಯೊಡನೆ ಪುಣ್ಯಫಲರೂಪವಾಗಿರುವ ಉತ್ತಮಲೋಕಗಳಲ್ಲಿ ಸುಖವಾಗಿರುತ್ತೇನೆ.**

**ಯಜಮಾನಪತ್ನಿಯೇ! ನೀನು ನಿನ್ನ ಸ್ಥಾನದಿಂದ ಎದ್ದು ಪನ್ನೇಜನೀಜಲವನ್ನು ತರಲು ಬೇಗ ಹೊರಡು. ಅಗ್ನಿ-ಭೂಮಿಗಳು ನಿನ್ನ ಮಾರ್ಗವನ್ನು ರಕ್ಷಿಸಲಿ. ರುದ್ರನಿಂದ ಹಿಂಸಿಸಲ್ಪಡದೆ ನೀನು ವಿಮುಕ್ತಳಾಗಿದ್ದೀಯೆ. ನೀನು ಯುವತಿಯೆಂದು/ಬಾಧಕಗಳಿಂದ ಸಂಬಂಧವಿಲ್ಲದವಳೆಂದು ಪ್ರಸಿದ್ಧಳಾಗಿದ್ದೀಯೆ. ನಿನ್ನನ್ನು ಕರೆದೊಯ್ಯುತ್ತಿರುವ ನನ್ನನ್ನು ಹಿಂಸಿಸಬೇಡ.**

ವಸುಭ್ಯೋ ರುದ್ರೇಭ್ಯ ಆದಿತ್ಯೇಭ್ಯೋ ವಿಶ್ವೇಭ್ಯೋ

ವೋ ದೇವೇಭ್ಯಃ ಪನ್ನೇಜನೀರ್ಗೃಹ್ಣಾಮಿ ಯಜ್ಞಾಯ

ವಃ ಪನ್ನೇಜನೀಸ್ಸಾದಯಾಮಿ

---

ವಸುಭ್ಯ ಇತಿ ವಸು–ಭ್ಯಃ। ರುದ್ರೇಭ್ಯಃ। ಆದಿತ್ಯೇಭ್ಯಃ। ವಿಶ್ವೇಭ್ಯಃ। ವಃ। ದೇವೇಭ್ಯಃ। ಪನ್ನೇಜನೀರಿತಿ ಪತ್–ನೇಜನೀಃ। ಗೃಹ್ಣಾಮಿ। ಯಜ್ಞಾಯ। ವಃ। ಪನ್ನೇಜನೀರಿತಿ ಪತ್–ನೇಜನೀಃ। ಸಾದಯಾಮಿ।

---

| ಮಂತ್ರ | ವಿನಿಯೋಗ |
|---|---|
| ವಸುಭ್ಯೋ...ಯಜ್ಞಾಯ ವಃ॥ | ಪನ್ನೇಜನಿಗಳ ಗ್ರಹಣವನ್ನು ಮಾಡಲು [ಪಾದಗಳನ್ನು (ತೊಡೆಗಳನ್ನು)ತೊಳೆಯುವ ಜಲ] |
| ಪನ್ನೇಜನೀಃ ಸಾದಯಾಮಿ॥ | ಪನ್ನೇಜನೀಜಲವನ್ನು ಸಾದನ ಮಾಡಲು |

---

✦ವಸುಭ್ಯಃ ರುದ್ರೇಭ್ಯಃ ಆದಿತ್ಯೇಭ್ಯಃ=ವಸು–ರುದ್ರ–ಆದಿತ್ಯದೇವತೆಗಳಿಗಾಗಿಯೂ; ವಿಶ್ವೇಭ್ಯಃ ದೇವೇಭ್ಯಃ=ವಿಶ್ವೇದೇವರಿಗಾಗಿಯೂ; ಪನ್ನೇಜನೀಃ ವಃ ಗೃಹ್ಣಾಮಿ= ಪಾದಗಳನ್ನು [ತೊಡೆಗಳನ್ನು] ತೊಳೆಯುವುದರಿಂದ ಪನ್ನೇಜನಿಗಳೆಂದು ಹೇಳಲ್ಪಡುವ ನಿಮ್ಮನ್ನು ಸ್ಥಾಲಿಯಿಂದ ಗ್ರಹಣ ಮಾಡುತ್ತೇನೆ; ವಃ ಯಜ್ಞಾಯ=ನಿಮ್ಮನ್ನು ಯಜ್ಞಕ್ಕಾಗಿಯೂ [ಗ್ರಹಣ ಮಾಡುತ್ತೇನೆ]✦ವಸುಭ್ಯಃ ರುದ್ರೇಭ್ಯಃ ಆದಿತ್ಯೇಭ್ಯಃ ಯಜ್ಞಾಯ ವಃ ಪನ್ನೇಜನೀಃ ಸಾದಯಾಮಿ=ವಸು–ರುದ್ರ–ಆದಿತ್ಯ ದೇವತೆಗಳಿಗಾಗಿ ವಿಶ್ವೇದೇವರಿಗಾಗಿ ಪಾದಗಳನ್ನು/ತೊಡೆಗಳನ್ನು ತೊಳೆಯುವುದರಿಂದ ಪನ್ನೇಜನಿಗಳೆಂದು ಹೇಳಲ್ಪಡುವ ನಿಮ್ಮನ್ನು ಯಜ್ಞಕ್ಕಾಗಿ ಸಾದನ ಮಾಡುತ್ತೇನೆ.

---

ವಸು–ರುದ್ರ–ಆದಿತ್ಯ ಹಾಗೂ ವಿಶ್ವೇದೇವರು ಇವರ ಪ್ರೀತ್ಯರ್ಥವಾಗಿಯೂ ಮತ್ತು ಯಜ್ಞಕ್ಕಾಗಿಯೂ ಈ ಪನ್ನೇಜನೀಜಲವನ್ನು ಸ್ಥಾಲಿಯಿಂದ ತೆಗೆದುಕೊಳ್ಳುತ್ತೇನೆ.

## ವಿಶ್ವಸ್ಯ ತೇ ವಿಶ್ವಾವತೋ ವೃಷ್ಣಿಯಾವತ [..ಯಾವತಃ (೨೦)ತವಾಗ್ನೇ]ಸ್ತವಾಗ್ನೇ ವಾಮೀರನು ಸಂದೃಶಿ ವಿಶ್ವಾ ರೇತಾಗ್ಂಸಿ ಧಿಷೀಯಾಗನ್ದೇವಾನ್ ಯಜ್ಞೋ

ವಿಶ್ವಸ್ಯ । ತೇ । ವಿಶ್ವಾವತ ಇತಿ ವಿಶ್ವ-ವತಃ । ವೃಷ್ಣಿಯಾವತ ಇತಿ ವೃಷ್ಣಿಯ-ವತಃ । (೨೦) । ತವ । ಅಗ್ನೇ । ವಾಮೀಃ । ಅನ್ವಿತಿ । ಸಂದೃಶೀತಿ ಸಮ್-ದೃಶಿ । ವಿಶ್ವಾ । ರೇತಾಗ್ಂಸಿ । ಧಿಷೀಯ । ಅಗನ್ನ್ । ದೇವಾನ್ । ಯಜ್ಞಃ ।

| ಮಂತ್ರ | ವಿನಿಯೋಗ |
|---|---|
| ವಿಶ್ವಸ್ಯ ತೇ...ಧಿಷೀಯ ॥ | ಉದ್ಗಾತೃವಿಗೆ ಪತ್ನಿಯನ್ನು ತೋರಿಸಲು |
| ಅಗನ್ದೇವಾನ್...ಈಡಿತಾಃ ॥ | ಪತ್ನಿಯು ಪನ್ನೇಜನೀಜಲದಿಂದ ತೊಡೆಗಳನ್ನು ತೊಳೆದುಕೊಳ್ಳಲು |

+ಅಗ್ನೇ=ಅಗ್ನಿದೇವನೇ! ವಿಶ್ವಸ್ಯ=ಸರ್ವದೇವಾತ್ಮಕನಾದ; ತೇ ಸಂದೃಶಿ=ನಿನ್ನ ಕಟಾಕ್ಷವೀಕ್ಷಣವಾಗಲಾಗಿ ವಿಶ್ವಾವತಃ=ವಿಶ್ವಕ್ಕೆ ಒಡೆಯನಾದ; ವೃಷ್ಣಿಯಾವತಃ =ಸೇಚನಸಮರ್ಥನಾದ; ತವ ಸಂದೃಶಿ=ನಿನ್ನ ವೀಕ್ಷಣವಾಗಲಾಗಿ; ವಾಮೀಃ= ಯಜ್ಞಪ್ರವರ್ತಕನಾದ ನಾನು; ವಿಶ್ವಾ ರೇತಾಗ್ಂಸಿ=ಎಲ್ಲಾ ಪುತ್ರೋತ್ಪತ್ತಿಶಕ್ತಿಗಳನ್ನೂ; ಅನು ಧಿಷೀಯ=[ನಿನ್ನ ವೀಕ್ಷಣಶಕ್ತಿಯನ್ನು] ಅನುಸರಿಸಿ [ಯಜಮಾನ ಪತ್ನಿಯಲ್ಲಿ] ಸ್ಥಾಪಿಸುವೆನು.+ಯಜ್ಞಃ=ಯಜ್ಞವು; ದೇವಾನ್ ಅಗನ್=ದೇವತೆಗಳನ್ನು ಹೊಂದಿತು/ಹೊಂದಲಿ.

ವಸು-ರುದ್ರ-ಆದಿತ್ಯ-ವಿಶ್ವೇದೇವರು ಇವರ ಪ್ರೀತ್ಯರ್ಥವಾಗಿಯೂ ಮತ್ತು ಯಜ್ಞಕ್ಕಾಗಿಯೂ ಪನ್ನೇಜನಿಗಳಾದ ನಿಮ್ಮನ್ನು ಸಾದನೆ ಮಾಡುತ್ತೇನೆ.

ಹಿಂಕಾರಾನಂತರ ಉದ್ಗಾತೃವು ಯಜಮಾನಪತ್ನಿಯನ್ನು ನೋಡುವಾಗ ಅಧ್ವರ್ಯುವು

ನಿ ದೇವೀರ್ದೇವೇಭ್ಯೋ ಯಜ್ಞಮಶಿಷನ್ನಸ್ಮಿನ್ತ್ಸುನ್ವತಿ ಯಜಮಾನ ಆಶಿಷಸ್ಸ್ವಾಹಾಕೃತಾಸ್ಸಮುದ್ರೇಷ್ಠಾ ಗಂಧರ್ವ ಮಾ ತಿಷ್ಠತಾನು । ವಾತಸ್ಯ ಪತ್ಮನ್ನಿಡ ಈಡಿತಾಃ ॥ ೨೧–6 ॥

[ಪಾಶಂ ವೃಷ್ಣಿಯಾವತಸ್ತ್ರಿಗ್ಂಶಚ್ಚ ॥]

---

ನೀತಿ । ದೇವೀಃ । ದೇವೇಭ್ಯಃ । ಯಜ್ಞಮ್ । ಅಶಿಷನ್ನ್ । ಅಸ್ಮಿನ್ನ್ । ಸುನ್ವತಿ । ಯಜಮಾನೇ । ಆಶಿಷ ಇತ್ಯಾ–ಶಿಷಃ । ಸ್ವಾಹಾಕೃತಾ ಇತಿ ಸ್ವಾಹಾ–ಕೃತಾಃ । ಸಮುದ್ರೇಷ್ಠಾ ಇತಿ ಸಮುದ್ರೇ–ಸ್ಥಾಃ । ಗಂಧರ್ವಮ್ । ಏತಿ । ತಿಷ್ಠತ । ಅನು ॥ ವಾತಸ್ಯ । ಪತ್ಮನ್ನ್ । ಇಡಃ । ಈಡಿತಾಃ ॥೨೧॥

---

**ದೇವೀಃ**=ಪ್ರಕಾಶಮಾನವಾದ ನೀರುಗಳು; **ದೇವೇಭ್ಯಃ**=ದೇವತೆಗಳಿಗೆ; **ಯಜ್ಞಮ್**=ನಮ್ಮ ಯಾಗವನ್ನು; **ನಿ ಅಶಿಷನ್**=ಸ್ಪಷ್ಟವಾಗಿ ತಿಳಿಸಲಿ; **ಅಸ್ಮಿನ್ ಯಜಮಾನೇ**=ಈ ಯಜಮಾನನು; **ಸುನ್ವತಿ** [ಸತಿ]=ಸೋಮಯಾಗವನ್ನು ಮಾಡಲಾಗಿ; **ಸ್ವಾಹಾಕೃತಾಃ**=ಸ್ವಾಹಾಕಾರಗಳಿಂದ/ಯಾಗಗಳಿಂದ ಸಂಪಾದಿಸಲ್ಪಟ್ಟಿರುವ; **ಸಮುದ್ರೇಷ್ಠಾಃ**=ಸಮುದ್ರದಂತೆ ಇರುವ ಸ್ವರ್ಗದಲ್ಲಿರುವ; **ಆಶಿಷಃ**=ಆಶಿಸಿರುವ ಫಲಗಳು; **ಗಂಧರ್ವಮ್**=ಗಂಧರ್ವನಂತೆ ನನಗೆ ಪ್ರಿಯವಾದ ಯಜಮಾನನನ್ನು; **ಅನು**=ಅನುಕ್ರಮವಾಗಿ; **ಆ ತಿಷ್ಠತ**=ಹೊಂದಲಿ; **ವಾತಸ್ಯ ಪತ್ಮನ್** [ಸತಿ]=[ಯಜ್ಞಪ್ರವರ್ತಕನಾದ] ವಾಯುದೇವನ ಪ್ರೇರಣೆಯಾಗಲಾಗಿ; **ಇಡಃ**=ಫಲಸಾಧಕವಾದ ಸ್ತೋತ್ರವಿಶೇಷಗಳು; **ಈಡಿತಾಃ**=[ಋತ್ವಿಜರಿಂದ] ಹೇಳಲ್ಪಡುತ್ತವೆ.

---

**'ವಿಶ್ವಸ್ಯ...ಧಿಷೀಯ'** ಎಂಬ ಮಂತ್ರವನ್ನು ಹೇಳಿ ಉದ್ಗಾತೃವಿಗೆ ತೋರಿಸುತ್ತಾನೆ. ಆ ಮಂತ್ರದ ತಾತ್ಪರ್ಯವು ಹೀಗಿದೆ. ಅಗ್ನಿಯು ವಿಶ್ವಾತ್ಮನು, ವಿಶ್ವಸ್ವಾಮಿಯು. ಹಾಗೆಯೇ

ಸೇಚನಸಮರ್ಥನಾಗಿದ್ದಾನೆ. ಇಂತಹ ಅಗ್ನಿದೇವನ ವೀಕ್ಷಣವನ್ನು ಅನುಸರಿಸಿ, ಯಜಮಾನಪತ್ನಿಯಲ್ಲಿ ಪ್ರಜೋತ್ಪಾದನಶಕ್ತಿಯನ್ನು ಸ್ಥಾಪಿಸುವೆನು.

ಯಜ್ಞವು ದೇವತೆಗಳನ್ನು ಸೇರಲಿ. ಯಜ್ಞದ ಅನುಷ್ಠಾನದ ಫಲಗಳು ಗಂಧರ್ವನಂತೆ ಪ್ರಿಯನಾದ ಯಜಮಾನನಿಗೆ ಸೇರಲಿ.

**'ವಾತಾದ್ಯಜ್ಞಃ ಪ್ರಯುಜ್ಯತಾಮ್'** ಎಂಬ ಶ್ರುತಿವಚನವು ವಾಯುವು ಯಜ್ಞಪ್ರವರ್ತಕನೆಂದು ಹೇಳಿದೆ. ಅಂತಹ ವಾಯುದೇವನ ಪ್ರೇರಣೆಯಾಗಿ ಅನುಷ್ಠಿಸಿದ ಯಜ್ಞದ ಫಲಸಾಧಕವಾದ ಸ್ತೋತ್ರಗಳು ಋತ್ವಿಜರಿಂದ ಹೇಳಲ್ಪಡುತ್ತವೆ. ಆ ವಾಯುದೇವನು ನಮ್ಮನ್ನು ಅನುಗ್ರಹಿಸಲಿ. ಆ ಫಲಗಳನ್ನು ಯಜಮಾನನು ಹೊಂದಲಿ.

---

ಈ ಅನುವಾಕದ ಮಂತ್ರಗಳನ್ನು ಅನ್ವಯಿಸಿಕೊಳ್ಳಬೇಕಾದ ಪಾಠಸ್ಥಳವನ್ನು ಶ್ರೀ ಸಾಯಣಾಚಾರ್ಯರು ತಿಳಿಸಿರುತ್ತಾರೆ. ಅದನ್ನು ಇಲ್ಲಿ ನೀಡಲಾಗಿದೆ.

| ಈ ಅನುವಾಕದ ಮಂತ್ರಗಳು | ಅನ್ವಯಿಸಿಕೊಳ್ಳಬೇಕಾದ ಮಂತ್ರ/ಪಾಠಸ್ಥಳ |
|---|---|
| ೧)ಸಂ ತ್ವಾ ನಹ್ಯಾಮಿ...॥ | 'ಇಂದ್ರಸ್ಯ ಯೋನಿರಸಿ' ಎಂಬುದಕ್ಕಿಂತ ಪೂರ್ವ [ತೈ.ಸಂ.1.2.2] |
| ೨)ಪ್ರೈತು ಬ್ರಹ್ಮಣಸ್ಪತ್ನೀ॥ | 'ತ್ವಗ್ಂ ಸೋಮ ತನೂಕೃದ್ಭ್ಯಃ' ಎಂಬ ಅನುವಾಕಕ್ಕಿಂತ ಮೊದಲು [ತೈ.ಸಂ.1.3.4] |
| ೩)ಅಥಾಹಮ್ । ಸುಪ್ರಜಸಃ ॥ | ———— ,, ———— |
| ೪)ಇಮಂ ವಿಷ್ಯಾಮಿ...॥ | 'ದೇವೀರಾಪ ಏಷ ವಃ' ಎಂಬ ಮಂತ್ರಕ್ಕಿಂತಲೂ ಮೊದಲು [ತೈ.ಸಂ.1.4.45] |
| ೫)ಪ್ರೇಹ್ಯುದೇಹಿ...॥ | 'ಹೃದೇ ತ್ವಾ' ಅನುವಾಕದಲ್ಲಿ 'ದೇವೀರಾಪೋ 'ಅಪಾಂ ನಪಾತ್' ಎಂಬ ಮಂತ್ರಕ್ಕಿಂತ ಮೊದಲು [ತೈ.ಸಂ.1.3.13] |
| ೬)ವಸುಭ್ಯಸ್ತ್ವಾ...॥ | ಹೃದೇ ತ್ವಾ' ಅನುವಾಕದಲ್ಲಿ 'ಸಮುದ್ರಸ್ಯ...ಉನ್ನಯೇ' ಎಂಬ ಮಂತ್ರದ ಬಳಿಕ [ತೈ.ಸಂ.1.3.13] |
| ೭)ವಿಶ್ವಸ್ಯ ತೇ...॥ ೮)ಅಗನ್ದೇವಾನ್...॥ | 'ಬೃಹಸ್ಪತಿಸುತಸ್ಯ' ಎಂಬ ಅನುವಾಕದ ಅನಂತರ [ತೈ.ಸಂ.1.4.27] |

# ವಿನಿಯೋಗ ಸಂಗ್ರಹ

1ಸಂ ತ್ವಾ ಪತ್ನ್ಯಾಂ ಯೋಕ್ತ್ರಬಂಧಃ 2 ಪ್ರೈತು ಶಾಲಾಮುಖೇ ನಯೇತ್ ।
3 ಅಥಾಹಮುಪವಿಶ್ಯೈಷಾ 4ಸುಪ್ರಜೇತಿ ಜಪೇದಥ ।
5 ಇಮಂ ಕಾಲೇ ಯೋಕ್ತ್ರಮೋಕಃ 6ಪ್ರೇಹಿ ಪತ್ನೀಮುದಾನಯೇತ್ ।
7-8 ವಸು ಪನ್ನೇಜನೀಃ ಪತ್ನೀ ಗೃಹೀತ್ವಾ ತೇನ ಸಾದಯೇತ್ ॥
9ವಿಶ್ವಸ್ಯ ಪತ್ನೀಮುದ್ಗಾತ್ರಾ ಸಂಖ್ಯಾಪಯತಿ ಸಾ 10ತ್ವಗನ್ ।
ಅಪಃ ಪ್ರವರ್ತಯತ್ಯೂರಾವತ್ರ ಮಂತ್ರಾ ದಶ ಸ್ಮೃತಾಃ ॥

## ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-10

## ॥ ಸಪ್ತಮೋಽನುವಾಕಃ ॥

ವಷಟ್ಕಾರೋ ವೈ ಗಾಯತ್ರಿಯೈ ಶಿರೋಽಚ್ಛಿನತ್ತಸ್ಯೈ

ರಸಃ ಪರಾಪತತ್ಸ ಪೃಥಿವೀಂ ಪ್ರಾವಿಶ-

---

ವಷಟ್ಕಾರ ಇತಿ ವಷಟ್-ಕಾರಃ । ವೈ । ಗಾಯತ್ರಿಯೈ । ಶಿರಃ । ಅಚ್ಛಿನತ್ । ತಸ್ಯೈ ।

ರಸಃ । ಪರೇತಿ । ಅಪತತ್ । ಸಃ । ಪೃಥಿವೀಮ್ । ಪ್ರೇತಿ । ಅವಿಶತ್ ।

---

ಈ ಏಳನೆಯ ಅನುವಾಕದಲ್ಲಿ ದರ್ಶ-ಪೂರ್ಣಮಾಸಗಳ ಸ್ರುವಾದಿಪಾತ್ರೆಗಳಿಗೆ ಬೇಕಾದ ವೃಕ್ಷವಿಶೇಷಗಳು ಹೇಳಲ್ಪಟ್ಟಿವೆ.

---

ಸ್ರುವಕ್ಕೆ ಆವಶ್ಯಕವಾದ ವೃಕ್ಷದ ವಿಧಿ; ಬ್ರಾಹ್ಮಣ

| ಬ್ರಾಹ್ಮಣಭಾಗ | ವಿವರಣೆ |
|---|---|
| ವಷಟ್ಕಾರಃ ವೈ | ವಷಟ್ಕಾರವು[ವೌಷಟ್][ತದಭಿಮಾನಿದೇವತೆಯು] [ಯಾವುದೋ ಒಂದು ವಿರೋಧದಿಂದ] |
| ಗಾಯತ್ರಿಯೈ ಶಿರಃ ಅಚ್ಛಿನತ್ | ಗಾಯತ್ರೀಛಂದಸ್ಸಿನ ತಲೆಯನ್ನು ಕತ್ತರಿಸಿತು. |
| ತಸ್ಯೈ ರಸಃ ಪರಾ ಅಪತತ್ | ಆ ಗಾಯತ್ರಿಯ ರಕ್ತದಂತಿರುವ ರಸವು ಕೆಳಕ್ಕೆ ಬಿದ್ದಿತು. |
| ಸಃ ಪೃಥಿವೀಮ್ ಪ್ರಾವಿಶತ್ | ಆ ರಸವು ಭೂಮಿಯನ್ನು ಪ್ರವೇಶಿಸಿತು. |

-ಥ್ಸ ಖದಿರೋಽಭವದ್ಯಸ್ಯ ಖಾದಿರಸ್ಸ್ರುವೋ ಭವತಿ

ಛಂದಸಾ ಮೇವ ರಸೇನಾವದ್ಯತಿ ಸರಸಾ ಅಸ್ಯಾಹುತಯೋ

ಭವಂತಿ

---

ಸಃ । ಖದಿರಃ । ಅಭವತ್ । ಯಸ್ಯ । ಖಾದಿರಃ । ಸ್ರುವಃ । ಭವತಿ । ಛಂದಸಾಮ್ ।

ಏವ । ರಸೇನ । ಅವೇತಿ । ದ್ಯತಿ । ಸರಸಾ ಇತಿ ಸ-ರಸಾಃ । ಅಸ್ಯ । ಆಹುತಯ ಇತ್ಯಾ-

ಹುತಯಃ । ಭವಂತಿ ।

---

| | |
|---|---|
| ಸಃ ಖದಿರಃ ಅಭವತ್ | ಅದು ಖದಿರ [ಕಗ್ಗಲಿ] ವೃಕ್ಷವಾಯಿತು. |
| ಯಸ್ಯ ಸ್ರುವಃ ಖಾದಿರಃ ಭವತಿ | ಯಾವ ಯಜಮಾನನ [ಯಾಗದಲ್ಲಿ] ಸ್ರುವವು ಕಗ್ಗಲಿಮರದ್ದಾಗಿರುವುದೋ |
| ಛಂದಸಾಮ್ ರಸೇನ ಏವ ಅವದ್ಯತಿ | [ಅವನು ಯಾಗದ ಹವಿಸ್ಸುಗಳನ್ನು]ಗಾಯತ್ರ್ಯಾದಿ ಛಂದಸ್ಸುಗಳ ರಸದಿಂದಲೇ ಅವದಾನ ಮಾಡಿದವನಾಗುತ್ತಾನೆ. |
| ಅಸ್ಯ ಆಹುತಯಃ ಸರಸಾಃ ಭವಂತಿ | ಈ ಯಜಮಾನನ ಯಾಗದ ಆಹುತಿಗಳು ರಸಭರಿತವಾಗಿ/ಸಾರಪೂರ್ಣವಾಗುತ್ತವೆ. |

---

ದರ್ಶ-ಪೂರ್ಣಮಾಸಗಳ ಸ್ರುವಾದಿಪಾತ್ರಗಳಿಗೆ ಬೇಕಾಗುವ ವೃಕ್ಷಗಳನ್ನು ಈ ಅನುವಾಕದಲ್ಲಿ ಹೇಳಲಾಗಿದೆ.

ಈ ಉಪಾಖ್ಯಾನದಲ್ಲಿ ವಷಟ್ಕಾರದಿಂದ ಕತ್ತರಿಸಲ್ಪಟ್ಟ ಗಾಯತ್ರೀಛಂದಸ್ಸಿನ ತಲೆಯಿಂದ ಹೊರಬಿದ್ದ ರಸದಿಂದ ಖದಿರವೃಕ್ಷವು ಜನಿಸಿತೆಂದು ಹೇಳಿದೆ.

ಉಪಾಖ್ಯಾನಗಳಿಗೆ ಅಕ್ಷರಶಃ ಪ್ರಾಮಾಣ್ಯವನ್ನು ಕೊಡಬೇಕಾಗಿಲ್ಲ. ಖಾದಿರವು ಪ್ರಶಸ್ತ ಎಂದು ಹೇಳುವುದೇ ಉಪಾಖ್ಯಾನದ ತಾತ್ಪರ್ಯ.

## ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ತಂ
## ಗಾಯತ್ರ್ಯಾಽಹರತ್ತಸ್ಯ ಪರ್ಣಮಚ್ಛಿದ್ಯತ
## ತತ್ಪರ್ಣೋಽಭವತ್ತತ್ಪರ್ಣಸ್ಯ ಪರ್ಣತ್ವಂ

---

ತೃತೀಯಸ್ಯಾಮ್ । ಇತಃ । ದಿವಿ । ಸೋಮಃ । ಆಸೀತ್ । ತಮ್ । ಗಾಯತ್ರೀ । ಏತಿ । ಆಹರತ್ । ತಸ್ಯ । ಪರ್ಣಮ್ । ಅಚ್ಛಿದ್ಯತ । ತತ್ । ಪರ್ಣಃ । ಅಭವತ್ । ತತ್ । ಪರ್ಣಸ್ಯ । ಪರ್ಣತ್ವಮಿತಿ ಪರ್ಣ-ತ್ವಮ್ ।

---

### ಜುಹುವು ಪರ್ಣಮಯವಾಗಿರಬೇಕೆಂಬ ವಿಧಿ; ಬ್ರಾಹ್ಮಣ

| | |
|---|---|
| ಇತಃ ತೃತೀಯಸ್ಯಾಮ್ ದಿವಿ ಸೋಮಃ ಆಸೀತ್ | ಈ ಭೂಲೋಕದಿಂದ ಮೂರನೆಯದಾದ ದ್ಯುಲೋಕದಲ್ಲಿ ಸೋಮಲತೆಯು ಇದ್ದಿತು. |
| ತಮ್ ಗಾಯತ್ರೀ ಆಹರತ್ | ಅದನ್ನು ಗಾಯತ್ರ್ಯಭಿಮಾನಿದೇವತೆಯು ಭೂಮಿಗೆ ತಂದಿತು. |
| ತಸ್ಯ ಪರ್ಣಮ್ ಅಚ್ಛಿದ್ಯತ | ಆ ಸೋಮಲತೆಯ ಒಂದು ಎಲೆಯು ಕತ್ತರಿಸಲ್ಪಟ್ಟಿತು. |
| ತತ್ ಪರ್ಣಃ ಅಭವತ್ | [ಕತ್ತರಿಸಲ್ಪಟ್ಟು ಭೂಮಿಗೆ ಬಿದ್ದ] ಸೋಮದ ಎಲೆಯು ಪರ್ಣವೃಕ್ಷ [ಮುತ್ತುಗದ ಮರ] ವಾಯಿತು. |
| ತತ್ ಪರ್ಣಸ್ಯ ಪರ್ಣತ್ವಮ್ | ಹೀಗೆ ಪರ್ಣದಿಂದ ಜನಿಸಿದುದರಿಂದ ಆ ಮರಕ್ಕೆ 'ಪರ್ಣ' ಎಂಬ ಅನ್ವರ್ಥವಾದ ಹೆಸರಾಯಿತು. [ಇದೇ ಪರ್ಣದ ಪರ್ಣತ್ವ] |

---

ಗಾಯತ್ರೀ ಮುಂತಾದ ಛಂದಸ್ಸಿನಿಂದ ಕೂಡಿರುವ ಯಾಜ್ಯೆ-ಪುರೋನುವಾಕ್ಯೆಗಳನ್ನು ಹೇಳಿ ವಷಟ್ಕಾರದಿಂದ ಹವಿಸ್ಸನ್ನು ಅರ್ಪಿಸುವುದರಿಂದ ಛಂದಸ್ಸುಗಳ ಮೇಲುಭಾಗದಲ್ಲಿ

ಯಸ್ಯ ಪರ್ಣಮಯೀ ಜುಹೂ[ಜುಹೂಃ(೨೨)ಭವತಿ]

ರ್ಭವತಿ ಸೌಮ್ಯಾ ಅಸ್ಯಾಹುತಯೋ ಭವಂತಿ ಜುಷಂತೇಽಸ್ಯ

ದೇವಾ ಆಹುತೀರ್ದೇವಾ ವೈ ಬ್ರಹ್ಮನ್ನವದಂತ

---

ಯಸ್ಯ । ಪರ್ಣಮಯೀತಿ ಪರ್ಣ–ಮಯೀ । ಜುಹೂಃ ।(೨೨)। ಭವತಿ । ಸೌಮ್ಯಾಃ । ಅಸ್ಯ । ಆಹುತಯ ಇತ್ಯಾ–ಹುತಯಃ । ಭವಂತಿ । ಜುಷಂತೇ । ಅಸ್ಯ । ದೇವಾಃ । ಆಹುತೀರಿತ್ಯಾ–ಹುತೀಃ । ದೇವಾಃ । ವೈ । ಬ್ರಹ್ಮನ್ । ಅವದಂತ ।

---

| | |
|---|---|
| ಯಸ್ಯ ಜುಹೂಃ ಪರ್ಣಮಯೀ ಭವತಿ | ಯಾವ ಯಜಮಾನನ ಯಜ್ಞದಲ್ಲಿ ಜುಹುವು ಪಲಾಶದಿಂದ ಮಾಡಲ್ಪಟ್ಟಿರುತ್ತದೆಯೋ |
| ಅಸ್ಯ ಆಹುತಯಃ ಸೌಮ್ಯಾಃ ಭವಂತಿ | ಈ ಯಜಮಾನನ ಯಾಗದ ಆಹುತಿಗಳು ಸೋಮ ಸಂಬಂಧವುಳ್ಳವುಗಳೇ ಆಗುತ್ತವೆ. |
| ಅಸ್ಯ ಆಹುತೀಃ ದೇವಾಃ ಜುಷಂತೇ | ದೇವತೆಗಳು ಈ ಯಜಮಾನನ ಯಜ್ಞದ ಆಹುತಿಗಳನ್ನು ಪ್ರೀತಿಪೂರ್ವಕವಾಗಿ ಸೇವಿಸುತ್ತಾರೆ. |

ಜುಹುವು ಪರ್ಣಮಯವಾಗಿರಬೇಕೆಂಬ ವಿಷಯದಲ್ಲಿ ಇನ್ನೊಂದು ಉಪಾಖ್ಯಾನ

| | |
|---|---|
| ದೇವಾಃ ವೈ ಬ್ರಹ್ಮನ್ ಅವದಂತ | [ಒಂದು ಸಮಯದಲ್ಲಿ] ದೇವತೆಗಳು [ಮುತ್ತುಗದ ಮರದ ಕೆಳಗೆ ಕುಳಿತು] ಬ್ರಹ್ಮತತ್ತ್ವದ ವಿಷಯದಲ್ಲಿ ಚರ್ಚಿಸುತ್ತಿದ್ದರು. |

---

ವಷಟ್ಕಾರವು ಬಂದಂತಾಗಿ ಛಂದಸ್ಸಿನ ತಲೆಯನ್ನು ಕತ್ತರಿಸಿದಂತಾಯಿತು ಎಂದೂ ಕೂಡ ವಿವರಿಸಬಹುದು. ಈ ರೀತಿಯ ಅನ್ಯೋಕ್ತಿಗಳು ಶ್ರುತಿಯಲ್ಲಿ ಇವೆ.
ಈ ಉಪಾಖ್ಯಾನದಿಂದ ಸ್ರುವವು ಖದಿರವೃಕ್ಷದ್ದಾಗಿರಬೇಕು ಎಂಬ ಯಜ್ಞವಿಧಿಯು ತಿಳಿಯುತ್ತದೆ.

ತತ್ಪರ್ಣ ಉಪಾಶೃಣೋಥ್ಸುಶ್ರವಾ ವೈ ನಾಮ ಯಸ್ಯ

ಪರ್ಣಮಯೀ ಜುಹೂರ್ಭವತಿ ನ ಪಾಪಗ್ಗ್ಂ ಶ್ಲೋಕಗ್ಂ

ಶೃಣೋತಿ ಬ್ರಹ್ಮ ವೈ ಪರ್ಣಃ

---

ತತ್ । ಪರ್ಣಃ । ಉಪೇತಿ । ಅಶೃಣೋತ್ । ಸುಶ್ರವಾ ಇತಿ ಸು-ಶ್ರವಾಃ । ವೈ ।

ನಾಮ । ಯಸ್ಯ । ಪರ್ಣಮಯೀತಿ ಪರ್ಣ-ಮಯೀ । ಜುಹೂಃ । ಭವತಿ । ನ ।

ಪಾಪಮ್ । ಶ್ಲೋಕಮ್ । ಶೃಣೋತಿ । ಬ್ರಹ್ಮ । ವೈ । ಪರ್ಣಃ ।

---

| | |
|---|---|
| ತತ್ ಪರ್ಣಃ<br>ಉಪಾಶೃಣೋತ್ | ಆ ಸಂವಾದವನ್ನು ಪಾಲಾಶವೃಕ್ಷದೇವನು ಕೇಳಿದನು. |
| ಸುಶ್ರವಾಃ ವೈ ನಾಮ | ಪಾಲಾಶವು ಹೀಗಾಗಿ 'ಸುಶ್ರವ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. |
| ಯಸ್ಯ ಪರ್ಣಮಯೀ<br>ಜುಹೂಃ ಭವತಿ | ಯಾವ ಯಜಮಾನನ ಯಾಗದಲ್ಲಿ ಜುಹುವು ಪರ್ಣವೃಕ್ಷದ್ದಾಗಿರುತ್ತದೆಯೋ |
| ನ ಪಾಪಮ್ ಶ್ಲೋಕಮ್<br>ಶೃಣೋತಿ | ಆ ಯಜಮಾನನು ಅಪಕೀರ್ತಿಯನ್ನು ಕೇಳುವುದೇ ಇಲ್ಲ. |

**ಪರ್ಣದೊಡನೆ ಉಪಭೃತ್ ಪಾತ್ರೆಗೆ ಪ್ರಕೃತಿಯಾಗಿ ಅಶ್ವತ್ಥವೃಕ್ಷದ ವಿಧಿ;ಪ್ರಶಂಸೆ**

| | |
|---|---|
| ಬ್ರಹ್ಮ ವೈ ಪರ್ಣಃ | ಬ್ರಹ್ಮತತ್ತ್ವವಿಚಾರವನ್ನು ದೇವತೆಗಳಿಂದ ಕೇಳಿದ ಪಾಲಾಶವು ಬ್ರಹ್ಮವಾಗಿದೆ [ಬ್ರಾಹ್ಮಣಜಾತಿಯಾಗಿದೆ] |

---

ಯಜ್ಞಪಾತ್ರೆಯಾದ ಜುಹೂವು ಪಾಲಾಶಮಯ[ಮುತ್ತುಗದ್ದು]ವಾಗಿರಬೇಕೆಂಬ ವಿಧಿಯನ್ನು ಪ್ರಶಂಸಿಸುವ ಇದು ಮತ್ತೊಂದು ಉಪಾಖ್ಯಾನ.

ಗಾಯತ್ರೀದೇವತೆಯು ಸೋಮನನ್ನು ಭೂಮಿಗೆ ತಂದ ವಿಚಾರವು ತೈತ್ತಿರೀಯ

ವಿಣ್ಮಾರುತೋಽನ್ನಂ ವಿಣ್ಮಾರುತೋಽಶ್ವತ್ಥೋ ಯಸ್ಯ ಪರ್ಣಮಯೀ ಜುಹೂರ್ಭವತ್ಯಾಶ್ವತ್ಥ್ಯುಪಭೃದ್ಬ್ರಹ್ಮಣೈವಾನ್ನಮವರುಂಧೇಽಥೋ ಬ್ರಹ್ಮೈ[ಬ್ರಹ್ಮ(೨೩)ಏವ]ವ ವಿಶ್ಯಧ್ಯೂಹತಿ

---

ವಿಟ್ । ಮರುತಃ । ಅನ್ನಮ್ । ವಿಟ್ । ಮಾರುತಃ । ಅಶ್ವತ್ಥಃ । ಯಸ್ಯ । ಪರ್ಣಮಯೀತಿ ಪರ್ಣ–ಮಯೀ । ಜುಹೂಃ । ಭವತಿ । ಆಶ್ವತ್ಥೀ । ಉಪಭೃದಿತ್ಯುಪ –ಭೃತ್ । ಬ್ರಹ್ಮಣಾ । ಏವ । ಅನ್ನಮ್ । ಅವೇತಿ । ರುಂಧೇ । ಅಥೋ ಇತಿ । ಬ್ರಹ್ಮ । (೨೩) । ಏವ । ವಿಶಿ । ಅಧೀತಿ । ಊಹತಿ ।

---

| | |
|---|---|
| **ಮರುತಃ ವಿಟ್** | ಮರುತರು ವೈಶ್ಯರಾಗಿದ್ದಾರೆ. |
| **ಅನ್ನಮ್ ವಿಟ್** | ಅನ್ನವೂ ವೈಶ್ಯರೂಪವಾಗಿದೆ. |
| **ಅಶ್ವತ್ಥಃ ಮಾರುತಃ** | ಅಶ್ವತ್ಥವೃಕ್ಷವು ಮರುದ್ದೇವತಾಕವಾಗಿದೆ. |
| **ಯಸ್ಯ ಜುಹೂಃ ಪರ್ಣಮಯೀ ಭವತಿ** | ಯಾವ ಯಜಮಾನನ ಯಾಗದಲ್ಲಿ ಮುತ್ತುಗದ ಜುಹೂ ಇರುವುದೋ |
| **ಆಶ್ವತ್ಥೀ ಉಪಭೃತ್** [ಭವತಿ] | ಅಶ್ವತ್ಥವೃಕ್ಷದ ಉಪಭೃತ್ ಇರುವುದೋ |
| **ಬ್ರಹ್ಮಣಾ ಏವ ಅನ್ನಮ್ ಅವ ರುಂಧೇ** | ಬ್ರಹ್ಮರೂಪವಾದ ಜುಹೂವಿನಿಂದ ಅಶ್ವತ್ಥದ ಒಡೆಯರಾದ ಮರುತ್ತುಗಳ ವಿಡ್ರೂಪವಾದ ಅನ್ನವನ್ನು ಹೊಂದುವನು. |
| **ಅಥೋ ಬ್ರಹ್ಮ ವಿಶಿ ಏವ ಅಧ್ಯೂಹತಿ** | ಮತ್ತು ಬ್ರಾಹ್ಮಣಜಾತಿಯನ್ನು ವೈಶ್ಯಜಾತಿಯಿಂದ ಅಧಿಕವನ್ನಾಗಿಸುತ್ತಾನೆ. |

ರಾಷ್ಟ್ರಂ ವೈ ಪರ್ಣೋ ವಿಡಶ್ವತ್ಥೋ ಯತ್ಪರ್ಣಮಯೀ

ಜುಹೂರ್ಭವತ್ಯಾಶ್ವತ್ಥ್ಯುಪಭೃದ್ರಾಷ್ಟ್ರಮೇವ ವಿಶ್ಯಧ್ಯೂಹತಿ

---

ರಾಷ್ಟ್ರಮ್ । ವೈ । ಪರ್ಣಃ । ವಿಟ್ । ಅಶ್ವತ್ಥಃ । ಯತ್ । ಪರ್ಣಮಯೀತಿ ಪರ್ಣ-ಮಯೀ । ಜುಹೂಃ । ಭವತಿ । ಆಶ್ವತ್ಥೀ । ಉಪಭೃದಿತ್ಯುಪ-ಭೃತ್ । ರಾಷ್ಟ್ರಮ್ । ಏವ । ವಿಶಿ । ಅಧೀತಿ । ಊಹತಿ ।

---

### ಪರ್ಣ-ಅಶ್ವತ್ಥವಿಧಿಯ ಪ್ರಕಾರಾಂತರ ಪ್ರಶಂಸೆ

| | |
|---|---|
| ರಾಷ್ಟ್ರಮ್ ವೈ ಪರ್ಣಃ | ಮುತ್ತುಗವು ರಾಷ್ಟ್ರರೂಪವಾಗಿದೆ. |
| ಅಶ್ವತ್ಥಃ ವಿಟ್ | ಅಶ್ವತ್ಥವು ಪ್ರಜಾರೂಪ/ವೈಶ್ಯರೂಪವಾಗಿದೆ. |
| ಯತ್ ಪರ್ಣಮಯೀ ಜುಹೂಃ ಭವತಿ ಆಶ್ವತ್ಥೀ ಉಪಭೃತ್ | ಪರ್ಣವೃಕ್ಷದ ಜುಹೂಪಾತ್ರೆಯೂ, ಅಶ್ವತ್ಥ ವೃಕ್ಷದ ಉಪಭೃತ್ [ಆಗುವುದರಿಂದ] |
| ರಾಷ್ಟ್ರಮ್ ವಿಶಿ ಏವ ಅಧ್ಯೂಹತಿ | ರಾಷ್ಟ್ರವನ್ನು [ಆಧಿಪತ್ಯವನ್ನು] ಪ್ರಜೆಗಳಿಗಿಂತಲೂ/ ವಿಶಕ್ಕಿಂತಲೂ ಅಧಿಕವನ್ನಾಗಿ ಮಾಡುತ್ತಾನೆ. |

---

ಸಂಹಿತೆಯ ಆರನೆಯ ಕಾಂಡದ ಪ್ರಥಮಪ್ರಪಾಠಕದಲ್ಲಿ 'ಕದ್ರೂಶ್ಚ ವೈ' ಎಂಬ ಅನುವಾಕದಲ್ಲಿ ಸವಿಸ್ತರವಾಗಿ ಉಕ್ತವಾಗಿದೆ.

ಜುಹೂವು ಪರ್ಣಮಯವಾಗಿರಬೇಕೆಂಬ ವಿಷಯದಲ್ಲಿ ಇದು ಇನ್ನೊಂದು ಉಪಾಖ್ಯಾನ. ದೇವತೆಗಳು ನಡೆಸುತ್ತಿದ್ದ ಬ್ರಹ್ಮತತ್ತ್ವದ ಒಳ್ಳೆಯ ಚರ್ಚೆಯನ್ನು ಮುತ್ತುಗದ ಮರವು ಶ್ರವಣ ಮಾಡಿದುದರಿಂದ ಅದು 'ಸುಶ್ರವ' [ಒಳ್ಳೆಯದುದನ್ನು ಕೇಳಿದುದು] ಎಂದೆನಿಸಿತು.

ಈ ಪರ್ಣಮಯಜುಹೂವನ್ನು ಹೊಂದಿರುವ ಯಜಮಾನನಿಗೆ ಅಪಕೀರ್ತಿಯು ಬಾರದು. ಅವನು ಯಾವಾಗಲೂ ಒಳ್ಳೆಯ ಕೀರ್ತಿಯ ಮಾತನ್ನೇ ಕೇಳುತ್ತಾನೆ. ಹೀಗಾಗಿ ಜುಹೂಯಜ್ಞಪಾತ್ರೆಗೆ ಪ್ರಕೃತಿವೃಕ್ಷವಾದ ಪಲಾಶವು ಪ್ರಶಸ್ತವಾದುದು.

ಪ್ರಜಾಪತಿರ್ವಾ ಅಜುಹೋಥ್ಸಾ ಯತ್ರಾಹುತಿಃ
ಪ್ರತ್ಯತಿಷ್ಠತ್ತತೋ ವಿಕಙ್ಕತ ಉದತಿಷ್ಠತ್ತತಃ ಪ್ರಜಾ
ಅಸೃಜತ ಯಸ್ಯ ವೈಕಙ್ಕತೀ ಧ್ರುವಾ ಭವತಿ

---

ಪ್ರಜಾಪತಿರಿತಿ ಪ್ರಜಾ–ಪತಿಃ । ವೈ । ಅಜುಹೋತ್ । ಸಾ । ಯತ್ರ । ಆಹುತಿರಿತ್ಯಾ–ಹುತಿಃ । ಪ್ರತ್ಯತಿಷ್ಠದಿತಿ ಪ್ರತಿ–ಅತಿಷ್ಠತ್ । ತತಃ । ವಿಕಙ್ಕತ ಇತಿ ವಿ–ಕಙ್ಕತಃ । ಉದಿತಿ । ಅತಿಷ್ಠತ್ । ತತಃ । ಪ್ರಜಾ ಇತಿ ಪ್ರ–ಜಾಃ । ಅಸೃಜತ । ಯಸ್ಯ । ವೈಕಙ್ಕತೀ । ಧ್ರುವಾ । ಭವತಿ ।

---

ಧ್ರುವಾಪಾತ್ರೆಯ ಪ್ರಕೃತಿಯಾಗಿ ವೈಕಂಕತವೃಕ್ಷದ ವಿಧಿ; ಬ್ರಾಹ್ಮಣ

| | |
|---|---|
| ಪ್ರಜಾಪತಿಃ ವೈ ಅಜುಹೋತ್ | ಪ್ರಜಾಪತಿಬ್ರಹ್ಮನು ಮೊದಲಿನ ಹೋಮಗಳನ್ನು ಮಾಡಿದನು. |
| ಸಾ ಆಹುತಿಃ ಯತ್ರ ಪ್ರತ್ಯತಿಷ್ಠತ್ | ಆ ಆಹುತಿಯು ಎಲ್ಲಿ ಪ್ರತಿಷ್ಠಿತವಾಯಿತೋ |
| ತತಃ ವಿಕಙ್ಕತಃ ಉದತಿಷ್ಠತ್ | ಆ ಪ್ರದೇಶದಿಂದ ವಿಕಂಕತವೃಕ್ಷವು [ನಾಯಿ ಬೇಲ] ಉತ್ಪನ್ನವಾಯಿತು. |
| ತತಃ ಪ್ರಜಾಃ ಅಸೃಜತ | ಅನಂತರ ಅದರಿಂದ ಪ್ರಜೆಗಳನ್ನು ಸೃಷ್ಟಿಸಿದನು. |
| ಯಸ್ಯ ಧ್ರುವಾ ವೈಕಙ್ಕತೀ ಭವತಿ | ಯಾವ ಯಜಮಾನನ ಯಾಗದಲ್ಲಿ ಧ್ರುವೆಯು ವಿಕಂಕತವೃಕ್ಷದ್ದಾಗಿರುತ್ತದೆಯೋ |

---

'ಸುಶ್ರವಃ ಸುಶ್ರವಸಂ ಮಾ ಕುರು' ಎಂಬುದಾಗಿ ಇನ್ನೊಂದು ಶ್ರುತಿವಚನವೂ ಇದೇ ಅರ್ಥದಲ್ಲಿದೆ.

ದೇವತೆಗಳಿಂದ ಬ್ರಹ್ಮವಿಚಾರವನ್ನು ಕೇಳಿದ ಪಲಾಶವು ಬ್ರಹ್ಮವೇ ಆಗಿದೆ. ಇದು

ಪ್ರತ್ಯೇವಾಸ್ಯಾಹುತಯಸ್ತಿಷ್ಠಂತ್ಯಥೋ ಪ್ರೈವ ಜಾಯತ

ಏತದ್ವೈ ಸ್ರುಚಾಗ್ಂ ರೂಪಂ ಯಸ್ಯೈವಗ್ಂ

ರೂಪಾಸ್ಸ್ರುಚೋ ಭವಂತಿ

---

ಪ್ರತೀತಿ । ಏವ । ಅಸ್ಯ । ಆಹುತಯ ಇತ್ಯಾ-ಹುತಯಃ । ತಿಷ್ಠಂತಿ । ಅಥೋ ಇತಿ ।

ಪ್ರೇತಿ । ಏವ । ಜಾಯತೇ । ಏತತ್ । ವೈ । ಸ್ರುಚಾಮ್ । ರೂಪಮ್ । ಯಸ್ಯ ।

ಏವಗ್ಂರೂಪಾ ಇತ್ಯೇವಮ್-ರೂಪಾಃ । ಸ್ರುಚಃ । ಭವಂತಿ ।

---

| | |
|---|---|
| ಅಸ್ಯ ಆಹುತಯಃ ಪ್ರತಿ ತಿಷ್ಠಂತಿ ಏವ | ಈ ಯಜಮಾನನು ನೀಡುವ ಆಹುತಿಗಳು ಪ್ರತಿಷ್ಠಿತವೇ ಆಗುತ್ತವೆ. |
| ಅಥೋ ಪ್ರಜಾಯತೇ ಏವ | ಬಳಿಕ ಆ ಯಜಮಾನನು ಪ್ರಜಾವಂತನಾಗುತ್ತಾನೆ. |

## ಪ್ರಕೃತಿವೃಕ್ಷವಿಧಿಗಳ ಉಪಸಂಹಾರ; ಸಾಮೂಹಿಕ ಪ್ರಶಂಸೆ

| | |
|---|---|
| ಸ್ರುಚಾಮ್ ಏತತ್ ವೈ ರೂಪಮ್ | ಸ್ರುಕ್‌ಗಳೆನಿಸುವ [ಈ ಸ್ರುವ, ಜುಹೂ, ಉಪಭೃತ್ ಮತ್ತು ಧ್ರುವಾ] ಈ ಯಾಗಪಾತ್ರೆಗಳಿಗೆ ಖಾದಿರತ್ವ-ಪರ್ಣಮಯತ್ವ-ಅಶ್ವತ್ಥತ್ವ-ವೈಕಂಕತತ್ತ್ವಗಳೇ ರೂಪವಾಗಿವೆ. |
| ಯಸ್ಯ ಏವಂರೂಪಾಃ ಸ್ರುಚಃ ಭವಂತಿ | ಯಾವ ಯಜಮಾನನ ಯಾಗದಲ್ಲಿ ಸ್ರುಕ್‌ಗಳುಈ ರೂಪಗಳಾಗಿವೆಯೋ |

---

ಬ್ರಾಹ್ಮಣಜಾತಿಯೇ ಆಗಿದೆ.

'ಮರುತೋ ವೈ ದೇವಾನಾಂ ವಿಶಃ' ಎಂಬ ಶ್ರುತಿವಚನದಂತೆ ದೇವತೆಗಳಲ್ಲಿ ಮರುತರು ಅನ್ನವನ್ನು ಒದಗಿಸುವ ವೈಶ್ಯರಾಗಿದ್ದಾರೆ. ವೈಶ್ಯರು ಪ್ರಜೆಗಳಿಗೆ ಅನ್ನವನ್ನು ಕೊಡತಕ್ಕವರು.

'ಮರುತಾಂ ವಾ ಏತದೋಜಃ ಯದಶ್ವತ್ಥಃ' ಎಂಬ ಶ್ರುತಿವಚನದಂತೆ ಅಶ್ವತ್ಥವೃಕ್ಷಕ್ಕೆ

ಸರ್ವಾಣ್ಯೇವೈನಗ್ಂ ರೂಪಾಣಿ ಪಶೂನಾಮುಪತಿಷ್ಠಂತೇ

ನಾಸ್ಯಾಪರೂಪಮಾತ್ಮಞ್ಜಾಯತೇ ॥೨೪–7॥

[ಜುಹೂರಥೋ ಬ್ರಹ್ಮ ಸ್ರುಚಾಗ್ಂ ಸಪ್ತದಶ ಚ ॥]

---

ಸರ್ವಾಣಿ । ಏವ । ಏನಮ್ । ರೂಪಾಣಿ । ಪಶೂನಾಮ್ । ಉಪೇತಿ । ತಿಷ್ಠಂತೇ । ನ ।

ಅಸ್ಯ । ಅಪರೂಪಮಿತ್ಯಪ–ರೂಪಮ್ । ಆತ್ಮನ್ನ್ । ಜಾಯತೇ ॥೨೪॥

---

| | |
|---|---|
| ಏನಮ್ ಪಶೂನಾಮ್ ಸರ್ವಾಣಿ ರೂಪಾಣಿ ಉಪತಿಷ್ಠಂತೇ ಏವ | ಪಶುಗಳ ಪೈಕಿ ಗವಾಶ್ವಾದಿರೂಪವಾದ ಎಲ್ಲ ಪಶುಗಳೂ ಈ ಯಜಮಾನನನ್ನು ಸೇರಿಯೇ ಸೇರುತ್ತವೆ. |
| ಅಸ್ಯ ಆತ್ಮನ್ ಅಪರೂಪಮ್ ನ ಜಾಯತೇ | ಈ ಯಜಮಾನನ ಹೊಟ್ಟೆಯಲ್ಲಿ ವಿರೂಪ ವಾದ ಪ್ರಜೆಯು ಹುಟ್ಟುವುದಿಲ್ಲ. |

---

ಮರುತರೇ ದೇವತೆಗಳಾಗಿದ್ದಾರೆ. ಹೀಗಾಗಿ ಅಶ್ವತ್ಥವು ಮರುತರಿಗೆ ಸಂಬಂಧಿಸಿದೆ. ಉಪಭೃತ್ ಪಾತ್ರೆಯನ್ನು ಅಶ್ವತ್ಥವೃಕ್ಷದಿಂದ ಮಾಡಬೇಕು. [ವಿಧಿ]

ಯಾವ ಯಜಮಾನನ ಯಾಗದಲ್ಲಿ ಪರ್ಣಮಯವಾದ ಜುಹೂವಿನೊಡನೆ ಅಶ್ವತ್ಥದ ಉಪಭೃತ್ ಇರುತ್ತದೆಯೋ ಆದರಿಂದ ಬ್ರಹ್ಮದಿಂದ ಅನ್ನವನ್ನು ಹೊಂದಿದಂತಾಗಿ, ಬ್ರಾಹ್ಮಣ ಜಾತಿಯನ್ನು ವೈಶ್ಯಜಾತಿಗಿಂತ ಮೇಲಾಗಿಸಿದಂತಾಗುತ್ತದೆ.

ಅಶ್ವತ್ಥದ ಉಪಭೃತ್ ಇರಬೇಕೆಂಬುದರ ಪ್ರಶಂಸೆ ಇದು.

ಪರ್ಣ–ಅಶ್ವತ್ಥವೃಕ್ಷದಿಂದ ಜುಹೂ–ಉಪಭೃತ್ತುಗಳನ್ನು ಮಾಡಬೇಕೆಂಬ ವಿಧಿಯ ಇನ್ನೊಂದು ಪ್ರಶಂಸೆ ಇದು. ಇಲ್ಲಿ ಪರ್ಣವನ್ನು ರಾಷ್ಟ್ರರೂಪವಾಗಿಯೂ, ಅಶ್ವತ್ಥವನ್ನು ಪ್ರಜಾರೂಪವಾಗಿಯೂ ವರ್ಣಿಸಲಾಗಿದೆ. ಇಲ್ಲಿಯೂ ಪರ್ಣವನ್ನು ಬ್ರಾಹ್ಮಣರೂಪವಾಗಿಯೂ, ಅಶ್ವತ್ಥವನ್ನು ವೈಶ್ಯರೂಪವಾಗಿಯೂ ವರ್ಣಿಸಬಹುದು.

ಪ್ರಜಾಪತಿಯು ಅನುಷ್ಠಿಸಿದ ಮೊದಲ ಹೋಮದ ಆಹುತಿಯು ಪ್ರತಿಷ್ಠಿತವಾದೆಡೆ ವಿಕಂಕತವೃಕ್ಷವು ಜನಿಸಿತು. ಆದರಿಂದ ಪ್ರಜೆಗಳ ಸೃಷ್ಟಿಯಾಯಿತು. ಯಾಗಪಾತ್ರವಾದ

ಧ್ರುವೆಯು ವಿಕಂಕತವೃಕ್ಷದ್ದಾಗಿರಬೇಕು [ವಿಧಿ] ಆ ವೈಕಂಕತವು ಆಹುತಿಗಳನ್ನು ನೆಲೆಗೊಳಿಸುತ್ತದೆ. ಪ್ರಜೆಯನ್ನೂ ಕೊಡುತ್ತದೆ.

ಈ ಬ್ರಾಹ್ಮಣದಲ್ಲಿ ಸ್ರುವ ಮುಂತಾದ ಸ್ರುಕ್ ಎಂಬ ಹೆಸರಿನ ಎಲ್ಲ ಪಾತ್ರೆಗಳಿಗೆ ಹೇಳಿರುವ ಪ್ರಕೃತಿವೃಕ್ಷಗಳ ಸಾಮೂಹಿಕ ಪ್ರಶಂಸೆಯು ಇದೆ.

ಈ ರೀತಿ ಪ್ರಕೃತಿವೃಕ್ಷಗಳಿಂದ ಮಾಡಿದ ಸ್ರುಕ್‌ಗಳನ್ನು ಹೊಂದಿರುವ ಯಜಮಾನನಿಗೆ ಎಲ್ಲ ಪಶುಸಂಪತ್ತೂ ಒದಗುತ್ತದೆ. ವಿರೂಪವಾದ ಪ್ರಜೆಯೂ ಜನಿಸುವುದಿಲ್ಲ. ಆ ಯಜಮಾನನ ಮಕ್ಕಳೆಲ್ಲರೂ ರೂಪವಂತರಾಗಿಯೇ ಜನಿಸುತ್ತಾರೆ.

ಐ❁ಐಐ❁ಐ

## ॥ ಅಷ್ಟಮೋಽನುವಾಕಃ ॥

ಉಪಯಾಮಗೃಹೀತೋಽಸಿ ಪ್ರಜಾಪತಯೇ ತ್ವಾ ಜ್ಯೋತಿಷ್ಮತೇ ಜ್ಯೋತಿಷ್ಮಂತಂ ಗೃಹ್ಣಾಮಿ ದಕ್ಷಾಯ ದಕ್ಷವೃಧೇ ರಾತಂ

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಪ್ರಜಾಪತಯ ಇತಿ ಪ್ರಜಾ-ಪತಯೇ । ತ್ವಾ । ಜ್ಯೋತಿಷ್ಮತೇ । ಜ್ಯೋತಿಷ್ಮಂತಮ್ । ಗೃಹ್ಣಾಮಿ । ದಕ್ಷಾಯ । ದಕ್ಷವೃಧ ಇತಿ ದಕ್ಷ-ವೃಧೇ । ರಾತಮ್ ।

---

ಹಿಂದಿನ ಏಳನೆಯ ಅನುವಾಕದಲ್ಲಿ ಇಷ್ಟಿಯ ಅಂಗವಾದ ಸ್ರುಕ್‌ಗಳ ಪ್ರಕೃತಿವೃಕ್ಷಗಳು ಹೇಳಲ್ಪಟ್ಟವು. ಈ ಎಂಟನೆಯ ಅನುವಾಕದಲ್ಲಿ ದಧಿಗ್ರಹಗಳು ಹೇಳಲ್ಪಟ್ಟವೆ.

---

| ಮಂತ್ರ | ವಿನಿಯೋಗ |
|---|---|
| ಉಪಯಾಮ...ಪೃಥಿವ್ಯೈ ತ್ವಾ ॥ | ದಧಿಗ್ರಹವನ್ನು ಗ್ರಹಣ ಮಾಡುವುದಕ್ಕಾಗಿ |

---

✦[ಓ! ದಧಿಗ್ರಹವೇ!] ಉಪಯಾಮಗೃಹೀತಃ ಅಸಿ=ಮೃನ್ಮಯಪಾತ್ರೆಯಿಂದ ಗ್ರಹಿಸಲ್ಪಟ್ಟಿರುವೆ; ಜ್ಯೋತಿಷ್ಮತೇ=ಪ್ರಕಾಶಮಾನನಾದ; ಪ್ರಜಾಪತಯೇ=ಪ್ರಜಾಪತಿದೇವನಿಗಾಗಿ; ಜ್ಯೋತಿಷ್ಮಂತಮ್ ತ್ವಾ=ಪ್ರಕಾಶಮಾನನಾದ ನಿನ್ನನ್ನು; ಗೃಹ್ಣಾಮಿ=ಗ್ರಹಿಸುತ್ತೇನೆ; ದಕ್ಷವೃಧೇ=ಸಮರ್ಥರನ್ನು ವೃದ್ಧಿಗೊಳಿಸುವ; ದಕ್ಷಾಯ=ದಕ್ಷಪ್ರಜಾಪತಿಗೆ; ರಾತಮ್=ಹಿಂದೆ ಕೊಡಲ್ಪಟ್ಟ;

ದೇವೇಭ್ಯೋಽಗ್ನಿಜಿಹ್ವೇಭ್ಯಸ್ತ್ವರ್ತಾಯುಭ್ಯ ಇಂದ್ರಜ್ಯೇಷ್ಠೇಭ್ಯೋ ವರುಣರಾಜಭ್ಯೋ ವಾತಾಪಿಭ್ಯಃ ಪರ್ಜನ್ಯಾತ್ಮಭ್ಯೋ ದಿವೇ ತ್ವಾಽಂತರಿಕ್ಷಾಯ ತ್ವಾ ಪೃಥಿವ್ಯೈ ತ್ವಾ–

---

ದೇವೇಭ್ಯಃ । ಅಗ್ನಿಜಿಹ್ವೇಭ್ಯ ಇತ್ಯಗ್ನಿ–ಜಿಹ್ವೇಭ್ಯಃ । ತ್ವಾ । ಋತಾಯುಭ್ಯ ಇತ್ಯೃತಾಯು–ಭ್ಯಃ । ಇಂದ್ರಜ್ಯೇಷ್ಠೇಭ್ಯ ಇತೀಂದ್ರ–ಜ್ಯೇಷ್ಠೇಭ್ಯಃ । ವರುಣರಾಜಭ್ಯ ಇತಿ ವರುಣರಾಜ–ಭ್ಯಃ । ವಾತಾಪಿಭ್ಯ ಇತಿ ವಾತಾಪಿ–ಭ್ಯಃ । ಪರ್ಜನ್ಯಾತ್ಮಭ್ಯ ಇತಿ ಪರ್ಜನ್ಯಾತ್ಮ–ಭ್ಯಃ । ದಿವೇ । ತ್ವಾ । ಅಂತರಿಕ್ಷಾಯ । ತ್ವಾ । ಪೃಥಿವ್ಯೈ । ತ್ವಾ ।

---

[ತ್ವಾ ಪ್ರಜಾಪತಯೇ ಗೃಹ್ಣಾಮಿ=ನಿನ್ನನ್ನು ಪ್ರಜಾಪತಿದೇವನಿಗಾಗಿ ಗ್ರಹಣ ಮಾಡುತ್ತೇನೆ. ದಕ್ಷವೃಧೇ=ಅಧ್ವರ್ಯು–ಯಜಮಾನರನ್ನು ಪ್ರೋತ್ಸಾಹಿಸಿ ದಕ್ಷರನ್ನಾಗಿ ಮಾಡುವ; ದಕ್ಷಾಯ=ದಕ್ಷಪ್ರಜಾಪತಿಗೆ ನಿನ್ನನ್ನು ಗ್ರಹಿಸುತ್ತೇನೆ] [ಮತ್ತು] **ಅಗ್ನಿಜಿಹ್ವೇಭ್ಯಃ**=ಅಗ್ನಿಯೇ ನಾಲಿಗೆಯಾಗಿರುವ; **ಋತಾಯುಭ್ಯಃ**=ಸತ್ಯವನ್ನು ಇಚ್ಛಿಸುವ/ಯಜ್ಞವೇ ಆಯುಸ್ಸಾಗಿರುವ; **ಇಂದ್ರಜ್ಯೇಷ್ಠೇಭ್ಯಃ**=ಇಂದ್ರನನ್ನೇ ಜ್ಯೇಷ್ಠನನ್ನಾಗಿ ಪಡೆದಿರುವ; **ವರುಣರಾಜಭ್ಯಃ**=ವರುಣನನ್ನೇ ರಾಜನನ್ನಾಗಿ ಹೊಂದಿರುವ; **ವಾತಾಪಿಭ್ಯಃ**=ವಾಯುವನ್ನು ಆಹಾರವನ್ನಾಗಿ ಹೊಂದಿರುವ/**ವಾಯುವಿನಂತೆ ವ್ಯಾಪಿಸುವ ಅಮೂರ್ತರಾದ ಪಿತೃದೇವತೆಗಳಿಗೆ; ಪರ್ಜನ್ಯಾತ್ಮಭ್ಯಃ**=ಮಳೆ, ಬಿಸಿಲು ಮುಂತಾದವುಗಳನ್ನು ಸಹಿಸಬಲ್ಲ;/ಮಳೆಯನ್ನು ಸುರಿಸುವ ಸ್ವಭಾವವುಳ್ಳ; **ದೇವೇಭ್ಯಃ**=[ಇಂತಹ ಹಲವು ಬಗೆಯ] ದೇವತೆಗಳಿಗೆ; **ರಾತಮ್**=ಹಿಂದೆ ಕೊಡಲ್ಪಟ್ಟಿದ್ದ; **ತ್ವಾ**=ನಿನ್ನನ್ನು; ಪ್ರಜಾಪತಯೇ ಗೃಹ್ಣಾಮಿ=ಸರ್ವದೇವತಾಸ್ವರೂಪನಾದ ಪ್ರಜಾಪತಿಗಾಗಿ ಗ್ರಹಿಸುತ್ತೇನೆ; **ತ್ವಾ ದಿವೇ**=ನಿನ್ನನ್ನು ದ್ಯುಲೋಕದ [ಪ್ರಾಪ್ತಿಗಾಗಿ] **ತ್ವಾ ಅಂತರಿಕ್ಷಾಯ**=ಅಂತರಿಕ್ಷಲೋಕದ[ಪ್ರಾಪ್ತಿಗಾಗಿ] ನಿನ್ನನ್ನು; **ಪೃಥಿವ್ಯೈ ತ್ವಾ**=ಭೂಲೋಕದ [ಪ್ರಾಪ್ತಿಗಾಗಿ] ನಿನ್ನನ್ನು [ಗ್ರಹಿಸುವೆನು].

–ಽಪೇಂದ್ರ ದ್ವಿಷತೋ ಮನೋಪ ಜಿಜ್ಯಾಸತೋ

ಜಹ್ಯಪಯೋನೋಽರಾತೀಯತಿ ತಂ ಜಹಿ

---

ಅಪೇತಿ । ಇಂದ್ರ । ದ್ವಿಷತಃ । ಮನಃ । ಅಪೇತಿ । ಜಿಜ್ಯಾಸತಃ । ಜಹಿ । ಅಪೇತಿ । ಯಃ । ನಃ । ಅರಾತೀಯತಿ । ತಮ್ । ಜಹಿ ।

---

| ಮಂತ್ರ | ವಿನಿಯೋಗ |
| --- | --- |
| ಅಪೇಂದ್ರ...ತಂ ಜಹಿ ॥ | ದಧಿಗ್ರಹವನ್ನು ತೆಗೆದುಕೊಳ್ಳಲು |

---

+ಇಂದ್ರ=ಇಂದ್ರದೇವನೇ! ದ್ವಿಷತಃ=ಯಜಮಾನನ ಶತ್ರುವಾಗಿ ಅವನ ದ್ರವ್ಯಾದಿಗಳನ್ನು ನಾಶಪಡಿಸುವವನ; ಮನಃ ಅಪ ಜಹಿ=ದ್ವೇಷಯುಕ್ತವಾದ ಮನಸ್ಸನ್ನು ಹೋಗಲಾಡಿಸು; ಜಿಜ್ಯಾಸತಃ=ಯಜಮಾನನ ಮರಣವನ್ನು ಬಯಸುವ ಶತ್ರುವಿನ ಮನಃ ಅಪ ಜಹಿ=ಮನಸ್ಸಿನ ದ್ವೇಷವನ್ನು ನಾಶಪಡಿಸು; ಯಃ ನಃ ಅರಾತೀಯತಿ =ಯಾವ ಹಗೆಯು ನಮಗೆ ಕೊಡಬೇಕಾದುದನ್ನು ಕೊಡುವುದಿಲ್ಲವೋ; ತಮ್ ಅಪ ಜಹಿ=ಅವನನ್ನು ನಾಶಪಡಿಸು;

---

ಈ ದಧಿಗ್ರಹವು ಪ್ರಜಾಪತಿದೇವನಿಗಾಗಿ ಗ್ರಹಿಸಲ್ಪಟ್ಟಿದೆ. ಸರ್ವದೇವಾತ್ಮಕನಾದ ಪ್ರಜಾಪತಿದೇವನಿಗಾಗಿ ಇದು ಗ್ರಹಿಸಲ್ಪಟ್ಟಿರುವುದರಿಂದ ಈ ದಧಿಗ್ರಹದಿಂದ ಯಜಮಾನನು ಸರ್ವದೇವತಾನುಗ್ರಹವನ್ನೂ ಪಡೆಯುತ್ತಾನೆ. ಆ ದೇವತೆಗಳು ಹಲವು ಬಗೆಯವರೆಂದು ಈ ಮಂತ್ರದಲ್ಲಿ ಹೇಳಲ್ಪಟ್ಟಿದೆ.

ಹೇ! ಇಂದ್ರನೇ! ನೀನು ಯಜಮಾನನ ದ್ರವ್ಯಾದಿಗಳನ್ನು ನಾಶಪಡಿಸುವ, ದ್ರವ್ಯನಾಶ ಮಾಡಲು ಅಸಮರ್ಥನಾಗಿ ಯಜಮಾನನ ಮರಣವನ್ನೇ ಬಯಸುವ, ಯಜಮಾನನಿಗೆ ಕೊಡಬೇಕಾದುದನ್ನು ಕೊಡದಿರುವ ಮೂರು ವಿಧದ ಶತ್ರುಗಳನ್ನೂ ಅವರ ದ್ವೇಷವನ್ನೂ ಹೋಗಲಾಡಿಸು.

ಪ್ರಾಣಾಯ ತ್ವಾಽಪಾನಾಯ ತ್ವಾ ವ್ಯಾನಾಯ ತ್ವಾ ಸತೇ ತ್ವಾಽಸತೇ
ತ್ವಾಽದ್ಭ್ಯಸ್ತ್ವೌಷಧೀಭ್ಯೋ ವಿಶ್ವೇಭ್ಯಸ್ತ್ವಾ ಭೂತೇಭ್ಯೋ

---

ಪ್ರಾಣಾಯೇತಿ ಪ್ರ-ಅನಾಯ । ತ್ವಾ । ಅಪಾನಾಯೇತ್ಯಪ-ಅನಾಯ । ತ್ವಾ ।
ವ್ಯಾನಾಯೇತಿ ವಿ-ಅನಾಯ । ತ್ವಾ । ಸತೇ । ತ್ವಾ । ಅಸತೇ । ತ್ವಾ । ಅದ್ಭ್ಯ ಇತ್ಯತ್-
ಭ್ಯಃ । ತ್ವಾ । ಓಷಧೀಭ್ಯ ಇತ್ಯೋಷಧಿ-ಭ್ಯಃ । ವಿಶ್ವೇಭ್ಯಃ । ತ್ವಾ । ಭೂತೇಭ್ಯಃ ।

---

| ಮಂತ್ರ | ವಿನಿಯೋಗ |
|---|---|
| ಪ್ರಾಣಾಯ...ಜುಹೋಮಿ ॥ | ಹೋಮವನ್ನು ಅನುಷ್ಠಿಸಲು |

---

[ಓ! ದಧಿಗ್ರಹವೇ!] ತ್ವಾ ಪ್ರಾಣಾಯ=ಪ್ರಾಣಪ್ರೀತಿಗಾಗಿ ನಿನ್ನನ್ನು; ಜುಹೋಮಿ=[ಅಗ್ನಿಯಲ್ಲಿ] ಹೋಮ ಮಾಡುತ್ತೇನೆ; ಅಪಾನಾಯ ತ್ವಾ=ಅಪಾನವಾಯುಪ್ರೀತಿಗಾಗಿ ನಿನ್ನನ್ನು; ಜುಹೋಮಿ=ಹೋಮ ಮಾಡುತ್ತೇನೆ; ವ್ಯಾನಾಯ ತ್ವಾ=ವ್ಯಾನವಾಯುವಿನ ಪ್ರೀತಿಗಾಗಿ ನಿನ್ನನ್ನು; ಜುಹೋಮಿ=ಹೋಮ ಮಾಡುತ್ತೇನೆ. *ಸತೇ ತ್ವಾ=ಧಾರ್ಮಿಕನ ಪ್ರೀತಿಗಾಗಿ ನಿನ್ನನ್ನು; ಜುಹೋಮಿ=ಸಮರ್ಪಿಸುತ್ತೇನೆ; *ಅಸತೇ ತ್ವಾ=ಕೆಟ್ಟವನ ಸಂತೋಷಕ್ಕಾಗಿ ನಿನ್ನನ್ನು; ಜುಹೋಮಿ=ಹೋಮ ಮಾಡುತ್ತೇನೆ; ಅದ್ಭ್ಯಃ ತ್ವಾ=ಜಲದೇವತೆಗಳ ಪ್ರೀತಿಗಾಗಿ ನಿನ್ನನ್ನು; ಜುಹೋಮಿ=ಹೋಮ ಮಾಡುತ್ತೇನೆ; ಓಷಧೀಭ್ಯಃ ತ್ವಾ*=ಸಸ್ಯದೇವತೆಗಳ ತುಷ್ಟಿಗಾಗಿ ನಿನ್ನನ್ನು; ಜುಹೋಮಿ=ಹೋಮ ಮಾಡುತ್ತೇನೆ; ವಿಶ್ವೇಭ್ಯಃ ಭೂತೇಭ್ಯಃ ತ್ವಾ=ಸರ್ವ ಪ್ರಾಣಿಗಳ ಪ್ರೀತಿಗಾಗಿ ನಿನ್ನನ್ನು; ಜುಹೋಮಿ=ಹೋಮ ಮಾಡುತ್ತೇನೆ.

---

*ಶಾಸ್ತ್ರೀಯ ಮಾರ್ಗವನ್ನು ಅನುಸರಿಸುವವನು 'ಸನ್'. ಹಾಗೆ ಅಲ್ಲದವನು 'ಅಸನ್'. ಅವನಿಗೂ ಸಹ 'ತುಷ್ಯತು ದುರ್ಜನಃ' [ಕೆಟ್ಟವನಿಗೂ ಒಳ್ಳೆಯದನ್ನು ಬಯಸಬೇಕು ಎಂಬ ತಾತ್ಪರ್ಯದ ನ್ಯಾಯ] ಎಂಬ ನ್ಯಾಯದಂತೆ ಪ್ರೀತಿಯಾಗಲಿ ಎಂಬ ಪ್ರಾರ್ಥನೆಯು ಇದೆ.

*ಅನುಷಂಗ.

ಯತಃ ಪ್ರಜಾ ಅಕ್ಬಿದ್ರಾ ಅಜಾಯಂತ ತಸ್ಮೈ ತ್ವಾ

ಪ್ರಜಾಪತಯೇ ವಿಭೂದಾವ್ನ್ನೇ ಜ್ಯೋತಿಷ್ಮತೇ

ಜ್ಯೋತಿಷ್ಮಂತಂ ಜುಹೋಮಿ ॥೨೫-೪॥

[ಓಷಧೀಭ್ಯಶ್ಚತುರ್ದಶ ಚ ॥]

---

ಯತಃ । ಪ್ರಜಾ ಇತಿ ಪ್ರ-ಜಾಃ । ಅಕ್ಬಿದ್ರಾಃ । ಅಜಾಯಂತ । ತಸ್ಮೈ । ತ್ವಾ । ಪ್ರಜಾಪತಯ ಇತಿ ಪ್ರಜಾ-ಪತಯೇ । ವಿಭೂದಾವ್ನ್ನ ಇತಿ ವಿಭು-ದಾವ್ನ್ನೇ । ಜ್ಯೋತಿಷ್ಮತೇ । ಜ್ಯೋತಿಷ್ಮಂತಮ್ । ಜುಹೋಮಿ ॥೨೫-೮॥

---

ಯತಃ=[ಮತ್ತು] ಯಾವ ಪ್ರಜಾಪತಿಯಿಂದ; ಅಕ್ಬಿದ್ರಾಃ=ಛೇದವಿಲ್ಲದವರಾಗಿ; ಪ್ರಜಾಃ=ಪ್ರಜೆಗಳು; ಅಜಾಯಂತ=ಹುಟ್ಟುತ್ತಾರೆಯೋ; ತಸ್ಮೈ=ಆ [ಅಂತಹ] ವಿಭೂದಾವ್ನ್ನೇ=ಹೆಚ್ಚಾದ ಐಶ್ವರ್ಯವನ್ನು ಕೊಡುವ; ಜ್ಯೋತಿಷ್ಮತೇ= ಪ್ರಕಾಶ ಮಾನನಾದ; ಪ್ರಜಾಪತಯೇ=ಸರ್ವದೇವಾತ್ಮಕನಾದ ಪ್ರಜಾಪತಿಯ ಪ್ರೀತಿಗಾಗಿ; ಜ್ಯೋತಿಷ್ಮಂತಮ್=ಕಾಂತಿಯುಳ್ಳ; ತ್ವಾ=ನಿನ್ನನ್ನು; ಜುಹೋಮಿ=[ದಧಿಗ್ರಹವನ್ನು] ಹೋಮ ಮಾಡುತ್ತೇನೆ;

---

ಹೇ! ದಧಿಗ್ರಹವೇ! ನಿನ್ನನ್ನು ಪ್ರಾಣ, ಅಪಾನ, ವ್ಯಾನಗಳ ಪ್ರೀತಿಗಾಗಿ ಅಗ್ನಿಯಲ್ಲಿ ಸಮರ್ಪಿಸುತ್ತೇನೆ. ಸಜ್ಜನನ, ಮತ್ತು ದುರ್ಜನನ ಪ್ರೀತಿಗಾಗಿಯೂ, ಜಲ-ಸಸ್ಯ-ಪ್ರಾಣಿ ದೇವತೆಗಳ ಪ್ರೀತಿಗಾಗಿಯೂ, ಯಾವ ಪ್ರಜಾಪತಿಯಿಂದ ಛೇದರಹಿತರಾದ ಪ್ರಜೆಗಳು ಜನಿಸುವರೋ ಅಂತಹ ಪ್ರಜಾಪತಿದೇವನ ಪ್ರೀತಿಗಾಗಿ ತೇಜಸ್ವಿಯಾದ ನಿನ್ನನ್ನೇ ಹೋಮ ಮಾಡುತ್ತೇನೆ.

## ವಿನಿಯೋಗಸಂಗ್ರಹ

[1]ಉಪಯಾ ದಧಿ ಗೃಹ್ಣಾತ್ಯಪೇಂದ್ರೇ[2]ತಿ ಹರತಿ ಗ್ರಹಮ್ ।
[3] ಪ್ರಾಣಾಯೇತಿ ಜುಹೋತ್ಯೇತಂ ತ್ರಯೋ ಮಂತ್ರಾ ಇಹೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–3



## ॥ ನವಮೋಽನುವಾಕಃ ॥

ಯಾಂ ವಾ ಅಧ್ವರ್ಯುಶ್ಚ ಯಜಮಾನಶ್ಚ

ದೇವತಾಮಂತರಿತಸ್ತಸ್ಯಾ ಆವೃಶ್ಚ್ಯೇತೇ

---

ಯಾಮ್ । ವೈ । ಅಧ್ವರ್ಯುಃ । ಚ । ಯಜಮಾನಃ । ಚ । ದೇವತಾಮ್ । ಅಂತರಿತ ಇತ್ಯಂತಃ-ಇತಃ । ತಸ್ಯೈ । ಏತಿ । ವೃಶ್ಚ್ಯೇತೇ ಇತಿ ।

---

ಎಂಟನೆಯ ಅನುವಾಕದಲ್ಲಿ ದಧಿಗ್ರಹಮಂತ್ರಗಳು ಹೇಳಲ್ಪಟ್ಟಿವೆ. ಈ ಒಂಬತ್ತನೆಯ ಅನುವಾಕದಲ್ಲಿ ದಧಿಗ್ರಹಮಂತ್ರಗಳ ಬ್ರಾಹ್ಮಣವು ಉಕ್ತವಾಗಿದೆ.

---

### ದಧಿಗ್ರಹವಿಧಿ; ಅದರ ಬ್ರಾಹ್ಮಣ

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಧ್ವರ್ಯುಃ ಚ ಯಜಮಾನಃ ಚ | ಅಧ್ವರ್ಯುವೂ ಮತ್ತು ಯಜಮಾನನು [ಸೋಮಯಾಗದಲ್ಲಿ ಹಲವು ದೇವತೆಗಳು ಇರುವುದರಿಂದ] |
| ಯಾಮ್ ವೈ ದೇವತಾಮ್ ಅಂತರಿತಃ | ಯಾವ ದೇವತೆಯನ್ನು ಪ್ರಮಾದದಿಂದ ಮರೆತುಬಿಡುತ್ತಾರೆಯೋ |
| ತಸ್ಯೈ ಆ ವೃಶ್ಚ್ಯೇತೇ | ಆ ದೇವತೆಯಿಂದ ತಪ್ಪಿದವರಾಗುತ್ತಾರೆ. |

ಪ್ರಾಜಾಪತ್ಯಂ ದಧಿಗ್ರಹಂ ಗೃಹ್ಣೀಯಾತ್ಪ್ರಜಾಪತಿಸ್ಸರ್ವಾ ದೇವತಾ ದೇವತಾಭ್ಯ ಏವ ನಿಹ್ನುವಾತೇ ಜ್ಯೇಷ್ಠೋ ವಾ ಏಷ ಗ್ರಹಾಣಾಂ ಯಸ್ಯೈಷ ಗೃಹ್ಯತೇ

---

ಪ್ರಾಜಾಪತ್ಯಮಿತಿ ಪ್ರಾಜಾ–ಪತ್ಯಮ್ । ದಧಿಗ್ರಹಮಿತಿ ದಧಿ–ಗ್ರಹಮ್ । ಗೃಹ್ಣೀಯಾತ್ । ಪ್ರಜಾಪತಿರಿತಿ ಪ್ರಜಾ–ಪತಿಃ । ಸರ್ವಾಃ । ದೇವತಾಃ । ದೇವತಾಭ್ಯಃ । ಏವ । ನೀತಿ । ಹ್ನುವಾತೇ ಇತಿ । ಜ್ಯೇಷ್ಠಃ । ವೈ । ಏಷಃ । ಗ್ರಹಾಣಾಮ್ । ಯಸ್ಯ । ಏಷಃ । ಗೃಹ್ಯತೇ ।

---

| | |
|---|---|
| ಪ್ರಾಜಾಪತ್ಯಮ್ ದಧಿಗ್ರಹಮ್ ಗೃಹ್ಣೀಯಾತ್ | [ಈ ದೋಷಪರಿಹಾರಕ್ಕಾಗಿ]ಪ್ರಜಾಪತಿದೇವತಾಕವಾದ ದಧಿಗ್ರಹವನ್ನು ಮಾಡಬೇಕು. [ವಿಧಿ] |
| ಪ್ರಜಾಪತಿಃ ಸರ್ವಾಃ ದೇವತಾಃ | [ಜಗತ್ತನ್ನು ಸೃಷ್ಟಿಸಿರುವ] ಪ್ರಜಾಪತಿಯು ಸರ್ವದೇವತಾಸ್ವರೂಪನು. |
| ದೇವತಾಭ್ಯಃ ಏವ ನಿಹ್ನುವಾತೇ | [ಪ್ರಜಾಪತಿದೇವನಿಗೆ ಹವಿಸ್ಸನ್ನು ನೀಡಿ] ಯಾವ ದೇವತೆಯನ್ನೂ ಬಿಟ್ಟಿಲ್ಲವೆಂದು ಹೇಳಿದವರಾಗುತ್ತಾರೆ. |

## ದಧಿಗ್ರಹದ ಪ್ರಾಥಮ್ಯವಿಧಿ; ಪ್ರಶಂಸೆ

| | |
|---|---|
| ಏಷಃ ಗ್ರಹಾಣಾಮ್ ಜ್ಯೇಷ್ಠಃ ವೈ | ಈ ದಧಿಗ್ರಹವು ಗ್ರಹಗಳಲ್ಲಿ ಪ್ರಥಮವಾಗಿದೆ. [ಪ್ರಥಮವಾಗಿರಬೇಕು.] (ವಿಧಿ) |
| ಯಸ್ಯ ಏಷಃ ಗೃಹ್ಯತೇ | ಯಾವ ಯಜಮಾನನ ಯಾಗದಲ್ಲಿ ಈ ದಧಿಗ್ರಹವು ಪ್ರಥಮವಾಗಿ ಗ್ರಹಿಸಲ್ಪಡುವುದೋ |

---

ಸೋಮಯಾಗದಲ್ಲಿ ಹಲವು ದೇವತೆಗಳು ಇರುವುದರಿಂದ ಅಧ್ವರ್ಯುರ್ಯಜಮಾನರು ಯಾವುದಾದರೂ ದೇವತೆಯನ್ನು ಪ್ರಮಾದದಿಂದ ಮರೆತರೆ

ಜ್ಯೈಷ್ಠ್ಯಮೇವ ಗಚ್ಛತಿ ಸರ್ವಾಸಾಂ ವಾ ಏತದ್ದೇವತಾನಾಗ್ಂ

ರೂಪಂ ಯದೇಷ ಗ್ರಹೋ ಯಸ್ಯೈಷ ಗೃಹ್ಯತೇ

ಸರ್ವಾಣ್ಯೇವೈನಗ್ಂ ರೂಪಾಣಿ ಪಶೂನಾಮುಪತಿಷ್ಠಂತ

---

ಜ್ಯೈಷ್ಠ್ಯಮ್ । ಏವ । ಗಚ್ಛತಿ । ಸರ್ವಾಸಾಮ್ । ವೈ । ಏತತ್ । ದೇವತಾನಾಮ್ । ರೂಪಮ್ । ಯತ್ । ಏಷಃ । ಗ್ರಹಃ । ಯಸ್ಯ । ಏಷಃ । ಗೃಹ್ಯತೇ । ಸರ್ವಾಣಿ । ಏವ । ಏನಮ್ । ರೂಪಾಣಿ । ಪಶೂನಾಮ್ । ಉಪೇತಿ । ತಿಷ್ಠಂತೇ ।

---

| | |
|---|---|
| ಜ್ಯೈಷ್ಠ್ಯಮ್ ಏವ ಗಚ್ಛತಿ | ಆ ಯಜಮಾನನು ಯಜಮಾನರಲ್ಲಿ ಪ್ರಾಥಮ್ಯವನ್ನೇ ಪಡೆಯುತ್ತಾನೆ. |

### ಪ್ರಜಾಪತಿದೇವತೆಯ ಪ್ರಶಂಸೆ

| | |
|---|---|
| ಯತ್ ಏಷಃ ಗ್ರಹಃ | ದಧಿಗ್ರಹವೆಂಬ ಪ್ರಜಾಪತಿದೇವತಾಕವಾದ ಗ್ರಹವು ಯಾವುದುಂಟೋ |
| ಏತತ್ ಸರ್ವಾಸಾಮ್ | ಇದು ಎಲ್ಲ ದೇವತೆಗಳ |
| ದೇವತಾನಾಮ್ ರೂಪಮ್ ವೈ | ಸ್ವರೂಪವೇ ಆಗಿದೆ. |
| ಯಸ್ಯ ಏಷಃ ಗೃಹ್ಯತೇ | ಯಾವ ಯಜಮಾನನ ಯಾಗದಲ್ಲಿ ಇದರ ಗ್ರಹಣವಾಗುವುದೋ |
| ಪಶೂನಾಮ್ ಸರ್ವಾಣಿ ರೂಪಾಣಿ | ಪಶುಗಳಲ್ಲಿ ಗವಾಶ್ವಾದಿಯಾದ ಸರ್ವವಿಧ ಪಶುಗಳೂ |
| ಏನಮ್ ಉಪತಿಷ್ಠಂತೇ ಏವ | ಈ ಯಜಮಾನನನ್ನು ಹೊಂದಿಯೇ ಹೊಂದುತ್ತವೆ. |

---

ಆ ದೇವತೆಗಳ ವಿಷಯದಲ್ಲಿ ಅಪರಾಧಿಗಳಾಗುತ್ತಾರೆ. ಈ ದೋಷಪರಿಹಾರಕ್ಕಾಗಿ ಸರ್ವದೇವತಾ ಸ್ವರೂಪನಾದ ಪ್ರಜಾಪತಿದೇವನಿಗೆ ದಧಿಗ್ರಹವನ್ನು ಗ್ರಹಣ ಮಾಡಿದರೆ

ಉಪಯಾಮಗೃಹೀತೋ[..ಗೃಹೀತಃ(೨೬)ಅಸಿ

ಪ್ರಜಾಪತಯೇ]ಸಿ ಪ್ರಜಾಪತಯೇ ತ್ವಾ ಜ್ಯೋತಿಷ್ಮತೇ

ಜ್ಯೋತಿಷ್ಮಂತಂ ಗೃಹ್ಣಾಮೀತ್ಯಾಹ

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ ।(೨೬)। ಅಸಿ । ಪ್ರಜಾಪತಯ ಇತಿ ಪ್ರಜಾ-ಪತಯೇ । ತ್ವಾ । ಜ್ಯೋತಿಷ್ಮತೇ । ಜ್ಯೋತಿಷ್ಮಂತಮ್ । ಗೃಹ್ಣಾಮಿ । ಇತಿ । ಆಹ ।

---

ಗ್ರಹಣಮಂತ್ರಭಾಗಗಳ ವಿವರಣೆ

| | |
|---|---|
| ಉಪಯಾಮಗೃಹೀತೋಽಸಿ ಪ್ರಜಾಪತಯೇ ತ್ವಾ ಜ್ಯೋತಿಷ್ಮತೇ ಜ್ಯೋತಿಷ್ಮಂತಮ್ ಗೃಹ್ಣಾಮಿ ಇತಿ ಆಹ | 'ಮೃನ್ಮಯಪಾತ್ರದಿಂದ ಗೃಹೀತನಾದ ಜ್ಯೋತಿಷ್ಮಂತನಾದ ನಿನ್ನನ್ನು [ದಧಿಗ್ರಹವನ್ನು] ಪ್ರಕಾಶಮಾನನಾದ ಪ್ರಜಾಪತಿದೇವನಿಗಾಗಿ ಗ್ರಹಣ ಮಾಡುತ್ತೇನೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |

---

ಎಲ್ಲ ದೇವತೆಗಳಿಗೂ ಗ್ರಹಣ ಮಾಡಿದಂತಾಗಿ ಆ ದೇವತೆಗಳು ಕೋಪಿಸಿಕೊಳ್ಳುವುದಿಲ್ಲ.

ಪ್ರಜಾಪತಿಯು ಸರ್ವಜ್ಯೇಷ್ಠನಾದುದರಿಂದ ಪ್ರಜಾಪತಿದೇವತಾಕವಾದ ದಧಿಗ್ರಹದ ಪ್ರಥಮಗ್ರಹಣದಿಂದ ಯಜಮಾನನು ಜ್ಯೇಷ್ಠನೇ ಆಗುತ್ತಾನೆ.

ದಧಿಗ್ರಹವು ಸರ್ವದೇವತಾರೂಪವಾದುದರಿಂದ ಯಜಮಾನನು ಎಲ್ಲ ಬಗೆಯ ಪಶುಗಳನ್ನೂ ಹೊಂದುತ್ತಾನೆ. ಇದು ಪ್ರಜಾಪತಿದೇವತೆಯ ಇನ್ನೊಂದು ಬಗೆಯ ಪ್ರಶಂಸೆ.

ಜ್ಯೋತಿರೇವೈನಗ್ಂ ಸಮಾನಾನಾಂ ಕರೋತ್ಯಗ್ನಿಜಿಹ್ವೇಭ್ಯ

ಸ್ತ್ವರ್ತಾಯುಭ್ಯ ಇತ್ಯಾಹೈತಾವತೀರ್ವೈ ದೇವತಾಸ್ತಾಭ್ಯ

ಏವೈನಗ್ಂ ಸರ್ವಾಭ್ಯೋ ಗೃಹ್ಣಾತ್ಯ-

---

ಜ್ಯೋತಿಃ। ಏವ। ಏನಮ್। ಸಮಾನಾನಾಮ್। ಕರೋತಿ। ಅಗ್ನಿಜಿಹ್ವೇಭ್ಯ ಇತ್ಯಗ್ನಿ-ಜಿಹ್ವೇಭ್ಯಃ। ತ್ವಾ। ಋತಾಯುಭ್ಯ ಇತ್ಯೃತಾಯು-ಭ್ಯಃ। ಇತಿ। ಆಹ। ಏತಾವತೀಃ। ವೈ। ದೇವತಾಃ। ತಾಭ್ಯಃ। ಏವ। ಏನಮ್। ಸರ್ವಾಭ್ಯಃ। ಗೃಹ್ಣಾತಿ।

---

| | |
|---|---|
| ಸಮಾನಾನಾಮ್ ಏನಮ್ ಜ್ಯೋತಿಃ ಏವ ಕರೋತಿ | ಅಧ್ವರ್ಯುವು ಈ ಮಂತ್ರದಿಂದ ಯಜಮಾನನನ್ನು ಸಮಾನರ ನಡುವೆ ಅಧಿಕ ತೇಜೋಯುಕ್ತನನ್ನಾಗಿ ಮಾಡುತ್ತಾನೆ. |
| ಅಗ್ನಿಜಿಹ್ವೇಭ್ಯಃ ತ್ವಾ ಋತಾಯುಭ್ಯಃ ಇತಿ ಆಹ | ಈ ಮಂತ್ರದ ಮತ್ತೊಂದು ಭಾಗವು 'ಅಗ್ನಿಯೇ ನಾಲಿಗೆಯಾಗಿರುವ ಸತ್ಯವನ್ನು ಇಚ್ಛಿಸುವ ದೇವತೆಗಳಿಗಾಗಿ ನಿನ್ನನ್ನು ಗ್ರಹಿಸುತ್ತೇನೆ' ಎಂದು ಹೇಳುತ್ತದೆ. |
| ದೇವತಾಃ ಏತಾವತೀಃ ವೈ | ದೇವತೆಗಳು ಇಷ್ಟೇ ಬಗೆಯವರು. |
| ಏನಮ್ ತಾಭ್ಯಃ ಸರ್ವಾಭ್ಯಃ ಏವ ಗೃಹ್ಣಾತಿ | [ಈ ಮಂತ್ರಭಾಗವನ್ನು ಹೇಳುವುದರಿಂದ] ಅಧ್ವರ್ಯುವು ಆ ದೇವತೆಗಳೆಲ್ಲರ ಪ್ರೀತಿಗಾಗಿ ದಧಿಗ್ರಹವನ್ನು ಗ್ರಹಣ ಮಾಡಿದವನಾಗುತ್ತಾನೆ. |

---

ಗ್ರಹಣಮಂತ್ರದ ಭಾಗಗಳನ್ನು ಈ ಬ್ರಾಹ್ಮಣವು ವಿವರಿಸುತ್ತದೆ. ಈ ಮಂತ್ರದಲ್ಲಿ ಜ್ಯೋತಿಃಶಬ್ದದಿಂದ ಕೂಡಿರುವ 'ಜ್ಯೋತಿಷ್ಮತೇ' 'ಜ್ಯೋತಿಷ್ಮಂತಂ ಕರೋಮಿ' ಎಂದಿರುವುದರಿಂದ, ಆ ಭಾಗಗಳನ್ನು ಹೇಳುವುದರಿಂದ ಅಧ್ವರ್ಯುವು ಯಜಮಾನನನ್ನು ಸಮಾನರಲ್ಲಿ ಅಧಿಕತೇಜೋಯುಕ್ತನನ್ನಾಗಿ ಮಾಡುತ್ತಾನೆ. ಎಲ್ಲ ದೇವತೆಗಳನ್ನೂ ಸಂತೋಷಗೊಳಿಸುತ್ತಾನೆ. ಎಲ್ಲ ಬಗೆಯ ಹಗೆಗಳನ್ನೂ ನಾಶಗೊಳಿಸುತ್ತಾನೆ.

ಪೇಂದ್ರ ದ್ವಿಷತೋ ಮನ ಇತ್ಯಾಹ ಭ್ರಾತೃವ್ಯಾಪನುತ್ತ್ಯೈ

ಪ್ರಾಣಾಯ ತ್ವಾಽಪಾನಾಯತ್ವೇತ್ಯಾಹ ಪ್ರಾಣಾನೇವ

ಯಜಮಾನೇ ದಧಾತಿ

---

ಅಪೇತಿ । ಇಂದ್ರ । ದ್ವಿಷತಃ । ಮನಃ । ಇತಿ । ಆಹ । ಭ್ರಾತೃವ್ಯಾಪನುತ್ತ್ಯಾ ಇತಿ ಭ್ರಾತೃವ್ಯ-ಅಪನುತ್ತ್ಯೈ । ಪ್ರಾಣಾಯೇತಿ ಪ್ರ-ಅನಾಯ । ತ್ವಾ । ಅಪಾನಾಯೇತ್ಯಪ-ಅನಾಯ । ತ್ವಾ । ಇತಿ । ಆಹ । ಪ್ರಾಣಾನಿತಿ ಪ್ರ-ಅನಾನ್ । ಏವ । ಯಜಮಾನೇ । ದಧಾತಿ ।

---

| | |
|---|---|
| **ಅಪೇಂದ್ರ ದ್ವಿಷತಃ ಮನಃ ಇತಿ ಆಹ ಭ್ರಾತೃವ್ಯಾಪನುತ್ತ್ಯೈ** | ಈ ಗ್ರಹಣಮಂತ್ರದ ಭಾಗವು 'ಇಂದ್ರನೇ ಮೂರು ಬಗೆಯ ಶತ್ರುಗಳನ್ನೂ ವೈರಿಗಳ ಮನಸ್ಸನ್ನೂ ನಿವಾರಿಸು' ಎಂದು ಹೇಳುತ್ತದೆ. ಇದು ಶತ್ರುಗಳ ಹಾಗೂ ಶತ್ರುತ್ವದ ನಾಶಕ್ಕೆ ಕಾರಣವಾಗುತ್ತದೆ. |

**ಹೋಮಮಂತ್ರದ ಮೊದಲ ಭಾಗದ ವಿವರಣೆ**

| | |
|---|---|
| **ಪ್ರಾಣಾಯ ತ್ವಾ ಅಪಾನಾಯ ತ್ವಾ ಇತಿ ಆಹ** | [ಹೋಮಮಂತ್ರದ ಮೊದಲನೆಯ ಭಾಗವು] ಪ್ರಾಣಪ್ರೀತಿಗಾಗಿ ಅಪಾನಪ್ರೀತಿಗಾಗಿ ನಿನ್ನನ್ನು ಹೋಮಮಾಡುತ್ತೇನೆ ಎಂದು ಹೇಳುತ್ತದೆ. |
| **ಯಜಮಾನೇ ಪ್ರಾಣಾನ್ ಏವ ದಧಾತಿ** | ಇದರಿಂದ ಅಧ್ವರ್ಯುವು ಯಜಮಾನನಲ್ಲಿ ಪ್ರಾಣಾದಿವಾಯುಗಳನ್ನು ನೆಲೆಗೊಳಿಸುತ್ತಾನೆ. |

---

'ಪ್ರಾಣಾಯ ತ್ವಾ' ಎಂಬ ಈ ಮಂತ್ರಭಾಗವನ್ನು ಹೇಳುವ ಅಧ್ವರ್ಯುವು ಪ್ರಾಣಾದಿ

ತಸ್ಮೈ ತ್ವಾ ಪ್ರಜಾಪತಯೇ ವಿಭೂದಾವ್ನ್ನೇ ಜ್ಯೋತಿಷ್ಮತೇ
ಜ್ಯೋತಿಷ್ಮಂತಂ ಜುಹೋಮೀ [ಜುಹೋಮಿ(೨೭)ಇತ್ಯಾಹ]
ತ್ಯಾಹ ಪ್ರಜಾಪತಿಸ್ಸರ್ವಾ ದೇವತಾಸ್ಸರ್ವಾಭ್ಯ ಏವೈನಂ
ದೇವತಾಭ್ಯೋ ಜುಹೋತ್ಯಾ-

---

ತಸ್ಮೈ। ತ್ವಾ। ಪ್ರಜಾಪತಯ ಇತಿ ಪ್ರಜಾ-ಪತಯೇ। ವಿಭೂದಾವ್ನ್ನ ಇತಿ ವಿಭು-ದಾವ್ನ್ನೇ। ಜ್ಯೋತಿಷ್ಮತೇ। ಜ್ಯೋತಿಷ್ಮಂತಮ್। ಜುಹೋಮಿ। ಇತಿ। ಆಹ। ಪ್ರಜಾಪತಿರಿತಿ ಪ್ರಜಾ-ಪತಿಃ। ಸರ್ವಾಃ। ದೇವತಾಃ। ಸರ್ವಾಭ್ಯಃ। ಏವ। ಏನಮ್। ದೇವತಾಭ್ಯಃ। ಜುಹೋತಿ।

---

## 'ತಸ್ಮೈ ತ್ವಾ' ಎಂಬ ಭಾಗದ ವಿವರಣೆ

| | |
|---|---|
| ತಸ್ಮೈ ತ್ವಾ ಪ್ರಜಾಪತಯೇ ವಿಭೂದಾವ್ನ್ನೇ ಜ್ಯೋತಿಷ್ಮತೇ ಜ್ಯೋತಿಷ್ಮಂತಮ್ ಜುಹೋಮಿ ಇತಿ ಆಹ | ಈ ಮಂತ್ರಭಾಗವು 'ಐಶ್ವರ್ಯವನ್ನು ಕೊಡುವ ಜ್ಯೋತಿಷ್ಮಂತನಾದ ಪ್ರಜಾಪತಿಗಾಗಿ ತೇಜೋಯುಕ್ತವಾದ ದಧಿಗ್ರಹವನ್ನು ಹೋಮ ಮಾಡುತ್ತೇನೆ' ಎಂದು ಹೇಳುತ್ತದೆ. |
| ಪ್ರಜಾಪತಿಃ ಸರ್ವಾಃ ದೇವತಾಃ | ಪ್ರಜಾಪತಿಯು ಸರ್ವದೇವತಾಸ್ವರೂಪನಾಗಿದ್ದಾನೆ. |
| ಏನಮ್ ಸರ್ವಾಭ್ಯಃ ದೇವತಾಭ್ಯಃ ಏವ ಜುಹೋತಿ | [ಪ್ರಜಾಪತಿಗಾಗಿ ದಧಿಗ್ರಹಹೋಮವನ್ನು ಮಾಡುವುದು] ಸರ್ವದೇವತೆಗಳನ್ನು ಉದ್ದೇಶಿಸಿ ಹೋಮ ಮಾಡಿದಂತಾಗುತ್ತದೆ. |

ಜ್ಯಗ್ರಹಂ ಗೃಹ್ಣೀಯಾತ್ತೇಜಸ್ಕಾಮಸ್ಯ ತೇಜೋ ವಾ ಆಜ್ಯಂ

ತೇಜಸ್ವ್ಯೇವ ಭವತಿ ಸೋಮಗ್ರಹಂ ಗೃಹ್ಣೀಯಾ

ದ್ಬ್ರಹ್ಮವರ್ಚಸಕಾಮಸ್ಯ

---

ಆಜ್ಯಗ್ರಹಮಿತ್ಯಾಜ್ಯ-ಗ್ರಹಮ್ । ಗೃಹ್ಣೀಯಾತ್ । ತೇಜಸ್ಕಾಮಸ್ಯೇತಿ ತೇಜಃ-ಕಾಮಸ್ಯ । ತೇಜಃ । ವೈ । ಆಜ್ಯಮ್ । ತೇಜಸ್ವೀ । ಏವ । ಭವತಿ । ಸೋಮಗ್ರಹಮಿತಿ ಸೋಮ-ಗ್ರಹಮ್ । ಗೃಹ್ಣೀಯಾತ್ । ಬ್ರಹ್ಮವರ್ಚಸಕಾಮಸ್ಯೇತಿ ಬ್ರಹ್ಮವರ್ಚಸ-ಕಾಮಸ್ಯ ।

---

### ಕಾಮ್ಯವಾಗಿ ಆಜ್ಯಗ್ರಹದ ಗ್ರಹಣ;ಪ್ರಶಂಸೆ

| | |
|---|---|
| ತೇಜಸ್ಕಾಮಸ್ಯ ಆಜ್ಯಗ್ರಹಮ್ ಗೃಹ್ಣೀಯಾತ್ | ತೇಜಸ್ಸನ್ನು ಬಯಸುವ ಯಜಮಾನನಿಗಾಗಿ ಅಧ್ವರ್ಯುವು ಆಜ್ಯಗ್ರಹವನ್ನು ಗ್ರಹಣ ಮಾಡಬೇಕು. |
| ತೇಜಃ ವೈ ಆಜ್ಯಮ್ | ತೇಜಸ್ಸೇ ಆಜ್ಯವಷ್ಟೆ. [ಆಜ್ಯವು ತೇಜಸ್ಸಾಧನವಾಗಿದೆ] |
| ತೇಜಸ್ವೀ ಏವ ಭವತಿ | ಇಂತಹ ಯಜಮಾನನು ತೇಜಸ್ವಿಯೇ ಆಗುತ್ತಾನೆ. |

### ಬ್ರಹ್ಮವರ್ಚಸಕಾಮನಿಗೆ ಸೋಮಗ್ರಹವಿಧಾನ; ಪ್ರಶಂಸೆ

| | |
|---|---|
| ಬ್ರಹ್ಮವರ್ಚಸಕಾಮಸ್ಯ ಸೋಮಗ್ರಹಮ್ ಗೃಹ್ಣೀಯಾತ್ | ಬ್ರಹ್ಮವರ್ಚಸವನ್ನು ಬಯಸುವ ಯಜಮಾನನಿಗಾಗಿ ಸೋಮಗ್ರಹವನ್ನು ಗ್ರಹಣ ಮಾಡಬೇಕು. |

---

ವಾಯುಗಳನ್ನು ಯಜಮಾನನಲ್ಲಿ ನೆಲೆಗೊಳಿಸುತ್ತಾನೆ. ಇಲ್ಲಿ ಪ್ರಾಣ-ಅಪಾನಗಳ ಜೊತೆಗೆ ವ್ಯಾನವನ್ನೂ ಸೇರಿಸಿಕೊಳ್ಳಬೇಕು.

ಬ್ರಹ್ಮವರ್ಚಸಂ ವೈ ಸೋಮೋ ಬ್ರಹ್ಮವರ್ಚಸ್ಯೇವ ಭವತಿ

ದಧಿಗ್ರಹಂ ಗೃಹ್ಣೀಯಾತ್ಪಶುಕಾಮಸ್ಯೋರ್ಗ್ವೈ ॥

ದಧ್ಯೂರ್ಕ್ಪಶವ

---

ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ವೈ । ಸೋಮಃ । ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ । ಏವ । ಭವತಿ । ದಧಿಗ್ರಹಮಿತಿ ದಧಿ-ಗ್ರಹಮ್ । ಗೃಹ್ಣೀಯಾತ್ । ಪಶುಕಾಮಸ್ಯೇತಿ ಪಶು-ಕಾಮಸ್ಯ । ಊರ್ಕ್ । ವೈ । ದಧಿ । ಊರ್ಕ್ । ಪಶವಃ ।

---

| | |
|---|---|
| ಸೋಮಃ ಬ್ರಹ್ಮವರ್ಚಸಮ್ ವೈ | ಸೋಮವು ಬ್ರಹ್ಮವರ್ಚಸವೇ ಆಗಿದೆ. |
| ಬ್ರಹ್ಮವರ್ಚಸೀ ಏವ ಭವತಿ | ಸೋಮಗ್ರಹಗ್ರಹಣದಿಂದ ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ. |

**ಪಶುಕಾಮನಿಗಾಗಿ ದಧಿಗ್ರಹವಿಧಾನ; ಪ್ರಶಂಸೆ**

| | |
|---|---|
| ಪಶುಕಾಮಸ್ಯ ದಧಿಗ್ರಹಮ್ ಗೃಹ್ಣೀಯಾತ್ | ಪಶುಕಾಮನಾದ ಯಜಮಾನನಿಗಾಗಿ ಅಧ್ವರ್ಯುವು ದಧಿಗ್ರಹವನ್ನು ಗ್ರಹಣ ಮಾಡಬೇಕು. |
| ಊರ್ಕ್ ವೈ ದಧಿ | ಮೊಸರು ರಸರೂಪವಾಗಿದೆ. |
| ಪಶವಃ ಊರ್ಕ್ | ಪಶುಗಳೂ ರಸರೂಪವಾಗಿವೆ. |

---

ಪ್ರಜಾಪತಿಯು ಸರ್ವದೇವತಾಸ್ವರೂಪನಾಗಿದ್ದಾನೆ. ಪ್ರಜಾಪತಿದೇವತಾಕವಾದ ದಧಿಗ್ರಹಹೋಮವನ್ನು ಅನುಷ್ಠಿಸುವುದರಿಂದ ಸರ್ವದೇವತೆಗಳಿಗೂ ಹೋಮವನ್ನು ಮಾಡಿದಂತಾಗುತ್ತದೆ. ಯಾವ ದೇವತೆಯನ್ನೂ ಬಿಡದಂತೆ ಆಗುತ್ತದೆ.

ಆಜ್ಯಗ್ರಹ-ಸೋಮಗ್ರಹ-ದಧಿಗ್ರಹಗಳನ್ನು ಕಾಮ್ಯವಾಗಿ ವಿಧಾನ ಮಾಡಲಾಗಿದೆ. ತೇಜಸ್ಸಿಗಾಗಿ ಆಜ್ಯಗ್ರಹವೂ, ಬ್ರಹ್ಮವರ್ಚಸ್ಸಿಗಾಗಿ ಸೋಮಗ್ರಹವೂ, ಪಶುಗಳನ್ನು

ಊರ್ಜೈವಾಸ್ಮಾ ಊರ್ಜಂ ಪಶೂನವರುಂಧೇ ॥೨೮-೨॥

[ಉಪಯಾಮಗೃಹೀತೋ ಜುಹೋಮಿ ತ್ರಿಚತ್ವಾರಿಂಗ್‌ಂಶಚ್ಚ ॥]

---

ಊರ್ಜಾ । ಏವ । ಅಸ್ಮೈ । ಊರ್ಜಮ್ । ಪಶೂನ್ । ಅವೇತಿ । ರುಂಧೇ ॥ ೨೮ ॥

---

| | |
|---|---|
| ಅಸ್ಮೈ ಊರ್ಜಾ ಏವ ಊರ್ಜಮ್ ಪಶೂನ್ ಅವರುಂಧೇ | ರಸರೂಪವಾದ ದಧಿಯಿಂದಲೇ ರಸರೂಪವಾದ ಪಶುಗಳನ್ನು ಈ ಯಜಮಾನನಿಗೆ ಅಧ್ವರ್ಯುವು ಹೊಂದಿಸಿಕೊಡುತ್ತಾನೆ. |

---

ಪಡೆಯುವುದಕ್ಕಾಗಿ ದಧಿಗ್ರಹವೂ ವಿಹಿತವಾಗಿದೆ.

ಈ ಮೂರು ಕಾಮ್ಯಗ್ರಹಗಳಿಂದ ಮೂರು ಕಾಮನೆಗಳನ್ನು ಯಜಮಾನನು ಪಡೆಯುವನು.

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

**೧) ದಧಿಗ್ರಹವು ನಿತ್ಯವೇ? ನೈಮಿತ್ತಿಕವೇ? [ಜೈ.ಸೂ.4.4]**

ಜ್ಯೋತಿಷ್ಟೋಮಯಾಗದಲ್ಲಿ ವಿಧಾನ ಮಾಡಿರುವ ದಧಿಗ್ರಹವು ನಿತ್ಯವೇ? ನೈಮಿತ್ತಿಕವೇ?

ಜ್ಯೋತಿಷ್ಟೋಮಯಾಗದಲ್ಲಿ ಅನೇಕ ದೇವತೆಗಳಿರುವುದರಿಂದ ಅವುಗಳಲ್ಲಿ ಯಾವುದನ್ನಾದರೂ ಬಿಟ್ಟಿದ್ದರೆ ಆ ದೇವತೆಯ ಶಾಂತಿಗಾಗಿ ದಧಿಗ್ರಹವನ್ನು ಹೇಳಿರುವುದರಿಂದ ಈ ಗ್ರಹಣವು ನೈಮಿತ್ತಿಕವಾಗುತ್ತದೆ.

**'ಜ್ಯೇಷ್ಠೋ ವಾ ಏಷ ಗ್ರಹಾಣಾಮ್'** ಎಂಬುದಾಗಿ ಪ್ರಾಶಸ್ತ್ಯವನ್ನು ಹೇಳಿರುವುದರಿಂದ ನಿತ್ಯವಾದರೆ ಪ್ರಾಶಸ್ತ್ಯವಿರುವುದರಿಂದ ನಿತ್ಯವೆನಿಸುತ್ತದೆ. ನೈಮಿತ್ತಿಕವು ನಿಮಿತ್ತವಿದ್ದರೆ ಮಾತ್ರ ಅನುಷ್ಠಿಸುವುದರಿಂದ ನಿತ್ಯದಂತೆ ಪ್ರಶಸ್ತವಲ್ಲ. ಹೀಗೆ ಎರಡಕ್ಕೂ ಕಾರಣವಿರುವುದರಿಂದ ಈ ದಧಿಗ್ರಹಗ್ರಹಣವು ಉಭಯಾತ್ಮಕವಾದುದು. ಇದು ಇಲ್ಲಿನ **ಪೂರ್ವಪಕ್ಷ.**

ನೈಮಿತ್ತಿಕವಾದ ಕರ್ಮಗಳಿಗೆ ಶ್ರುತಿಯಲ್ಲಿ **'ಯದಿ'** ಮೊದಲಾದ ನಿಮಿತ್ತಸೂಚಕಗಳು ಇರುತ್ತವೆ. **'ಯದಿ ರಥಂತರಸಾಮಾ..'** ಮುಂತಾದ ಕಡೆ ಇರುವಂತೆ ಇಲ್ಲಿ ದೇವತೆಯನ್ನು ಬಿಟ್ಟಾಗ ಎಂಬಲ್ಲಿ **'ಯದಿ'** ಶಬ್ದವಿಲ್ಲದಿರುವುದರಿಂದ ಈ ದಧಿಗ್ರಹವು ನಿತ್ಯವೇ, ನೈಮಿತ್ತಿಕವಲ್ಲ. ಉಭಯಾತ್ಮಕವೂ ಅಲ್ಲ. ಇದು ಇಲ್ಲಿನ **ಸಿದ್ಧಾಂತ.**

## ॥ ದಶಮೋಽನುವಾಕಃ ॥

ತ್ವೇ ಕ್ರತುಮಪಿವೃಞ್ಜಂತಿ ವಿಶ್ವೇ ದ್ವಿರ್ಯದೇತೇ

ತ್ರಿರ್ಭವಂತ್ಯೂಮಾಃ ।

---

ತ್ವೇ ಇತಿ । ಕ್ರತುಮ್ । ಅಪೀತಿ । ವೃಞ್ಜಂತಿ । ವಿಶ್ವೇ । ದ್ವಿಃ । ಯತ್ । ಏತೇ । ತ್ರಿಃ । ಭವಂತಿ । ಊಮಾಃ ।

---

ಈ ಹತ್ತನೆಯ ಅನುವಾಕದಲ್ಲಿ ಗವಾಮಯನಸತ್ರದ ಅತಿಗ್ರಾಹ್ಯಗ್ರಹಗಳೂ, ಪ್ರಾಣಗ್ರಹಗಳೂ ಉಕ್ತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| ತ್ವೇ ಕ್ರತುಮಪಿ...ಯೋಧಿ ॥ | ಮಧ್ಯಮವಾದ ಐದನೆಯ ಅತಿಗ್ರಾಹ್ಯಗ್ರಹಣವನ್ನು ಮಾಡಲು. |

---

✦[ಅತಿಗ್ರಾಹ್ಯಗ್ರಹವೇ!] ವಿಶ್ವೇ=ಈ ಋತ್ವಿಜರೆಲ್ಲರೂ; ತ್ವೇ=ನಿನ್ನಲ್ಲಿ; ಕ್ರತುಮ್=ಯಾಗವನ್ನು; ಅಪಿವೃಞ್ಜಂತಿ=ಮುಗಿಸುತ್ತಾರೆ; ಯತ್=ಯಾವ ಕಾರಣದಿಂದ; ಏತೇ=ಈ ರಸಗಳೆಲ್ಲವೂ; ದ್ವಿಃ=ಎರಡು ಬಾರಿ; ತ್ರಿಃ=ಮೂರು ಬಾರಿ [ಹೀಗೆ ಐದು ಬಾರಿ] ಊಮಾಃ=ರಕ್ಷಕರಾಗಿ; ಭವಂತಿ=ಆಗುತ್ತವೆಯೋ [ಆದರಿಂದ ನಿನ್ನಲ್ಲಿ ಯಾಗವನ್ನು ಮುಗಿಸುವುದು ಯುಕ್ತವಾಗಿದೆ]

ಸ್ವಾದೋಸ್ಸ್ವಾದೀಯಸ್ಸ್ವಾದುನಾ ಸೃಜಾ ಸಮತ ಊ ಷು ಮಧು ಮಧುನಾಽಭಿ ಯೋಧಿ ॥ ಉಪಯಾಮಗೃಹೀತೋಽಸಿ ಪ್ರಜಾಪತಯೇ ತ್ವಾ ಜುಷ್ಟಂ ಗೃಹ್ಣಾಮ್ಯೇಷ ತೇ ಯೋನಿಃ ಪ್ರಜಾಪತಯೇ ತ್ವಾ ।

---

ಸ್ವಾದೋಃ । ಸ್ವಾದೀಯಃ । ಸ್ವಾದುನಾ । ಸೃಜ । ಸಮಿತಿ । ಅತಃ । ಉ । ಸ್ವಿತಿ । ಮಧು । ಮಧುನಾ । ಅಭೀತಿ । ಯೋಧಿ ॥ ಉಪಯಾಮಗೃಹೀತ ಇತ್ಯುಪಯಾಮ–ಗೃಹೀತಃ । ಅಸಿ । ಪ್ರಜಾಪತಯ ಇತಿ ಪ್ರಜಾ–ಪತಯೇ । ತ್ವಾ । ಜುಷ್ಟಮ್ । ಗೃಹ್ಣಾಮಿ । ಏಷಃ । ತೇ । ಯೋನಿಃ । ಪ್ರಜಾಪತಯ ಇತಿ ಪ್ರಜಾ–ಪತಯೇ । ತ್ವಾ ॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮ...ತ್ವಾ ॥ | ಅತಿಗ್ರಾಹ್ಯವನ್ನು ಸಾದನ ಮಾಡಲು |

---

ಸ್ವಾದೋಃ=ಮಧುರವಾದ ರಸಕ್ಕಿಂತಲೂ; ಸ್ವಾದೀಯಃ=ಅತಿಶಯವಾಗಿ ಮಧುರವಾಗಿರುವಂತೆ ನೀನು; ಸ್ವಾದುನಾ=ಮಧುರವಾದ ರಸದ ಭಾಗದಿಂದ; ಸಮ್ ಸೃಜ=ಸೇರಿಸು; ಅತಃ ಉ ಸು=ಇದಕ್ಕಿಂತಲೂ ಅಧಿಕವಾಗಿ ಮಧುರವಾಗುವಂತೆ; ಮಧು=ಮಧುರಭಾಗವನ್ನು; ಮಧುನಾ=ಬೇರೆಯ ಮಧುರಭಾಗದೊಡನೆ; ಅಭಿಯೋಧಿ=ಸುತ್ತಲೂ ಮಿಶ್ರಣವಾಗುವಂತೆ ಮಾಡು. +ಉಪಯಾಮಗೃಹೀತಃ ಅಸಿ=[ಎಲೈ! ಅತಿಗ್ರಾಹ್ಯವೇ!] ನೀನು ಮೃನ್ಮಯಪಾತ್ರದಿಂದ ಗ್ರಹಿಸಲ್ಪಟ್ಟಿರುವೆ; ಪ್ರಜಾಪತಯೇ=ಪ್ರಜಾಪತಿದೇವನಿಗಾಗಿ; ತ್ವಾ=ನಿನ್ನನ್ನು; ಜುಷ್ಟಮ್=ಪ್ರಿಯನನ್ನಾಗಿ; ಗೃಹ್ಣಾಮಿ=[ಈ ಮಧ್ಯಮಪಾತ್ರದಲ್ಲಿ ಬೇರೆಯ ಪಾತ್ರಗಳಿಂದಲೂ ರಸವನ್ನು]ಗ್ರಹಿಸುತ್ತೇನೆ; ಏಷಃ ತೇ ಯೋನಿಃ=ಈ ಖರಪ್ರದೇಶವು ನಿನ್ನ ಸ್ಥಾನವಾಗಿದೆ; ಪ್ರಜಾಪತಯೇ ತ್ವಾ=ಪ್ರಜಾಪತಿಗಾಗಿ ನಿನ್ನನ್ನು; ಸಾದಯಾಮಿ=[ಈ ಪ್ರದೇಶದಲ್ಲಿ ಸಾದನ ಮಾಡುತ್ತೇನೆ/ಇಡುತ್ತೇನೆ]

ಪ್ರಾಣಗ್ರಹಾನ್ಗೃಹ್ಣಾತ್ಯೇತಾವದ್ವಾ ಅಸ್ತಿ ಯಾವದೇತೇ ಗ್ರಹಾಸ್ತ್ಸ್ತೋಮಾಶ್ಛಂದಾಗ್ಂಸಿ ಪೃಷ್ಠಾನಿ ದಿಶೋ

---

ಪ್ರಾಣಗ್ರಹಾನಿತಿ ಪ್ರಾಣ-ಗ್ರಹಾನ್ । ಗೃಹ್ಣಾತಿ । ಏತಾವತ್ । ವೈ । ಅಸ್ತಿ । ಯಾವತ್ । ಏತೇ । ಗ್ರಹಾಃ । ಸ್ತೋಮಾಃ । ಛಂದಾಗ್ಂಸಿ । ಪೃಷ್ಠಾನಿ । ದಿಶಃ ।

---

### ಸೋಮೋನ್ಮಾನಗ್ರಹಗ್ರಹಣಮಂತ್ರಗಳ ವಿಧಿ; ಬ್ರಾಹ್ಮಣ

| ಬ್ರಾಹ್ಮಣಭಾಗ | ವಿವರಣೆ |
|---|---|
| ಪ್ರಾಣಗ್ರಹಾನ್ ಗೃಹ್ಣಾತಿ | ['ಅಯಂ ಪುರಃ' ಎಂಬ ಮಂತ್ರದಿಂದ] ಪ್ರಾಣಗ್ರಹಗಳನ್ನು ಗ್ರಹಣ ಮಾಡಬೇಕು. |
| ಯಾವತ್ ಏತೇ ಗ್ರಹಾಃ | ಈ ಪ್ರಾಣಗ್ರಹಗಳು ಎಷ್ಟು ಇವೆಯೋ |
| ಏತಾವತ್ ವೈ ಅಸ್ತಿ | ಇಷ್ಟೇ ಇಲ್ಲಿ ಅಪೇಕ್ಷಿತವಾದ ವಿಷಯಗಳಾಗಿವೆ. |
| ಸ್ತೋಮಾಃ ಛಂದಾಗ್ಂಸಿ ಪೃಷ್ಠಾನಿ ದಿಶಃ | ತ್ರಿವೃದಾದಿಸ್ತೋಮಗಳೂ, ಗಾಯತ್ರ್ಯಾದಿಛಂದಸ್ಸುಗಳೂ, ಮಾಧ್ಯಂದಿನಪವಮಾನಾನಂತರದ ಸ್ತೋತ್ರಗಳೂ, ಪ್ರಾಣಾದಿ ದಿಕ್ಕುಗಳೂ |

---

ಗವಾಮಯನಸತ್ರಯಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಅತಿಗ್ರಾಹ್ಯಪಾತ್ರಗಳು ಇರುತ್ತವೆ. ಮಧ್ಯದಲ್ಲಿ ಐದನೆಯ ಅತಿಗ್ರಾಹ್ಯಪಾತ್ರವಿರುತ್ತದೆ. ಈ ಮಂತ್ರದಿಂದ ಬೇರೆಯ ಅತಿಗ್ರಾಹ್ಯದಿಂದ ಮಧ್ಯಮಾತಿಗ್ರಾಹ್ಯಪಾತ್ರದಲ್ಲಿ ಸೋಮರಸವನ್ನು ಗ್ರಹಣ ಮಾಡಬೇಕು. ಅದನ್ನು ಖರಪ್ರದೇಶದಲ್ಲಿ ಸಾದನ ಮಾಡಬೇಕು.

ಹೇ! ಅತಿಗ್ರಾಹ್ಯರಸವೇ! ನೀನು ಮಧುರವಾಗಿರುವೆ. ಋತ್ವಿಜರು ನಿನ್ನಲ್ಲಿ ಯಾಗವನ್ನು ಮುಗಿಸುವುದು ಯುಕ್ತವಾಗಿದೆ. ಮಧುರನಾದ ನೀನು ಬೇರೆಯ ಪಾತ್ರೆಗಳಿಂದ ಮಧುರರಸವನ್ನು ಪಡೆಯುವುದರಿಂದ ಹೆಚ್ಚು ಮಧುರವಾಗಿರುವೆ. ನಿನ್ನನ್ನು ಪ್ರಜಾಪತಿದೇವನಿಗಾಗಿ ಈ ಮೃನ್ಮಯಪಾತ್ರದಲ್ಲಿ ಗ್ರಹಣ ಮಾಡಿ, ಪ್ರಜಾಪತಿಗೆ ಪ್ರಿಯನಾದ ನಿನ್ನನ್ನು ಈ ಖರಪ್ರದೇಶದಲ್ಲಿ ಇಡುತ್ತೇನೆ.

ಯಾವದೇವಾಸ್ತಿ ತ[ತತ್(೨೯)ಅವರುಂಧೇ]ದವರುಂಧೇ

ಜ್ಯೇಷ್ಠಾ ವಾ ಏತಾನ್ಬ್ರಾಹ್ಮಣಾಃ ಪುರಾ ವಿದಾಮಕ್ರನ್ತಸ್ಮಾ

ತ್ತೇಷಾಗ್‌ಂ ಸರ್ವಾ ದಿಶೋಽಭಿಜಿತಾ ಅಭೂವನ್

---

ಯಾವತ್ । ಏವ । ಅಸ್ತಿ । ತತ್ ।(೨೯)। ಅವೇತಿ । ರುಂಧೇ । ಜ್ಯೇಷ್ಠಾಃ । ವೈ ।

ಏತಾನ್ । ಬ್ರಾಹ್ಮಣಾಃ । ಪುರಾ । ವಿದಾಮ್ । ಅಕ್ರನ್ನ್ । ತಸ್ಮಾತ್ । ತೇಷಾಮ್ ।

ಸರ್ವಾಃ । ದಿಶಃ । ಅಭಿಜಿತಾ ಇತ್ಯಭಿ–ಜಿತಾಃ । ಅಭೂವನ್ನ್ ।

---

| | |
|---|---|
| ಯಾವತ್ ಏವ ಅಸ್ತಿ ತತ್ ಅವರುಂಧೇ | ಸ್ತೋಮಾದಿ ಯಾವ ಅಪೇಕ್ಷಿತವಾದ ವಿಷಯಗಳು ಇವೆಯೋ ಇವೆಲ್ಲವನ್ನೂ ಪ್ರಾಣಗ್ರಹಗಳಿಂದ ಯಜಮಾನನು ಪಡೆಯುತ್ತಾನೆ. |

ಪ್ರಕಾರಾಂತರದಿಂದ ಪ್ರಾಣಗ್ರಹಗಳ ಪ್ರಶಂಸೆ

| | |
|---|---|
| ಪುರಾ ಜ್ಯೇಷ್ಠಾಃ ವೈ ಬ್ರಾಹ್ಮಣಾಃ ಏತಾನ್ ವಿದಾಮಕ್ರನ್ ತಸ್ಮಾತ್ ತೇಷಾಮ್ ಸರ್ವಾಃ ದಿಶಃ ಅಭಿಜಿತಾಃ ಅಭೂವನ್ | ಹಿಂದೆ ಶ್ರೇಷ್ಠರಾದ ಬ್ರಾಹ್ಮಣರು ಈ ಪ್ರಾಣಗ್ರಹಗಳನ್ನು ಜ್ಞಾನದೃಷ್ಟಿ ಯಿಂದ ತಿಳಿದುಕೊಂಡರು. ಆ ಪ್ರಾಣಗ್ರಹಾನುಷ್ಠಾನದಿಂದ ಅವರಿಗೆ ಎಲ್ಲ ದಿಕ್ಕುಗಳೂ/ದಿಕ್ಕುಗಳಲ್ಲಿ ಇರುವವರೆಲ್ಲರೂ ವಶವರ್ತಿಗಳಾದರು. |

---

ಸೋಮಲತೆಯ ಭಾಗಗಳನ್ನು ಸೋಮವೃದ್ಧಿಗಾಗಿ ಹಾಕುವುದೇ ಪೃಶ್ನಿಗ್ರಹಗಳೆಂಬ ಹೆಸರನ್ನು ಪಡೆದಂತೆ 'ಅಯಂ ಪುರಃ' ಎಂಬ ಮಂತ್ರಗಳಿಂದ ಮಾಡುವ ಸೋಮೋನ್ನಾನವು ಪ್ರಾಣಗ್ರಹಗಳೆಂಬ ಹೆಸರನ್ನು ಪಡೆದಿದೆ. 'ಅಯಂ ಪುರಃ' ಎಂದು ಆರಂಭವಾಗುವ ಮಂತ್ರಗಳಿಂದ ಈ ಪ್ರಾಣಗ್ರಹಗಳನ್ನು ಗ್ರಹಣ ಮಾಡಬೇಕು [ವಿಧಿ].

ಯಸ್ಯೈತೇ ಗೃಹ್ಯಂತೇ ಜ್ಯೈಷ್ಠ್ಯಮೇವ ಗಚ್ಛತ್ಯಭಿ ದಿಶೋ ಜಯತಿ ಪಞ್ಚ ಗೃಹ್ಯಂತೇ ಪಞ್ಚ ದಿಶಸ್ಸರ್ವಾಸ್ವೇವ ದಿಕ್ಷ್ವೃಧ್ನುವಂತಿ

---

ಯಸ್ಯ । ಏತೇ । ಗೃಹ್ಯಂತೇ । ಜ್ಯೈಷ್ಠ್ಯಮ್ । ಏವ । ಗಚ್ಛತಿ । ಅಭೀತಿ । ದಿಶಃ । ಜಯತಿ । ಪಂಚ । ಗೃಹ್ಯಂತೇ । ಪಂಚ । ದಿಶಃ । ಸರ್ವಾಸು । ಏವ । ದಿಕ್ಷು । ಋಧ್ನುವಂತಿ ।

---

| | |
|---|---|
| ಯಸ್ಯ ಏತೇ ಗೃಹ್ಯಂತೇ | ಯಾವ ಯಜಮಾನನ ಯಜ್ಞದಲ್ಲಿ ಈ ಪ್ರಾಣಗಳು ಗ್ರಹಿಸಲ್ಪಡುತ್ತವೆಯೋ |
| ಜ್ಯೈಷ್ಠ್ಯಮ್ ಏವ ಗಚ್ಛತಿ | ಆ ಯಜಮಾನನು ಶ್ರೇಷ್ಠತೆಯನ್ನೇ ಪಡೆಯುವನು. |
| ಅಭಿ ದಿಶಃ ಜಯತಿ | ಎಲ್ಲ ದಿಕ್ಕುಗಳಲ್ಲಿರುವವರನ್ನೂ ವಶಪಡಿಸಿ ಕೊಳ್ಳುತ್ತಾನೆ. |

**ಸಂಖ್ಯಾವಿಧಿ; ಪ್ರಶಂಸೆ**

| | |
|---|---|
| ಪಂಚ ಗೃಹ್ಯಂತೇ | ಪ್ರಾಣಗ್ರಹಗಳು ಐದು ಪರ್ಯಾಯಗಳಾಗಿ ಗೃಹೀತವಾಗುತ್ತವೆ. |
| ದಿಶಃ ಪಂಚ | ಪೂರ್ವಾದಿಗಳು ನಾಲ್ಕು, ಊರ್ಧ್ವ ಒಂದು ಹೀಗೆ ದಿಕ್ಕುಗಳು ಐದಾಗಿವೆ. |
| ಸರ್ವಾಸು ದಿಕ್ಷು ಋಧ್ನುವಂತಿ ಏವ | ಈ ಸಂಖ್ಯೆಯ ಗ್ರಹಣಗಳಿಂದ ಯಜಮಾನರು ಎಲ್ಲ ದಿಕ್ಕುಗಳಲ್ಲಿಯೂ ಅಭಿವೃದ್ಧಿ ಹೊಂದುತ್ತಾರೆ. |

---

ಈ ಸೋಮೋನ್ಮಾನರೂಪವಾದ ಪ್ರಾಣಗ್ರಹಗಳಿಂದ ಸ್ತೋಮ, ಛಂದಸ್ಸು, ಪೃಷ್ಠಸ್ತೋತ್ರಗಳು, ಪೂರ್ವಾದಿದಿಕ್ಕುಗಳು-ಮೊದಲಾದ ಯಾಗೋಪಯುಕ್ತವಿಷಯಗಳೆಲ್ಲವನ್ನೂ ಯಜಮಾನನು ಪಡೆಯುತ್ತಾನೆ.

ನವನವ ಗೃಹ್ಯಂತೇ ನವ ವೈ ಪುರುಷೇ ಪ್ರಾಣಾಃ

ಪ್ರಾಣಾನೇವ ಯಜಮಾನೇಷು ದಧತಿ ಪ್ರಾಯಣೀಯೇ

ಚೋದಯನೀಯೇ ಚ ಗೃಹ್ಯಂತೇ

---

ನವನವೇತಿ ನವ-ನವ । ಗೃಹ್ಯಂತೇ । ನವ । ವೈ । ಪುರುಷೇ । ಪ್ರಾಣಾ ಇತಿ ಪ್ರ-ಅನಾಃ । ಪ್ರಾಣಾನಿತಿ ಪ್ರ-ಅನಾನ್ । ಏವ । ಯಜಮಾನೇಷು । ದಧತಿ । ಪ್ರಾಯಣೀಯ ಇತಿ ಪ್ರ-ಅಯನೀಯೇ । ಚ । ಉದಯನೀಯ ಇತ್ಯುತ್-ಅಯನೀಯೇ । ಚ । ಗೃಹ್ಯಂತೇ ।

---

**ಸೋಮಾಂಶುಗಳ ಸಂಖ್ಯಾವಿಧಿ; ಪ್ರಶಂಸೆ**

| | |
|---|---|
| ನವನವ ಗೃಹ್ಯಂತೇ | ಒಂದೊಂದು ಪ್ರಾಣಗ್ರಹದ ಪರ್ಯಾಯದಲ್ಲಿ ಒಂಬತ್ತೊಂಬತ್ತು ಸೋಮಾಂಶುಗಳನ್ನು ಗ್ರಹಣ ಮಾಡಬೇಕು. [ವಿಧಿ] |
| ಪುರುಷೇ ಪ್ರಾಣಾಃ ನವ ವೈ | ಮಾನವನಲ್ಲಿ ಒಂಬತ್ತು ಪ್ರಾಣಗಳಿವೆ. |
| ಯಜಮಾನೇಷು ಪ್ರಾಣಾನ್ ಏವ ದಧತಿ | [ಈ ರೀತಿಯ ಗ್ರಹಣದಿಂದ] ಯಜಮಾನರಲ್ಲಿ ಪ್ರಾಣಗಳನ್ನು ನೆಲೆಗೊಳಿಸುತ್ತಾರೆ. |

**ಕಾಲವಿಧಿ; ಆದರ ಪ್ರಶಂಸೆ**

| | |
|---|---|
| ಪ್ರಾಯಣೀಯೇ ಚ ಉದಯನೀಯೇ ಚ ಗೃಹ್ಯಂತೇ | ಸಂವತ್ಸರಸತ್ರದ ಮೊದಲನೆಯ ದಿನವಾದ ಪ್ರಾಯಣೀಯದಲ್ಲಿಯೂ ಕೊನೆಯ ದಿನವಾದ ಉದಯನೀಯದಲ್ಲಿಯೂ ಪ್ರಾಣಗ್ರಹಗಳು ಗ್ರಹಿಸಲ್ಪಡಬೇಕು. [ವಿಧಿ] |

ಪ್ರಾಣಾ ವೈ ಪ್ರಾಣಗ್ರಹಾಃ [(೩೦)] ಪ್ರಾಣ್ಯೈರೇವ ಪ್ರಯಂತಿ

ಪ್ರಾಣ್ಯೈರುದ್ಯಂತಿ

---

ಪ್ರಾಣಾ ಇತಿ ಪ್ರ-ಅನಾಃ । ವೈ । ಪ್ರಾಣಗ್ರಹಾ ಇತಿ ಪ್ರಾಣ-ಗ್ರಹಾಃ ।(೩೦)। ಪ್ರಾಣ್ಯೈರಿತಿ ಪ್ರ-ಅನ್ಯೈಃ । ಏವ । ಪ್ರಯಂತೀತಿ ಪ್ರ-ಯಂತಿ । ಪ್ರಾಣ್ಯೈರಿತಿ ಪ್ರ-ಅನ್ಯೈಃ । ಉದಿತಿ । ಯಂತಿ ।

---

| | |
|---|---|
| ಪ್ರಾಣಗ್ರಹಾಃ ಪ್ರಾಣಾಃ ವೈ | ಪ್ರಾಣಗ್ರಹಗಳು ಪ್ರಾಣಸ್ವರೂಪವಾಗಿವೆ. |
| ಪ್ರಾಣ್ಯೈಃ ಏವ ಪ್ರಯಂತಿ | [ಇದರಿಂದ] ಪ್ರಾಣಗಳಿಂದಲೇ ಸತ್ರವನ್ನು ಆರಂಭಿಸಿದಂತಾಗುತ್ತದೆ. |
| ಪ್ರಾಣ್ಯೈಃ ಉದ್ಯಂತಿ | ಪ್ರಾಣಗಳಿಂದಲೇ ಸತ್ರವನ್ನು ಮುಗಿಸಿದಂತಾಗುತ್ತದೆ. |

---

ಹಿಂದೆ ಶ್ರೇಷ್ಠರಾದ ಬ್ರಾಹ್ಮಣರು ಈ ಪ್ರಾಣಗ್ರಹಗಳನ್ನು ಜ್ಞಾನದೃಷ್ಟಿಯಿಂದ ತಿಳಿದುಕೊಂಡು ಅನುಷ್ಠಿಸಿ ಎಲ್ಲ ದಿಕ್ಕುಗಳಲ್ಲಿರುವವರನ್ನೂ ವಶಪಡಿಸಿಕೊಂಡಂತೆ ಯಾವ ಯಜಮಾನನು ಇದನ್ನು ಅನುಷ್ಠಿಸುವನೋ ಅವನಿಗೂ ಆ ಫಲವೇ ಲಭಿಸುತ್ತದೆ. ಇದು ಪ್ರಾಣಗ್ರಹಗಳ ಪ್ರಶಂಸೆಯ ಉಪಾಖ್ಯಾನ.

'ಅಯಂ ಪುರಃ' 'ಅಯಂ ದಕ್ಷಿಣಾ' ಅಯಂ ಪಶ್ಚಾತ್' 'ಇದಮುತ್ತರಾತ್' 'ಇಯಮುಪರಿ' ಎಂದು ಪ್ರಾಣಗ್ರಹಗಳು ಐದು ಪರ್ಯಾಯದಲ್ಲಿ ಗ್ರಹಿಸಲ್ಪಡುತ್ತವೆ. ಈ ಸಂಖ್ಯೆಯ ಗ್ರಹಣದಿಂದ ಯಜಮಾನರು ಎಲ್ಲ ದಿಕ್ಕುಗಳಲ್ಲಿಯೂ ಅಭಿವೃದ್ಧಿಯನ್ನು ಹೊಂದುತ್ತಾರೆ. ಗವಾಮಯನವು ಸತ್ರಯಾಗವಾದುದರಿಂದ ಸತ್ರಯಾಗದಲ್ಲಿ ಯಜಮಾನರೇ ಋತ್ವಿಜರು. ಆದುದರಿಂದ ಇಲ್ಲಿ 'ಯಜಮಾನೇಷು' ಎಂದು ಬಹುವಚನವಿದೆ. ಮುಂದಿನ ಬ್ರಾಹ್ಮಣದಲ್ಲಿಯೂ ಹೀಗೆಯೇ ಇದೆ.

ದಶಮೇಽಹನ್ಗೃಹ್ಯಂತೇ ಪ್ರಾಣಾ ವೈ ಪ್ರಾಣಗ್ರಹಾಃ

ಪ್ರಾಣೇಭ್ಯಃ ಖಲು ವಾ ಏತತ್ಪ್ರಜಾ ಯಂತಿ

ಯದ್ವಾಮದೇವ್ಯಂ ಯೋನೇಶ್ಚ್ಯವತೇ

---

ದಶಮೇ । ಅಹನ್ । ಗೃಹ್ಯಂತೇ । ಪ್ರಾಣಾ ಇತಿ ಪ್ರ-ಅನಾಃ । ವೈ । ಪ್ರಾಣಗ್ರಹಾ ಇತಿ ಪ್ರಾಣ-ಗ್ರಹಾಃ । ಪ್ರಾಣೇಭ್ಯ ಇತಿ ಪ್ರ-ಅನೇಭ್ಯಃ । ಖಲು । ವೈ । ಏತತ್ । ಪ್ರಜಾ ಇತಿ ಪ್ರ-ಜಾಃ । ಯಂತಿ । ಯತ್ । ವಾಮದೇವ್ಯಮಿತಿ ವಾಮ-ದೇವ್ಯಮ್ । ಯೋನೇಃ । ಚ್ಯವತೇ ।

---

ಪ್ರಾಣಗ್ರಹಗಳಿಗೆ ಕಾಲಾಂತರವಿಧಿ; ಪ್ರಶಂಸೆ

| | |
|---|---|
| **ದಶಮೇ ಅಹನ್** <br> **ಗೃಹ್ಯಂತೇ** | ಸಂವತ್ಸರಸತ್ರದ ಹತ್ತನೆಯ ದಿನದಲ್ಲಿ ಪ್ರಾಣ ಗ್ರಹಗಳ ಗ್ರಹಣವಾಗಬೇಕು.[ಕಾಲಾಂತರವಿಧಿ] |
| **ಪ್ರಾಣಗ್ರಹಾಃ ಪ್ರಾಣಾಃ ವೈ** | ಪ್ರಾಣಗ್ರಹಗಳು ಪ್ರಾಣಸ್ವರೂಪವೇ ಆಗಿವೆ. |
| **ವಾಮದೇವ್ಯಮ್ ಯೋನೇಃ** <br> **ಚ್ಯವತೇ [ಇತಿ] ಯತ್** <br> **ಏತತ್** | [ಹತ್ತನೆಯ ದಿನದಲ್ಲಿ] ವಾಮದೇವ್ಯಸಾಮವು ಪ್ರಕೃತಿ ಋಕ್ಕಿನಿಂದ ಚ್ಯುತವಾಗುತ್ತದೆ ಯೆಂಬುದು ಯಾವುದುಂಟೋ |
| **ಪ್ರಜಾಃ ಪ್ರಾಣೇಭ್ಯಃ ಖಲು** <br> **ವೈ ಯಂತಿ** | [ಈ ಅಪರಾಧದಿಂದ] ಪ್ರಜೆಗಳು ಪ್ರಾಣಗಳಿಂದ ದೂರವಾಗುತ್ತಾರೆ. |

---

ಒಂದೊಂದು ಪ್ರಾಣಗ್ರಹದ ಪರ್ಯಾಯದಲ್ಲಿ ಒಂಬತ್ತು ಒಂಬತ್ತು ಸೋಮಾಂಶುಗಳನ್ನು ಗ್ರಹಣ ಮಾಡಬೇಕು. ಮಾನವನಲ್ಲಿ ಮುಖದಲ್ಲಿ ಏಳು, ಕೆಳಭಾಗದಲ್ಲಿ ಎರಡು-ಹೀಗೆ ಒಂಬತ್ತು ರಂಧ್ರಗಳಲ್ಲಿ ಸಂಚರಿಸುವ ಪ್ರಾಣ ವಾಯುಗಳು ಒಂಬತ್ತಾಗಿವೆ. ಈ ರೀತಿಯ ಸಂಖ್ಯೆಯಿಂದ ಗ್ರಹಣ ಮಾಡುವುದರಿಂದ ಯಜಮಾನರಲ್ಲಿ ಪ್ರಾಣಗಳನ್ನು ನೆಲೆಗೊಳಿಸಿದಂತಾಗುತ್ತದೆ.

ದಶಮೇಽಹನ್ವಾಮದೇವ್ಯಂ ಯೋನೇಶ್ಚ್ಯವತೇ

ಯದ್ದಶಮೇಽಹನ್ಗೃಹ್ಯಂತೇ ಪ್ರಾಣೇಭ್ಯ ಏವ

ತತ್ಪ್ರಜಾ ನ ಯಂತಿ ॥ ೩೧-10 ॥

[ತತ್ಪ್ರಾಣಗ್ರಹಾಸ್ಸಪ್ತತ್ರಿಗ್ಂಶಚ್ಚ ॥]

---

ದಶಮೇ । ಅಹನ್ನ್ । ವಾಮದೇವ್ಯಮಿತಿ ವಾಮ-ದೇವ್ಯಮ್ । ಯೋನೇಃ । ಚ್ಯವತೇ ।

ಯತ್ । ದಶಮೇ । ಅಹನ್ನ್ । ಗೃಹ್ಯಂತೇ । ಪ್ರಾಣೇಭ್ಯ ಇತಿ ಪ್ರ-ಅನೇಭ್ಯಃ । ಏವ ।

ತತ್ । ಪ್ರಜಾ ಇತಿ ಪ್ರ-ಜಾಃ । ನ । ಯಂತಿ ॥ ೩೧ ॥

---

| | |
|---|---|
| **ದಶಮೇ ಅಹನ್** | ಹತ್ತನೆಯ ದಿನದಲ್ಲಿ ವಾಮದೇವ್ಯಸಾಮವು |
| **ವಾಮದೇವ್ಯಮ್ ಯೋನೇಃ** | ಪ್ರಕೃತಿಯಾದ 'ಕಯಾ ನಶ್ಚಿತ್ರ' ಎಂಬ ಋಕ್ಕಿನಿಂದ |
| **ಚ್ಯವತೇ** | ಚ್ಯುತವಾಗುತ್ತದೆ. |
| **ಯತ್ ದಶಮೇ ಅಹನ್** | ಪ್ರಾಣಸ್ವರೂಪವಾದ ಪ್ರಾಣಗ್ರಹಗಳನ್ನು ಹತ್ತನೆಯ |
| **ಗೃಹ್ಯಂತೇ** | ದಿನ ಗ್ರಹಣ ಮಾಡುವುದೆಂಬುದು ಯಾವುದೋ |
| **ತತ್ ಏತತ್ ಪ್ರಾಣೇಭ್ಯಃ** | ಅದರಿಂದ ಪ್ರಜೆಗಳು ಪ್ರಾಣಗಳಿಂದ ದೂರ |
| **ಪ್ರಜಾಃ ನ ಯಂತಿ ಏವ** | ವಾಗುವುದೇ ಇಲ್ಲ. |

---

ಇದು ಸಂಖ್ಯಾಪ್ರಶಂಸೆಯಾಗಿದೆ. ಸತ್ರಯಾಗವಾದುದರಿಂದ 'ಯಜಮಾನೇಷು' ಎಂಬುದಾಗಿ ಬಹುವಚನವಿದೆ.

ಸಂವತ್ಸರಸತ್ರವು ದ್ವಾದಶಾಹಪ್ರಕೃತಿಕವಾದದ್ದಾಗಿದೆ. ಆ ಸತ್ರಯಾಗದ ಮೊದಲನೆಯ ದಿನವು ಪ್ರಾಯಣೀಯವೆನಿಸುತ್ತದೆ. ಕೊನೆಯ ದಿನವು ಉದಯನೀಯವೆನಿಸುತ್ತದೆ. ಪ್ರಥಮ ಹಾಗೂ ಅಂತಿಮದಿನಗಳಲ್ಲಿ ಪ್ರಾಣಗ್ರಹಗಳನ್ನು ಗ್ರಹಿಸಬೇಕು. ಹೀಗಾಗಿ

ಯಜಮಾನರು ಪ್ರಾಣಗಳಿಂದಲೇ ಸತ್ರವನ್ನು ಆರಂಭಿಸಿ ಪ್ರಾಣಗಳಿಂದಲೇ ಮುಗಿಸಿದಂತಾಗುತ್ತದೆ.

ಈ ಸತ್ರವು ದ್ವಾದಶಾಹಪ್ರಕೃತಿಕವಾದುದರಿಂದ ಈ ದ್ವಾದಶಾಹದ ಹತ್ತನೆಯ ದಿನ ಹೇಳುವ ವಾಮದೇವ್ಯಸಾಮಕ್ಕೆ ಪ್ರಕೃತಿ ಋಕ್ ಆಗಿರುವ **'ಕಯಾ ನಶ್ಚಿತ್ರ'** ಎಂಬುದನ್ನು ಬಿಟ್ಟು ಬೇರೆಯ ಋಕ್ಕಿನಲ್ಲಿ ಆ ವಾಮದೇವ್ಯಸಾಮದ ಗಾನವಿದೆ.

ಈ ರೀತಿ ಪ್ರಕೃತಿ ಋಕ್ ಅನ್ನು ಬಿಟ್ಟು ಬೇರೆಯ ಋಕ್ಕಿನಲ್ಲಿ ಗಾನ ಮಾಡುವುದರಿಂದ ವಾಮದೇವ್ಯಸಾಮವು ತನ್ನ ಪ್ರಕೃತಿ ಋಕ್ಕಿನಿಂದ ಚ್ಯುತವಾದಂತಾಯಿತು. ಈ ಅಪರಾಧದಿಂದ ಪ್ರಜೆಗಳು ಪ್ರಾಣಗಳಿಂದ ದೂರವಾಗುತ್ತಾರೆ. ಈ ರೀತಿಯ ದೋಷದ ಪರಿಹಾರಕ್ಕಾಗಿ ಹತ್ತನೆಯ ದಿನ ಪ್ರಾಣಗ್ರಹಗಳನ್ನು ಗ್ರಹಣ ಮಾಡುವುದರಿಂದ ಪ್ರಜೆಗಳು ಪ್ರಾಣಗಳಿಂದ ದೂರವಾಗುವುದಿಲ್ಲ. ದೋಷಪರಿಹಾರವಾಗುತ್ತದೆ.

## ವಿನಿಯೋಗಸಂಗ್ರಹ

1-2 ತ್ವೇ ಗವಾಮಯನೇ ಪಾತ್ರೇಽತಿಗ್ರಾಹ್ಯಗ್ರಹಣಂ ಭವೇತ್ ।
*ಅಯಂ ಪುರೋ ಭುವಃ ಪ್ರಾಣಗ್ರಹಾಣಾಂ ಪಂಚ ಮಂತ್ರಕಾಃ ॥
ಸೋಮಾಂಶವೋ ನವ ನವ ಗ್ರಾಹ್ಯಾಃ ಪರ್ಯಾಯಪಂಚಕೇ ।
ಕಯಾ ನಶ್ಚಿತ್ರ ಏತಸ್ಯಾ ಯೋನೇರ್ಭ್ರಷ್ಟಂತು ಸಾಮ ತತ್ ॥
*ಅಗ್ನಿಂ ನರ ಇತಿ ಹ್ಯತ್ರ ಗೀಯತೇ ದಶಮೇಽಹನಿ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–2

* ಚತುರ್ಥಕಾಂಡದಲ್ಲಿ ಪಠಿತವಾಗಿರುವ ಮಂತ್ರಗಳಿಗೆ ಸಂಬಂಧಿಸಿದ ಬ್ರಾಹ್ಮಣವು ಇಲ್ಲಿರುವುದರಿಂದ ಸಂಗ್ರಹಕಾರರು ಮಂತ್ರವನ್ನು ಉಲ್ಲೇಖಿಸಿದ್ದಾರೆ.
* ದ್ವಾದಶಾಹದಲ್ಲಿ ಹತ್ತನೆಯ ದಿನ ವಾಮದೇವ್ಯಸಾಮದ ಪ್ರಕೃತಿಯಾದ ಬದಲಾಗಿರುವ ಋಕ್ ಅನ್ನು ಇಲ್ಲಿ ತಿಳಿಸಿದ್ದಾರೆ.

## ॥ ಏಕಾದಶೋಽನುವಾಕಃ ॥

ಪ್ರ ದೇವಂ ದೇವ್ಯಾ ಧಿಯಾ ಭರತಾ ಜಾತವೇದಸಮ್ ।

ಹವ್ಯಾ ನೋ ವಕ್ಷದಾನುಷಕ್ ॥

---

ಪ್ರೇತಿ । ದೇವಮ್ । ದೇವ್ಯಾ । ಧಿಯಾ । ಭರತ । ಜಾತವೇದಸಮಿತಿ ಜಾತ–ವೇದಸಮ್ ॥ ಹವ್ಯಾ । ನಃ । ವಕ್ಷತ್ । ಆನುಷಕ್ ॥

---

ಈ ಹನ್ನೊಂದನೆಯ ಅನುವಾಕದಲ್ಲಿ ಪಾಶುಕಹೌತ್ರಕ್ಕೆ ಉಪಯುಕ್ತವಾಗುವ ಮಂತ್ರಗಳು ಹೇಳಲ್ಪಟ್ಟಿವೆ. ಬ್ರಾಹ್ಮಣಗ್ರಂಥದ ಮೂರನೆಯ ಅಷ್ಟಕದಲ್ಲಿ ಪಾಶುಕಹೌತ್ರಮಂತ್ರಗಳು ಉಕ್ತವಾಗಿವೆ. ಅವಶಿಷ್ಟಮಂತ್ರಗಳು ಇಲ್ಲಿ ಉಕ್ತವಾಗಿವೆ. ಮೊದಲಿನ ಎಂಟು ಮಂತ್ರಗಳು ಉತ್ತರವೇದಿಯನ್ನು ಕುರಿತು ಅಗ್ನಿಪ್ರಣಯನದಲ್ಲಿ ವಿಹಿತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| ಪ್ರ ದೇವಂ...ಆನುಷಕ್ ॥ | ಅಗ್ನಿಪ್ರಣಯನದ ಮೊದಲ ಮಂತ್ರ. |

---

✦ಎಲೈ! ಋತ್ವಿಗ್ಯಜಮಾನರೇ! [ನೀವು] ದೇವಮ್=ಪ್ರಕಾಶಮಾನನಾದ; ಜಾತವೇದಸಮ್=ಉತ್ಪನ್ನವಾದುದೆಲ್ಲವನ್ನೂ ತಿಳಿದಿರುವ ಜಾತವೇದಸನಾದ ಅಗ್ನಿಯನ್ನು; ದೇವ್ಯಾ ಧಿಯಾ=ಪ್ರಕಾಶಮಾನವಾದ ವಿವೇಕಯುಕ್ತವಾದ ಬುದ್ಧಿಯಿಂದ; ಪ್ರ ಭರತ=ಪ್ರಣಯನ ಮಾಡಿರಿ; [ಆ ಅಗ್ನಿದೇವನು] ಆನುಷಕ್=ನಮ್ಮಲ್ಲಿ [ಆದರವುಳ್ಳವನಾಗಿ] ನಃ=ನಮ್ಮ; ಹವ್ಯಾ=ಹವ್ಯಗಳನ್ನು; ವಕ್ಷತ್=[ದೇವತೆಗಳಿಗೆ] ಒಯ್ಯಲಿ.

ಅಯಮು ಷ್ಯ ಪ್ರದೇವಯುರ್ ಹೋತಾ ಯಜ್ಞಾಯ

ನೀಯತೇ । ರಥೋ ನ ಯೋರಭೀವೃತೋ

ಘೃಣೀವಾಞ್ಚೇತತಿ ತ್ಮನಾ ॥

---

ಅಯಮ್ । ಉ । ಸ್ಯಃ । ಪ್ರೇತಿ । ದೇವಯುರಿತಿ ದೇವ-ಯುಃ । ಹೋತಾ ।

ಯಜ್ಞಾಯ । ನೀಯತೇ ॥ ರಥಃ । ನ । ಯೋಃ । ಅಭೀವೃತ ಇತ್ಯಭಿ-ವೃತಃ ।

ಘೃಣೀವಾನ್ । ಚೇತತಿ । ತ್ಮನಾ ॥

---

| ಮಂತ್ರ | ವಿನಿಯೋಗ |
|---|---|
| ಅಯಮುಷ್ಯ...ತ್ಮನಾ ॥ | ಅಗ್ನಿಪ್ರಣಯನದ ಎರಡನೆಯ ಮಂತ್ರ. |

---

✦ದೇವಯುಃ=ಹವಿಸ್ಸನ್ನು ಸಮರ್ಪಿಸಲು ದೇವತೆಗಳನ್ನು ಅಪೇಕ್ಷಿಸುವ; ಹೋತಾ=ಹೋಮನಿಷ್ಪಾದಕನಾದ; ಅಯಮ್ ಸ್ಯಃ ಉ=ಆ ಈ ಅಗ್ನಿದೇವನೇ; ಯಜ್ಞಾಯ ಪ್ರಣೀಯತೇ=ಯಜ್ಞಕ್ಕಾಗಿ ಪ್ರಣಯನ ಮಾಡಲ್ಪಡುತ್ತಾನೆ; ರಥಃ ನ= ರಥದಂತೆ; ಯೋಃ=ಪ್ರತ್ಯೇಕಿಸುವವನು[ಆಗಿದ್ದಾನೆ] ಅಭೀವೃತಃ=[ಯಜಮಾನರಿಂದ] ಅಭಿಮುಖನಾಗಿ ಮಾಡಿಕೊಳ್ಳಲ್ಪಡುತ್ತಾನೆ; ಘೃಣೀವಾನ್=ರಶ್ಮಿ[ಜ್ವಾಲಾ] ಯುಕ್ತನಾಗಿದ್ದಾನೆ. ತ್ಮನಾ ಚೇತತಿ=ತಾನೇ ಯಜಮಾನನ ಭಕ್ತಿಯನ್ನು ತಿಳಿದಿರುತ್ತಾನೆ; [ಇಂತಹ ಅಗ್ನಿಯನ್ನು ಪ್ರಣಯನ ಮಾಡಿರಿ]

---

ಹೇ! ಋತ್ವಿಗ್ಯಜಮಾನರೇ! ಅಗ್ನಿಯು ಜಾತವೇದಸನು. ಉತ್ಪನ್ನವಾದುದೆಲ್ಲವನ್ನೂ ತಿಳಿದವನು. ಅಂತಹ ಅಗ್ನಿದೇವನನ್ನು ವಿವೇಕಯುಕ್ತವಾದ ಬುದ್ಧಿಯಿಂದ ಉತ್ತರವೇದಿಗೆ ಒಯ್ಯಿರಿ. ಆತನು ನಮ್ಮಲ್ಲಿ ಆದರವುಳ್ಳವನಾಗಿ ನಮ್ಮ ಹವ್ಯಗಳನ್ನು ದೇವತೆಗಳಿಗೆ ಒಯ್ಯಲಿ.

**ಅಯಮಗ್ನಿರುರುಷ್ಯತ್ಯಮೃತಾದಿವ ಜನ್ಮನಃ ।**

**ಸಹಸಶ್ಚಿತ್ಸಹೀಯಾನ್ದೇವೋ ಜೀವಾತವೇ ಕೃತಃ ॥**

---

ಅಯಮ್ । ಅಗ್ನಿಃ । ಉರುಷ್ಯತಿ । ಅಮೃತಾತ್ । ಇವ । ಜನ್ಮನಃ ॥ ಸಹಸಃ । ಚಿತ್ ।

ಸಹೀಯಾನ್ । ದೇವಃ । ಜೀವಾತವೇ । ಕೃತಃ ॥

---

| ಮಂತ್ರ | ವಿನಿಯೋಗ |
|---|---|
| ಅಯಮಗ್ನಿ...ಕೃತಃ ॥ | ಅಗ್ನಿಪ್ರಣಯನದ ಮೂರನೆಯ ಮಂತ್ರ. |

---

+ಅಯಮ್ ಅಗ್ನಿಃ=ಪ್ರಣಯನ ಮಾಡಲ್ಪಡುತ್ತಿರುವ ಈ ಅಗ್ನಿಯು; ಅಮೃತಾತ್ ಇವ=ಅಮೃತಪಾನದಿಂದ ಹೇಗೋ ಹಾಗೆ; ಜನ್ಮನಃ=ಹುಟ್ಟಿನಿಂದಲೇ [ಹುಟ್ಟಿದೊಡನೆಯೇ] ಉರುಷ್ಯತಿ=ಪ್ರಬಲನಾಗಲು ಇಚ್ಛಿಸುತ್ತಾನೆ; ದೇವಃ=ಪ್ರಕಾಶಮಾನನಾದ ಅಗ್ನಿಯು; ಜೀವಾತವೇ=ಜೀವನೌಷಧಕ್ಕಾಗಿ; ಸಹಸಃ ಚಿತ್=ಬಲವಂತನಿಗಿಂತಲೂ; ಸಹೀಯಾನ್=ಅತಿಶಯ ಬಲವಂತನಾಗಿ; ಕೃತಃ=ಮಾಡಲ್ಪಟ್ಟಿರುತ್ತಾನೆ.

---

ಈ ಅಗ್ನಿಯು ಹವ್ಯವಾಹನು. ಯಜಮಾನನು ತನ್ನಲ್ಲಿ ಸಮರ್ಪಿಸುವ ಹವ್ಯಗಳನ್ನು ಕೊಡಲು ದೇವತೆಗಳನ್ನು ಅಪೇಕ್ಷಿಸುತ್ತಾನೆ. ಈತನು ಹೋಮನಿಷ್ಪಾದಕನು. ರಥವು ತನ್ನಲ್ಲಿ ಕುಳಿತಿರುವವರನ್ನು ನಡೆದು ಹೋಗುವವರಿಗಿಂತಲೂ ಬೇರ್ಪಡಿಸಿ ಬೇಗನೆ ಗ್ರಾಮಕ್ಕೆ ಒಯ್ಯುವಂತೆ ಅಗ್ನಿಯು ತನ್ನಲ್ಲಿ ಅರ್ಪಿಸಿದ ಹವ್ಯಗಳನ್ನು ಬೇರ್ಪಡಿಸಿ ದೇವತೆಗಳಿಗೆ ಸಮರ್ಪಿಸುತ್ತಾನೆ. ಯಜಮಾನರಿಂದ ಅಭಿಮುಖವಾಗಿ ಮಾಡಿಕೊಳ್ಳಲ್ಪಡುವ ಅಗ್ನಿಯು ಯಜಮಾನನ ಭಕ್ತಿಯನ್ನು ತಿಳಿದಿರುತ್ತಾನೆ. ಇಂತಹ ಅಗ್ನಿಯು ಯಾಗಕ್ಕಾಗಿ ಉತ್ತರವೇದಿಯನ್ನು ಉದ್ದೇಶಿಸಿ ಪ್ರಣಯನ ಮಾಡಲ್ಪಡುತ್ತಾನೆ.

ಅಮೃತಪಾನ ಮಾಡಿದವನು ಒಡನೆಯೇ ಪ್ರವೃದ್ಧನಾಗುವಂತೆ ಈ ಅಗ್ನಿದೇವನು ಪ್ರಣಯನ ಮಾಡಿದೊಡನೆಯೇ ಪ್ರಬಲನಾಗಲು ಇಚ್ಛಿಸುತ್ತಾನೆ. ಯಜಮಾನನ

**ಇಡಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧಿ ।**

**ಜಾತವೇದೋ ನಿಧೀಮಹ್ಯಗ್ನೇ ಹವ್ಯಾಯ ವೋಢವೇ ॥**

---

ಇಡಾಯಾಃ । ತ್ವಾ । ಪದೇ । ವಯಮ್ । ನಾಭಾ । ಪೃಥಿವ್ಯಾಃ । ಅಧಿ ॥ ಜಾತವೇದ ಇತಿ ಜಾತ–ವೇದಃ । ನೀತಿ । ಧೀಮಹಿ । ಅಗ್ನೇ । ಹವ್ಯಾಯ । ವೋಢವೇ ॥

---

| ಮಂತ್ರ | ವಿನಿಯೋಗ |
|---|---|
| ಇಡಾಯಾಸ್ತ್ವಾ...ವೋಢವೇ ॥ | ಅಗ್ನಿಪ್ರಣಯನದ ನಾಲ್ಕನೆಯ ಮಂತ್ರ. |

---

+ಜಾತವೇದಃ ಅಗ್ನೇ=ಹುಟ್ಟಿದುದೆಲ್ಲವನ್ನೂ ತಿಳಿದಿರುವ ಅಗ್ನಿದೇವನೇ! ತ್ವಾ= ನಿನ್ನನ್ನು; ವಯಮ್=ನಾವು; ಪೃಥಿವ್ಯಾಃ ಅಧಿ=ಭೂಮಿಯ ಮೇಲೆ; ಇಡಾಯಾಃ ಪದೇ=ಗೋರೂಪವಾದ ಇಡೆಯ [ಘೃತಯುಕ್ತವಾದ] ನಾಭಾ=ನಾಭಿಯಂತಿರುವ; ಪದೇ=ಹೆಜ್ಜೆಯಂತಿರುವ ಆಹವನೀಯದ ಸ್ಥಾನದಲ್ಲಿ; ಹವ್ಯಾಯ ವೋಢವೇ= [ದೇವತೆಗಳಿಗೆ] ಹವ್ಯಗಳನ್ನು ಒಯ್ಯುವುದಕ್ಕಾಗಿ; ನಿಧೀಮಹಿ=ಚೆನ್ನಾಗಿ ಇಡುತ್ತೇವೆ.

---

ಜೀವನೌಷಧವಾಗುವುದಕ್ಕಾಗಿ ಈ ಅಗ್ನಿದೇವನು ಬಲವಂತನಿಗಿಂತಲೂ ಅತಿಶಯ ಬಲವಂತನಾಗಿರುತ್ತಾನೆ. ತಾನೂ ನಾಶರಹಿತನಾಗಿ ಯಜಮಾನನನ್ನು ನಾಶರಹಿತನನ್ನಾಗಿ ಮಾಡಲು ಅತಿಬಲಿಷ್ಠನಾಗಿ ಮಾಡಲ್ಪಟ್ಟಿರುತ್ತಾನೆ.. ಆ ಅಗ್ನಿದೇವನು ದೇವತೆಗಳಿಗೆ ಯಜಮಾನನು ಸಮರ್ಪಿಸುವ ಹವ್ಯವನ್ನು ಒಯ್ದು ನೀಡಿ ದೇವತೆಗಳು ಪ್ರಸನ್ನರಾಗುವಂತೆಯೂ ಯಜ್ಞಫಲವನ್ನು ಯಜಮಾನನು ಹೊಂದುವಂತೆಯೂ ಮಾಡುತ್ತಾನೆ.

ಎಲ್ಲವನ್ನೂ ತಿಳಿದ ಅಗ್ನಿಯೇ! ನಾವು ನಿನ್ನನ್ನು–ದೇವತೆಗಳಿಗೆ ಹವ್ಯಗಳನ್ನು ಒಯ್ಯುವುದಕ್ಕಾಗಿ ಭೂಮಿಯ ಮೇಲೆ ಗೋರೂಪವಾದ ಇಡೆಯ ಹೆಜ್ಜೆಯಂತಿರುವ ಆಹವನಿಯಾಗ್ನಿಯ ಸ್ಥಾನದಲ್ಲಿ–ಪ್ರಣಯನ ಮಾಡಿ ಸ್ಥಾಪಿಸುತ್ತೇವೆ.

[೩.೨] ॥ಅಗ್ನೇ ವಿಶ್ವೇಭಿಸ್ಸ್ವನೀಕ ದೇವೈರೂರ್ಣಾವಂತಂ ಪ್ರಥಮಸ್ಸೀದ ಯೋನಿಮ್ । ಕುಲಾಯಿನಂ ಘೃತವಂತಗ್ಂ ಸವಿತ್ರೇ ಯಜ್ಞಂ ನಯ ಯಜಮಾನಾಯ ಸಾಧು ॥

---

[೩.೨]॥ ಅಗ್ನೇ । ವಿಶ್ವೇಭಿಃ । ಸ್ವನೀಕೇತಿ ಸು-ಅನೀಕ । ದೇವೈಃ । ಊರ್ಣಾವಂತ ಮಿತ್ಯೂರ್ಣಾ-ವಂತಮ್ । ಪ್ರಥಮಃ । ಸೀದ । ಯೋನಿಮ್ ॥ ಕುಲಾಯಿನಮ್ । ಘೃತವಂತಮಿತಿ ಘೃತ-ವಂತಮ್ । ಸವಿತ್ರೇ । ಯಜ್ಞಮ್ । ನಯ । ಯಜಮಾನಾಯ । ಸಾಧು ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ...ಸಾಧು ॥ | ಅಗ್ನಿಪ್ರಣಯನದ ಐದನೆಯ ಮಂತ್ರ. |

---

+ವಿಶ್ವೇಭಿಃ ದೇವೈಃ=ಎಲ್ಲ ದೇವತೆಗಳಿಂದ ಕೂಡಿರುವ; ಸ್ವನೀಕ=ಒಳ್ಳೆಯ ಸೇನೆಯನ್ನು ಹೊಂದಿರುವ/ದೇವತೆಗಳೇ ಒಳ್ಳೆಯ ಸೇನೆಯಾಗಿರುವ; ಅಗ್ನೇ=ಅಗ್ನಿ ದೇವನೇ! ಪ್ರಥಮಃ=ದೇವತೆಗಳಲ್ಲಿ ಮುಖ್ಯನಾದ; [ನೀನು] **ಊರ್ಣಾವಂತಮ್**=ಉಣ್ಣೆಯಂತೆ ಮೃದುವಾಗಿರುವ; **ಕುಲಾಯಿನಮ್**=ಚೆನ್ನಾಗಿ ನಿರ್ಮಿಸಲ್ಪಟ್ಟಿರುವ ಹಕ್ಕಿಯ ಗೂಡಿನಂತೆ ಚೆನ್ನಾಗಿ ನಿರ್ಮಿತವಾಗಿರುವ; **ಘೃತವಂತಮ್**=ಒಳ್ಳೆಯ ಆಜ್ಯಾಹುತಿಗಳಿಂದ ಸಂಪೂರ್ಣವಾದ; **ಯೋನಿಮ್**=[ನಿನ್ನ]ಆಧಾರಸ್ಥಾನವಾಗಿರುವ [ಆಹವನೀಯಸ್ಥಾನವನ್ನು] ಸೀದ=ಹೊಂದಿ [ಅಲ್ಲಿ ಸ್ಥಿರವಾಗಿರು]. **ಸವಿತ್ರೇ ಯಜಮಾನಾಯ**=ಸೋಮಯಾಗವನ್ನು ಅನುಷ್ಠಿಸುವ ಯಜಮಾನನಿಗೆ; **ಸಾಧು**=ಚೆನ್ನಾಗಿ; **ಯಜ್ಞಮ್ ನಯ**=ಯಜ್ಞವನ್ನು ಸಮಾಪ್ತಿಗೊಳಿಸು.

ಸೀದ ಹೋತಸ್ಸ್ವ ಉ ಲೋಕೇ ಚಿಕಿತ್ವಾನ್ಥ್ಸಾದಯಾ ಯಜ್ಞಗ್‌ಂ ಸುಕೃತಸ್ಯ ಯೋನೌ । ದೇವಾವೀರ್ದೇವಾನ್ ಹವಿಷಾ ಯಜಾಸ್ಯಗ್ನೇ ಬೃಹದ್ಯಜಮಾನೇ ವಯೋ ಧಾಃ ॥

---

ಸೀದ । ಹೋತಃ । ಸ್ವೇ । ಉ । ಲೋಕೇ । ಚಿಕಿತ್ವಾನ್ । ಸಾದಯ । ಯಜ್ಞಮ್ । ಸುಕೃತಸ್ಯೇತಿ ಸು-ಕೃತಸ್ಯ । ಯೋನೌ ॥ ದೇವಾವೀರಿತಿ ದೇವ-ಅವೀಃ । ದೇವಾನ್ । ಹವಿಷಾ । ಯಜಾಸಿ । ಅಗ್ನೇ । ಬೃಹತ್ । ಯಜಮಾನೇ । ವಯಃ । ಧಾಃ ॥

---

| ಮಂತ್ರ | ವಿನಿಯೋಗ |
|---|---|
| ಸೀದ ಹೋತಃ...ಧಾಃ ॥ | ಅಗ್ನಿಪ್ರಣಯನದ ಆರನೆಯ ಮಂತ್ರ. |

---

✦ಅಗ್ನೇ ಹೋತಃ=ದೇವತೆಗಳನ್ನು ಆಹ್ವಾನಿಸುವ;/ಯಜ್ಞನಿಷ್ಪಾದಕನಾದ ಹೇ ಅಗ್ನಿದೇವನೇ! ಚಿಕಿತ್ವಾನ್=ಅಭಿಜ್ಞನಾದ ನೀನು; ಸ್ವೇ ಉ ಲೋಕೇ=ನಿನ್ನದಾದ ಉತ್ತರವೇದಿಸ್ಥಾನದಲ್ಲಿ ಸೀದ=ಕುಳಿತುಕೋ; ಯಜ್ಞಮ್=ಈ ಯಜಮಾನನ ಯಜ್ಞವನ್ನು; ಸುಕೃತಸ್ಯ ಯೋನೌ=ಪುಣ್ಯಕರ್ಮಗಳ ಸಾಲಿನಲ್ಲಿ; ಸಾದಯ= ಸ್ಥಾಪಿಸು; ದೇವಾವೀಃ=ದೇವತೆಗಳನ್ನು ರಕ್ಷಿಸುವ/ಸಂತೋಷಪಡಿಸುವ/ಪ್ರೀತಿಸುವ ನೀನು; ದೇವಾನ್=ದೇವತೆಗಳನ್ನು; ಹವಿಷಾ=ಹವಿಸ್ಸಿನಿಂದ; ಯಜಾಸಿ=ಪೂಜಿಸುತ್ತೀಯೆ/ ಪೂಜಿಸು; ಯಜಮಾನೇ=ಯಜಮಾನನಲ್ಲಿ; ಬೃಹತ್=ಮಹತ್ತಾದ/ಹೆಚ್ಚಾದ; ವಯಃ= ಆಯುಸ್ಸನ್ನು/ಅನ್ನವನ್ನು; ಧಾಃ=ಸ್ಥಿರಗೊಳಿಸು.

---

ಎಲ್ಲ ದೇವತೆಗಳೂ ಅಗ್ನಿದೇವನ ಸೇನೆಯಂತಿರುತ್ತಾರೆ. ಅಗ್ನಿಯು ದೇವತೆಗಳಲ್ಲಿ ಪ್ರಥಮನು/ಮುಖ್ಯನು. ಇಂತಹ ಅಗ್ನಿಯು ಉಣ್ಣೆಯಂತೆ ಮೃದುವಾಗಿ ಚೆನ್ನಾಗಿ ನಿರ್ಮಿತವಾದ ಹಕ್ಕಿಯ ಗೂಡಿನಂತಿರುವ ಆಹವನೀಯಸ್ಥಾನವನ್ನು ಹೊಂದಿ ಚೆನ್ನಾಗಿ ಕುಳಿತಿರಲಿ. ಯಜಮಾನನ ಯಾಗವು ಚೆನ್ನಾಗಿ ನಡೆದು ಸಮಾಪ್ತಿಯನ್ನು ಹೊಂದುವಂತೆ ಮಾಡಲಿ.

# ನಿ ಹೋತಾ ಹೋತೃಷದನೇ ವಿದಾನಸ್ತ್ವೇಷೋ ದೀದಿವಾಗ್ಂ ಅಸದತ್ಸುದಕ್ಷಃ । ಅದಬ್ಧವ್ರತಪ್ರಮತಿ ರ್ವಸಿಷ್ಠಸ್ಸಹಸ್ರಂಭರಶ್ಶುಚಿಜಿಹ್ವೋ ಅಗ್ನಿಃ ॥

---

ನೀತಿ । ಹೋತಾ । ಹೋತೃಷದನ ಇತಿ ಹೋತೃ-ಸದನೇ । ವಿದಾನಃ । ತ್ವೇಷಃ । ದೀದಿವಾನ್ । ಅಸದತ್ । ಸುದಕ್ಷ ಇತಿ ಸು-ದಕ್ಷಃ ॥ ಅದಬ್ಧವ್ರತಪ್ರಮತಿ ರಿತ್ಯದಬ್ಧವ್ರತ-ಪ್ರಮತಿಃ । ವಸಿಷ್ಠಃ । ಸಹಸ್ರಂಭರ ಇತಿ ಸಹಸ್ರಮ್-ಭರಃ । ಶುಚಿಜಿಹ್ವ ಇತಿ ಶುಚಿ-ಜಿಹ್ವಃ । ಅಗ್ನಿಃ ॥

---

| ಮಂತ್ರ | ವಿನಿಯೋಗ |
|---|---|
| ನಿ ಹೋತಾ...ಅಗ್ನಿಃ ॥ | ಅಗ್ನಿಪ್ರಣಯನದ ಏಳನೆಯ ಮಂತ್ರ. |

---

✦ಅಗ್ನಿಃ=ಅಗ್ನಿದೇವನು; ಹೋತಾ=ದೇವತೆಗಳನ್ನು ಆಹ್ವಾನಿಸುವವನು; ವಿದಾನಃ= ತನ್ನ ಕಾರ್ಯಗಳನ್ನು ತಿಳಿದವನು; ತ್ವೇಷಃ=ಕಾಂತಿಯುಕ್ತನು; ದೀದಿವಾನ್=[ದೇವತೆಗಳಿಗೆ ಹವಿಸ್ಸನ್ನು] ಕೊಡತಕ್ಕವನು; ಸುದಕ್ಷಃ=ಒಳ್ಳೆಯ ಸಮರ್ಥನು; ಅದಬ್ಧವ್ರತಪ್ರಮತಿಃ=ಹಿಂಸಿತವಲ್ಲದ ಕರ್ಮಗಳಲ್ಲಿ ಆಸಕ್ತವಾದ ಶ್ರೇಷ್ಠಬುದ್ಧಿಯುಳ್ಳವನು; ವಸಿಷ್ಠಃ=ಒಳ್ಳೆಯ ವಾಸಸ್ಥಳಗಳನ್ನು ಕೊಡುವವನು; ಸಹಸ್ರಂಭರಃ= ಸಾವಿರಾರು ಬಗೆಯ ಹವೀರೂಪವಾದ ಐಶ್ವರ್ಯವುಳ್ಳವನು/ಸಾವಿರಾರು ಭೃತ್ಯಾದಿಗಳನ್ನು ಪೋಷಿಸಬಲ್ಲವನು; ಶುಚಿಜಿಹ್ವಃ=ಶುದ್ಧವಾದ ಜ್ವಾಲಾರೂಪವಾದ ನಾಲಿಗೆಯುಳ್ಳವನು [ಇಂತಹ ಅಗ್ನಿದೇವನು] ಹೋತೃಷದನೇ=ಯಜ್ಞನಿರ್ವಾಹಕನಿಗೆ ಯೋಗ್ಯವಾದ ಉತ್ತರವೇದಿಸ್ಥಾನದಲ್ಲಿ; ನಿ ಅಸದತ್=ಚೆನ್ನಾಗಿ ಕುಳಿತುಕೊಂಡನು/ ಸ್ಥಿರನಾಗಿ ಕುಳಿತು ಯಾಗವನ್ನು ಪೂರ್ಣಗೊಳಿಸಿ ಯಜಮಾನನ ಇಷ್ಟಾರ್ಥಗಳನ್ನು ಕರುಣಿಸಲಿ.

ತ್ವಂ ದೂತಸ್ತ್ವ[ತ್ವಮ್(ಽಽ)ಉ ನಃ ಪರಸ್ಪಾಃ]ಮು ನಃ ಪರಸ್ಪಾಸ್ತ್ವಂ ವಸ್ಯ ಆ ವೃಷಭ ಪ್ರಣೇತಾ । ಅಗ್ನೇ ತೋಕಸ್ಯ ನಸ್ತನೇ ತನೂನಾಮಪ್ರಯುಚ್ಛನ್ದೀದ್ಯದ್ಬೋಧಿ ಗೋಪಾಃ ॥

---

ತ್ವಮ್ । ದೂತಃ । ತ್ವಮ್ ।(ಽಽ)। ಉ । ನಃ । ಪರಸ್ಪಾ ಇತಿ ಪರಃ-ಪಾಃ । ತ್ವಮ್ । ವಸ್ಯಃ । ಏತಿ । ವೃಷಭ । ಪ್ರಣೇತೇತಿ ಪ್ರ-ನೇತಾ ॥ ಅಗ್ನೇ । ತೋಕಸ್ಯ । ನಃ । ತನೇ । ತನೂನಾಮ್ । ಅಪ್ರಯುಚ್ಛನ್ನಿತ್ಯಪ್ರ-ಯುಚ್ಛನ್ । ದೀದ್ಯತ್ । ಬೋಧಿ । ಗೋಪಾ ಇತಿ ಗೋ-ಪಾಃ ॥

---

| ಮಂತ್ರ | ವಿನಿಯೋಗ |
|---|---|
| ತ್ವಂ...ಗೋಪಾಃ ॥ | ಅಗ್ನಿಪ್ರಣಯನದ ಎಂಟನೆಯ ಮಂತ್ರ. |

---

+ಅಗ್ನೇ=ಅಗ್ನಿದೇವನೇ! ತ್ವಮ್ ದೂತಃ=ನೀನು ದೇವತೆಗಳ ದೂತನಾಗಿದ್ದೀಯೆ; ತ್ವಮ್ ಉ ನಃ ಪರಸ್ಪಾಃ=ನೀನೇ ನಮಗೆ ಶ್ರೇಷ್ಠನಾದ ರಕ್ಷಕನು; ವೃಷಭ= ದೇವಶ್ರೇಷ್ಠನೇ!/ಇಷ್ಟಾರ್ಥಗಳನ್ನು ಸುರಿಸುವವನೇ! ತ್ವಮ್ ವಸ್ಯಃ=ನೀನೇ ಈ ಯಜ್ಞದಲ್ಲಿ ವಾಸಗೊಳಿಸಲು ಯೋಗ್ಯನು; ಆ ಪ್ರಣೇತಾ=[ಯಜ್ಞವನ್ನು] ಚೆನ್ನಾಗಿ ನೆರವೇರಿಸಿಕೊಡತಕ್ಕವನು; ನಃ=ನಮ್ಮ; ತೋಕಸ್ಯ ತನೂನಾಮ್=ಮಕ್ಕಳುಗಳ ಶರೀರಗಳ; ತನೇ=ವಿಸ್ತಾರದಲ್ಲಿ/ವೃದ್ಧಿಯಲ್ಲಿ; ಅಪ್ರಯುಚ್ಛನ್=ಎಚ್ಚರಿಕೆಯುಳ್ಳವನಾಗಿ; ದೀದ್ಯತ್=ಕತ್ತಲೆಯನ್ನು ಹೋಗಲಾಡಿಸುವ ತೇಜಸ್ಸುಳ್ಳವನಾಗಿ/ದೇವತೆಗಳಿಗೆ ಹವ್ಯಗಳನ್ನು ನೀಡುವವನಾಗಿ; ಗೋಪಾಃ=ರಕ್ಷಕನಾಗಿ; ಬೋಧಿ=ಪ್ರಜ್ವಲಿಸು/ ಎಚ್ಚರವಾಗಿರು/ನಮ್ಮನ್ನು ಎಚ್ಚರಗೊಳಿಸು.

---

ಅಗ್ನಿದೇವನೇ! ನೀನು ದೇವತೆಗಳನ್ನು ಆಹ್ವಾನಿಸಿ ಯಜ್ಞವನ್ನು ನೆರವೇರಿಸಿ ಕೊಡುವವನು. ನೀನು ಸ್ವಕೀಯವಾದ ಉತ್ತರವೇದಿಸ್ಥಾನದಲ್ಲಿ ಕುಳಿತುಕೋ. ಈ

ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಮ್ ।

ಸದಾಽವನ್ಭಾಗಮೀಮಹೇ ॥

---

ಅಭೀತಿ । ತ್ವಾ । ದೇವ । ಸವಿತಃ । ಈಶಾನಮ್ । ವಾರ್ಯಾಣಾಮ್ ॥ ಸದಾ ।

ಅವನ್ । ಭಾಗಮ್ । ಈಮಹೇ ॥

---

| ಮಂತ್ರ | ವಿನಿಯೋಗ |
|---|---|
| ಅಭಿ ತ್ವಾ...ಈಮಹೇ ॥* | ಅಗ್ನಿಮಂಥನದ ಮೊದಲನೆಯ ಮಂತ್ರ. |

---

+ದೇವ ಸವಿತಃ=ಸರ್ವಪ್ರೇರಕನಾದ ಪರಮೇಶ್ವರನೇ! ವಾರ್ಯಾಣಾಮ್ ಈಶಾನಮ್ =ನಿವಾರಿಸಬೇಕಾದ ವಿಘ್ನಗಳ ಹೋಗಲಾಡಿಸುವಿಕೆಯಲ್ಲಿ ಸಮರ್ಥನಾದ; ತ್ವಾ= ನಿನ್ನನ್ನು; ಅಭಿ ಪ್ರಾಪ್ತುಮ್ ಈಮಹೇ=ಹೊಂದಲು ಬಯಸುತ್ತೇವೆ; ಸದಾ ಅವನ್= ಯಾವಾಗಲೂ ರಕ್ಷಕನಾದ ದೇವನೇ! [ನಿನ್ನ ಅನುಗ್ರಹದಿಂದ] ಭಾಗಮ್ ಈಮಹೇ= ಯಾಗಕ್ಕಾಗಿ ಆಶ್ರಯಿಸಬೇಕಾದ ಅಗ್ನಿಯನ್ನು ಹೊಂದುತ್ತೇವೆ.

---

ಯಜ್ಞವನ್ನು ಪುಣ್ಯಕರ್ಮಗಳ ಸಾಲಿನಲ್ಲಿ ಸ್ಥಾಪಿಸು. ನೀನು ದೇವತೆಗಳ ರಕ್ಷಕನು. ದೇವತೆಗಳಿಗೆ ಪ್ರಿಯನಾದವನು. ಹವಿಸ್ಸುಗಳಿಂದ ದೇವತೆಗಳನ್ನು ಆರಾಧಿಸು. ಯಜಮಾನನಿಗೆ ದೀರ್ಘಾಯುಸ್ಸನ್ನೂ ಅನ್ನವನ್ನೂ ಕೊಡು.

ಯಾಗಕ್ಕಾಗಿ ದೇವತೆಗಳನ್ನು ಆಮಂತ್ರಿಸುವ ತನ್ನ ಕಾರ್ಯವನ್ನು ತಿಳಿದ ಕಾಂತಿಮಂತನಾದ, ಸಮರ್ಥನಾದ, ಶುದ್ಧಕರ್ಮಗಳಲ್ಲಿ ಆಸಕ್ತನಾದ, ಜ್ವಾಲಾರೂಪವಾದ ನಾಲಗೆಯನ್ನು ಹೊಂದಿರುವ ಅಗ್ನಿದೇವನು ತನಗೆ ಯೋಗ್ಯವಾದ ಉತ್ತರವೇದಿಯಲ್ಲಿ ಕುಳಿತು ಯಾಗವನ್ನು ನೆರವೇರಿಸಿ ಅನುಗ್ರಹಿಸಲಿ.

'ಅಗ್ನಿರ್ದೇವಾನಾಂ ದೂತ ಆಸೀತ್' ಎಂಬ ಶ್ರುತಿವಾಕ್ಯದಂತೆ ದೇವದೂತನೂ, ರಕ್ಷಕನೂ, ಇಷ್ಟಾರ್ಥಗಳನ್ನು ಕರುಣಿಸುವವನೂ, ಯಜ್ಞನಿರ್ವಾಹಕನೂ ಆದ

---

*ಇಲ್ಲಿಂದ ಮುಂದಿನ ಹದಿಮೂರು ಮಂತ್ರಗಳಿಗೂ ಅಗ್ನಿಮಂಥನದಲ್ಲಿಯೇ ವಿನಿಯೋಗ.

– ಭ.ಭಾ.ಭಾ

ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಮ್ । ಪಿಪೃತಾಂ ನೋ ಭರೀಮಭಿಃ ॥ ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ । ಮೂರ್ಧ್ನೋ ವಿಶ್ವಸ್ಯ ವಾಘತಃ ॥

---

ಮಹೀ । ದ್ಯೌಃ । ಪೃಥಿವೀ । ಚ । ನಃ । ಇಮಮ್ । ಯಜ್ಞಮ್ । ಮಿಮಿಕ್ಷತಾಮ್ ॥ ಪಿಪೃತಾಮ್ । ನಃ । ಭರೀಮಭಿರಿತಿ ಭರೀಮ-ಭಿಃ ॥ ತ್ವಾಮ್ । ಅಗ್ನೇ । ಪುಷ್ಕರಾತ್ । ಅಧೀತಿ । ಅಥರ್ವಾ । ನಿರಿತಿ । ಅಮಂಥತ ॥ ಮೂರ್ಧ್ನಃ । ವಿಶ್ವಸ್ಯ । ವಾಘತಃ ॥

---

| ಮಂತ್ರ | ವಿನಿಯೋಗ |
|---|---|
| ಮಹೀ...ಭರೀಮಭಿಃ ॥ | ಅಗ್ನಿಮಂಥನದ ದ್ವಿತೀಯಮಂತ್ರ. |
| ತ್ವಾಮಗ್ನೇ...ವಾಘತಃ ॥ | ಅಗ್ನಿಮಂಥನದ ತೃತೀಯಮಂತ್ರ. |

---

✦ಮಹೀ ದ್ಯೌಃ ಪೃಥಿವೀ ಚ=ವ್ಯಾಪಕವಾದ ದ್ಯುಲೋಕವೂ ಮತ್ತು ಭೂಲೋಕವೂ; ನಃ=ನಮ್ಮ; ಇಮಮ್ ಯಜ್ಞಮ್=ಈ ಯಾಗವನ್ನು ಮಿಮಿಕ್ಷತಾಮ್=ಸೇಚಿಸಲು/ಆಜ್ಯಾದಿಗಳಿಂದ ತುಂಬಲು ಇಚ್ಛಿಸಲಿ; ನಃ=ನಮ್ಮನ್ನು; ಭರೀಮಭಿಃ=ಪೋಷಣೆಗಳಿಂದ; ಪಿಪೃತಾಮ್=ಪೂರ್ಣಗೊಳಿಸಲಿ. ✦ಅಗ್ನೇ=ಅಗ್ನಿದೇವನೇ! ಅಥರ್ವಾ=ಅಥರ್ವಮುನಿಯು; ತ್ವಾಮ್=ನಿನ್ನನ್ನು; ಮೂರ್ಧ್ನಃ=ತಲೆಯಂತೆ ಶ್ರೇಷ್ಠವಾದ; ವಿಶ್ವಸ್ಯ ವಾಘತಃ=ಅಗ್ನ್ಯುತ್ಪಾದನಾದಿ ಮೂಲಕ ವಿಶ್ವವನ್ನು ನಿರ್ವಹಿಸುವ; ಪುಷ್ಕರಾತ್ ಅಧಿ=ತಾವರೆಯ ಮೇಲೆ; ನಿರಮಂಥತ=ಕಡೆದು ನಿಃಶೇಷವಾಗಿ ಉತ್ಪಾದಿಸಿದನು.

---

ಅಗ್ನಿದೇವನೇ! ನಮ್ಮ ಮಕ್ಕಳ ಶರೀರರಕ್ಷಣೆಯನ್ನು ಗಮನಿಸಿ ಅನುಗ್ರಹಿಸು. ನಮ್ಮನ್ನು ಸದಾ ಜಾಗರೂಕರನ್ನಾಗಿ ಇಡು.

ಈ ಮೇಲಿನ ಎಂಟು ಮಂತ್ರಗಳೂ ಅಗ್ನಿಪ್ರಣಯನಮಂತ್ರಗಳು.

ತಮು[(೩ಳ)ತ್ವಾ ದಧ್ಯಙ್ಙೃಷಿಃ]ತ್ವಾ ದಧ್ಯಙ್ಙೃಷಿಃ ಪುತ್ರ

ಈಧೇ ಅಥರ್ವಣಃ । ವೃತ್ರಹಣಂ ಪುರಂದರಮ್ ॥

ತಮು ತ್ವಾ ಪಾಥ್ಯೋ ವೃಷಾ ಸಮೀಧೇ

ದಸ್ಯುಹಂತಮಮ್ । ಧನಂಜಯಗ್ಂ ರಣೇರಣೇ ॥

---

ತಮ್ । ಉ ।(೩ಳ)। ತ್ವಾ । ದಧ್ಯಙ್ । ಋಷಿಃ । ಪುತ್ರಃ । ಈಧೇ । ಅಥರ್ವಣಃ ॥ ವೃತ್ರಹಣಮಿತಿ ವೃತ್ರ-ಹನಮ್ । ಪುರಂದರಮಿತಿ ಪುರಮ್-ದರಮ್ ॥ ತಮ್ । ಉ । ತ್ವಾ । ಪಾಥ್ಯಃ । ವೃಷಾ । ಸಮಿತಿ । ಈಧೇ । ದಸ್ಯುಹಂತಮಮಿತಿ ದಸ್ಯು-ಹಂತಮಮ್ ॥ ಧನಂಜಯಮಿತಿ ಧನಮ್-ಜಯಮ್ । ರಣೇರಣ ಇತಿ ರಣೇ-ರಣೇ ॥

---

| ಮಂತ್ರ | ವಿನಿಯೋಗ |
|---|---|
| ತಮು ತ್ವಾ...ಪುರಂದರಮ್ ॥ | ಅಗ್ನಿಮಂಥನದ ನಾಲ್ಕನೆಯ ಮಂತ್ರ. |
| ತಮು ತ್ವಾ...ರಣೇರಣೇ ॥ | ಅಗ್ನಿಮಂಥನದ ಐದನೆಯ ಮಂತ್ರ. |

---

✦ಅಗ್ನಿದೇವನೇ! **ಅಥರ್ವಣಃ ಪುತ್ರಃ**=ಅಥರ್ವಮುನಿಯ ಮಗನಾದ; **ದಧ್ಯಙ್ ಋಷಿಃ**=ದಧ್ಯಙ್ ಎಂಬ ಹೆಸರಿನ ಋಷಿಯು; **ವೃತ್ರಹಣಮ್**=ಶತ್ರುಗಳನ್ನು/ಪಾಪಗಳನ್ನು ನಾಶಪಡಿಸುವ; **ಪುರಂದರಮ್**=ರುದ್ರರೂಪದಿಂದ ಶತ್ರುಗಳ ಪಟ್ಟಣವನ್ನು ಭೇದಿಸಿದ; **ತಮ್ ಉ ತ್ವಾ**=ಅಂತಹ ನಿನ್ನನ್ನು; **ಈಧೇ**=ಪ್ರಜ್ವಲಿಸುವಂತೆ ಮಾಡಿದನು..

✦**ವೃಷಾ**=ಶ್ರೇಷ್ಠನಾದ; **ಪಾಥ್ಯಃ**=ಪಾಥ್ಯನೆಂಬ ಋಷಿಯು; **ದಸ್ಯುಹಂತಮಮ್**=ಕಳ್ಳರನ್ನು/ಹಗೆಗಳನ್ನು ನಾಶಪಡಿಸುವ; **ರಣೇ ರಣೇ**=ಪ್ರತಿಯೊಂದು ಯುದ್ಧದಲ್ಲಿಯೂ; **ಧನಂಜಯಮ್**=ಶತ್ರುಗಳನ್ನು ಗೆದ್ದು ಅವರ ಧನವನ್ನು ವಶಪಡಿಸಿಕೊಳ್ಳುವ; **ತಮ್ ಉ ತ್ವಾ**=ಅದೇ ನಿನ್ನನ್ನು; **ಸಮೀಧೇ**=ಚೆನ್ನಾಗಿ ಪ್ರಜ್ವಲಿಸುವಂತೆ ಮಾಡಿದನು.

ಉತ ಬ್ರುವಂತು ಜಂತವ ಉದಗ್ನಿರ್ವೃತ್ರಹಾಽಜನಿ ।

ಧನಂಜಯೋ ರಣೇರಣೇ ॥

ಉತ । ಬ್ರುವಂತು । ಜಂತವಃ । ಉದಿತಿ । ಅಗ್ನಿಃ । ವೃತ್ರಹೇತಿ ವೃತ್ರ–ಹಾ । ಅಜನಿ ॥

ಧನಂಜಯ ಇತಿ ಧನಮ್–ಜಯಃ । ರಣೇರಣ ಇತಿ ರಣೇ–ರಣೇ ॥

| ಮಂತ್ರ | ವಿನಿಯೋಗ |
|---|---|
| ಉತ ಬ್ರುವಂತು...ರಣೇರಣೇ ॥ | ಅಗ್ನಿಯು ಉತ್ಪನ್ನವಾದೊಡನೆ ಹೋತೃವು ಹೇಳಲು |

✦ವೃತ್ರಹಾ=ಶತ್ರುಗಳನ್ನು ಸಂಹರಿಸುವ; ರಣೇರಣೇ=ಪ್ರತಿಯುದ್ಧದಲ್ಲಿಯೂ; ಧನಂಜಯಃ=ಶತ್ರುಗಳನ್ನು ಗೆದ್ದು ಅವರ ಧನವನ್ನು ಸ್ವಾಧೀನಪಡಿಸಿಕೊಳ್ಳುವ; ಅಗ್ನಿಃ=ಅಗ್ನಿದೇವನು; ಉತ್ ಅಜನಿ=ಜನಿಸಿದನು ಎಂದು; ಉತ ಜಂತವಃ=ಎಲ್ಲ ಪ್ರಾಣಿಗಳೂ; ಬ್ರುವಂತು=ಪರಸ್ಪರ ಮಾತನಾಡಿಕೊಳ್ಳಲಿ.

ಸರ್ವಪ್ರೇರಕನೂ, ವಿಘ್ನನಿವಾರಣೆಯಲ್ಲಿ ಸಮರ್ಥನೂ, ಸರ್ವದಾ ರಕ್ಷಕನೂ ಆದ ಪರಮೇಶ್ವರನ ಯಾಗಕ್ಕಾಗಿ ನಾವು ಯಜ್ಞೇಶ್ವರನನ್ನು ಹೊಂದುವಂತೆ ಅನುಗ್ರಹಿಸಲಿ.

ಮಹತ್ತಾದ ದ್ಯಾವಾಭೂಮಿಗಳು ಯಾಗಕ್ಕೆ ಬೇಕಾದ ಆಜ್ಯಾದಿದ್ರವ್ಯಗಳನ್ನು ಸಂಪೂರ್ಣವಾಗಿ ತುಂಬಿಕೊಡಲಿ. ದೇವತಾನುಗ್ರಹದಿಂದ ನಾವು ಸರ್ವವಿಧವಾದ ಪೋಷಣೆಗಳನ್ನೂ ಹೊಂದುವಂತೆ ಮಾಡಲಿ.

ಶ್ರುತಿಯಲ್ಲಿ ಇನ್ನೊಂದೆಡೆ 'ಪುಷ್ಕರಪರ್ಣೇ ಹ್ಯೇನಮುಪಶ್ರಿತಮವಿಂದತ್' [ತೈ.ಸಂ.೫.೧.೪] ಎಂದು ಹೇಳಿದೆ. ತಾವರೆಯಲ್ಲಿ ಇರುವ ಅಗ್ನಿಯನ್ನು ಅಥರ್ವಮುನಿಯು ಮಂಥನದಿಂದ ಪಡೆದನು ಎಂದು ಅದರ ಅರ್ಥ. ಈ ಉಪಾಖ್ಯಾನದಂತೆ ಮಥನದಿಂದ ಲಭಿಸಿದ ನಿನ್ನನ್ನು ಮಂಥನದಿಂದ ಪಡೆಯುವೆನು. ಅಗ್ನಿದೇವನೇ! ನೀನು ಪ್ರಸನ್ನನಾಗು.

ಈ ಮಂತ್ರದಲ್ಲಿ ಅಗ್ನಿಯನ್ನು ಪುರಂದರನೆಂದು ಪ್ರಾರ್ಥಿಸಲಾಗಿದೆ. 'ತೇಷಾಮಸುರಾಣಾಮ್' ಎಂಬ ಅನುವಾಕದಲ್ಲಿ [ತೈ.ಸಂ.೬.೨] ಆ ಅಸುರರ

ಆ ಯಗ್ಂ ಹಸ್ತೇ ನ ಖಾದಿನಗ್ಂ ಶಿಶುಂ ಜಾತಂ ನ ಬಿಭ್ರತಿ ।
ವಿಶಾಮಗ್ನಿಗ್ಗ್ಂ ಸ್ವಧ್ವರಮ್ ॥ ಪ್ರ ದೇವಂ ದೇವವೀತಯೇ
ಭರತಾ ವಸುವಿತ್ತಮಮ್ । ಆ ಸ್ವೇ ಯೋನೌ ನಿಷೀದತು ॥

---

ಏತಿ । ಯಮ್ । ಹಸ್ತೇ । ನ । ಖಾದಿನಮ್ । ಶಿಶುಮ್ । ಜಾತಮ್ । ನ । ಬಿಭ್ರತಿ ॥
ವಿಶಾಮ್ । ಅಗ್ನಿಮ್ । ಸ್ವಧ್ವರಮಿತಿ ಸು-ಅಧ್ವರಮ್ ॥ ಪ್ರೇತಿ । ದೇವಮ್ ।
ದೇವವೀತಯ ಇತಿ ದೇವ-ವೀತಯೇ । ಭರತ । ವಸುವಿತ್ತಮಮಿತಿ ವಸುವಿತ್-
ತಮಮ್ ॥ ಏತಿ । ಸ್ವೇ । ಯೋನೌ । ನೀತಿ । ಸೀದತು ॥

---

| ಮಂತ್ರ | ವಿನಿಯೋಗ |
|---|---|
| ಆ ಯಮ್...ಸ್ವಧ್ವರಮ್ ॥ | ಹೋತೃವು ಹೇಳಬೇಕಾದ ಎರಡನೆಯ ಋಕ್ಕು. |
| ಪ್ರ ದೇವಮ್...ನಿಷೀದತು ॥ | ಉತ್ಪನ್ನವಾದ ಅಗ್ನಿಯನ್ನು ಮೊದಲಿನ ಅಗ್ನಿಯೊಡನೆ ಸೇರಿಸಲು ಪ್ರಥಮಮಂತ್ರ. |

---

✦**ವಿಶಾಮ್ ಸ್ವಧ್ವರಮ್**=ಪ್ರಜೆಗಳಿಗೆ ಒಳ್ಳೆಯ ಯಾಗಗಳನ್ನು ಮಾಡಲು ಸಾಧನನಾದ;/ಪ್ರಜೆಗಳನ್ನು ಹಿಂಸಿಸದಿರುವ; **ಖಾದಿನಮ್**=ಹವಿಸ್ಸುಗಳನ್ನು ಭಕ್ಷಿಸುವ; **ಯಮ್ ಅಗ್ನಿಮ್**=ಯಾವ ಅಗ್ನಿಯನ್ನು; [ಋತ್ವಿಜರು] **ಹಸ್ತೇನ**=ಕೈನಂತೆ ಇರುವ ಪಾತ್ರಾಂತರದಲ್ಲಿ; **ಜಾತಮ್ ಶಿಶುಮ್ ನ**=ಆಗ ತಾನೇ ಹುಟ್ಟಿದ ಮಗುವನ್ನು ಹೇಗೋ ಹಾಗೆ; **ಆ ಬಿಭ್ರತಿ**=ಕೈಗೆ ಎತ್ತಿಕೊಳ್ಳುತ್ತಾರೆಯೋ; [ಅಂತಹ ಅಗ್ನಿಯನ್ನು ಮುಂದೆ ನೋಡುತ್ತಿದ್ದೇವೆ.] ✦[ಎಲೈ ಋತ್ವಿಜರೇ!] **ದೇವವೀತಯೇ**=ದೇವತೆಗಳ ಹವಿರ್ಭಕ್ಷಣಕ್ಕಾಗಿ; **ವಸುವಿತ್ತಮಮ್**=ದೇವತೆಗಳ ಧನವಾದ ಹವಿಸ್ಸುಗಳನ್ನು ಚೆನ್ನಾಗಿ ತಿಳಿದಿರುವ; **ದೇವಮ್**=ಪ್ರಕಾಶಮಾನನಾದ ಅಗ್ನಿದೇವನನ್ನು; **ಪ್ರ ಭರತ**=ಚೆನ್ನಾಗಿ ಪೋಷಿಸಿರಿ/ಜ್ವಲಿಸುವಂತೆ ಮಾಡಿರಿ. [ಅಗ್ನಿಯು] **ಆ** [ಗತ್ಯ]=ಬಂದು; **ಸ್ವೇ ಯೋನೌ**=ತನ್ನದಾದ ಪೂರ್ವಾಗ್ನಿಸ್ಥಾನದಲ್ಲಿ; **ನಿಷೀದತು**=ಕುಳಿತಿರಲಿ.

ಆ[(೩೫)] ಜಾತಂ ಜಾತವೇದಸಿ ಪ್ರಿಯಗ್ಂ ಶಿಶೀತಾ-ತಿಥಿಮ್ । ಸ್ಯೋನ ಆ ಗೃಹಪತಿಮ್ ॥

---

ಏತಿ ।(೩೫)। ಜಾತಮ್ । ಜಾತವೇದಸೀತಿ ಜಾತ-ವೇದಸಿ । ಪ್ರಿಯಮ್ । ಶಿಶೀತ । ಅತಿಥಿಮ್ ॥ ಸ್ಯೋನೇ । ಏತಿ । ಗೃಹಪತಿಮಿತಿ ಗೃಹ-ಪತಿಮ್ ॥

---

| ಮಂತ್ರ | ವಿನಿಯೋಗ |
|---|---|
| ಆ ಜಾತಮ್...ಗೃಹಪತಿಮ್ ॥ | ಪೂರ್ವಾಗ್ನಿಯೊಡನೆ ನೂತನಾಗ್ನಿಯನ್ನು ಸೇರಿಸಲು ಎರಡನೆಯ ಮಂತ್ರ. |

---

+[ಋತ್ವಿಜರೇ!] ಆ ಜಾತಮ್=ಈಗ ಉತ್ಪನ್ನನಾಗಿರುವ; ಆ ಗೃಹಪತಿಮ್=ಎಲ್ಲ ಕಡೆಗಳಲ್ಲಿಯೂ ಮನೆಯನ್ನು ರಕ್ಷಿಸುವವನಾದ; ಪ್ರಿಯಮ್ ಅತಿಥಿಮ್=ಪ್ರಿಯನಾದ ಅತಿಥಿರೂಪನಾದ ಅಗ್ನಿಯನ್ನು; ಸ್ಯೋನೇ=ಸುಖಕರವಾದ; ಜಾತವೇದಸಿ= ಪೂರ್ವಾಗ್ನಿಯಲ್ಲಿ; ಶಿಶೀತ=ಮಲಗುವಂತೆ ಮಾಡಿರಿ;

---

ಮೂರುಪುರಗಳನ್ನು ಅಗ್ನಿರೂಪನಾದ ರುದ್ರನು ನಾಶ ಮಾಡಿದನೆಂಬ ಉಪಾಖ್ಯಾನವು ಬರು ತ್ತದೆ. ಹೀಗಾಗಿ ಅಗ್ನಿಯನ್ನು ಇಲ್ಲಿ ಪುರಂದರನೆಂದು ಪ್ರಾರ್ಥಿಸಲಾಗಿದೆ.

ಅಥರ್ವಮುನಿಯ ಮಗನಾದ ದಧ್ಯಙ್ ಎಂಬ ಮುನಿಯು ಅಗ್ನಿಯನ್ನು ಪ್ರಜ್ವಲಿಸು ವಂತೆ ಮಾಡಿದನು. ಅಗ್ನಿದೇವನೇ! ಅಂತಹ ನೀನು ನಮ್ಮ ಯಾಗಕ್ಕಾಗಿ ಪ್ರಜ್ವಲಿಸು.

ಪಾಥ್ಯನೆಂಬ ಮುನಿಯು ಪ್ರತಿಯುದ್ಧದಲ್ಲಿಯೂ ಶತ್ರುನಾಶಕನಾದ ಅಗ್ನಿಯನ್ನು ಚೆನ್ನಾಗಿ ಜ್ವಲಿಸುವಂತೆ ಮಾಡಿದನು. ಆ ಅಗ್ನಿಯು ನಮ್ಮ ಯಜ್ಞದಲ್ಲಿ ಜ್ವಲಿಸಲಿ.

ಅರಣಿಯ ಮಂಥನದಿಂದ ಅಗ್ನಿಯು ಉತ್ಪನ್ನನಾದೊಡನೆಯೇ ಹೋತೃವು ಹೇಳಬೇಕಾ ದುದೆಂದು ನಿಯುಕ್ತವಾದ ಎರಡು ಋಕ್‌ಗಳಲ್ಲಿ ಮೊದಲನೆಯ ಋಕ್ ಇದಾಗಿದೆ.

ವೃತ್ರಹಂತಕನೂ, ಶತ್ರುಗಳನ್ನು ಜಯಿಸಿ ಅವರ ಧನವನ್ನು ಸ್ವಾಧೀನಪಡಿಸಿ ಕೊಳ್ಳುವ ಅಗ್ನಿಯು ಜನಿಸಿದನೆಂದು ಎಲ್ಲ ಪ್ರಾಣಿಗಳೂ ಪರಸ್ಪರ ಮಾತನಾಡಿಕೊಳ್ಳಲಿ. ಆ ರೀತಿಯಲ್ಲಿ ಅಗ್ನಿಯು ಪ್ರಜ್ವಲಿಸಲಿ.

ಅಗ್ನಿನಾಽಗ್ನಿಸ್ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।

ಹವ್ಯವಾಡ್ಜುಹ್ವಾಸ್ಯಃ ॥ ತ್ವಗ್ಂ ಹ್ಯಗ್ನೇ ಅಗ್ನಿನಾ ವಿಪ್ರೋ

ವಿಪ್ರೇಣ ಸನ್ತ್ಸತಾ । ಸಖಾ ಸಖ್ಯಾ ಸಮಿಧ್ಯಸೇ ॥

---

ಅಗ್ನಿನಾ । ಅಗ್ನಿಃ । ಸಮಿತಿ । ಇಧ್ಯತೇ । ಕವಿಃ । ಗೃಹಪತಿರಿತಿ ಗೃಹ–ಪತಿಃ । ಯುವಾ ॥ ಹವ್ಯವಾಡಿತಿ ಹವ್ಯ–ವಾಟ್ । ಜುಹ್ವಾಸ್ಯ ಇತಿ ಜುಹು–ಆಸ್ಯಃ ॥ ತ್ವಮ್ । ಹಿ । ಅಗ್ನೇ । ಅಗ್ನಿನಾ । ವಿಪ್ರಃ । ವಿಪ್ರೇಣ । ಸನ್ । ಸತಾ ॥ ಸಖಾ । ಸಖ್ಯಾ । ಸಮಿಧ್ಯಸ ಇತಿ ಸಮ್–ಇಧ್ಯಸೇ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿನಾಗ್ನಿ...ಜುಹ್ವಾಸ್ಯಃ ॥ | ಹಿಂದಿನ ವಿನಿಯೋಗಕ್ಕಾಗಿ ಮೂರನೆಯ ಮಂತ್ರ. |
| ತ್ವಗ್ಂ ಹ್ಯಗ್ನೇ...ಸಮಿಧ್ಯಸೇ ॥ | ಅಗ್ನಿಯೋಜನೆಯ ನಾಲ್ಕನೆಯ ಮಂತ್ರ. |

---

✦ಕವಿಃ=ಪ್ರಾಜ್ಞನಾದ; ಗೃಹಪತಿಃ=ಗೃಹರಕ್ಷಕನಾದ; ಯುವಾ=ನಿತ್ಯತರುಣನಾದ; ಹವ್ಯವಾಟ್=ದೇವತೆಗಳಿಗೆ ಹವ್ಯವನ್ನು ಒಯ್ಯುವ; ಜುಹ್ವಾಸ್ಯಃ=ಹೋಮಸಾಧನವಾದ ಜುಹುವೇ ನಾಲಿಗೆಯಾಗಿರುವ; ಅಗ್ನಿಃ=[ಈಗ ಅರಣಿಮಂಥನದಿಂದ ಜನಿಸಿರುವ] ಅಗ್ನಿಯು; ಅಗ್ನಿನಾ=ಪೂರ್ವಾಗ್ನಿಯೊಡನೆ [ಕೂಡಿದವನಾಗಿ] ಸಮಿಧ್ಯತೇ =ಚೆನ್ನಾಗಿ ಪ್ರಜ್ವಲಿಸುವಂತೆ ಮಾಡಲ್ಪಡುತ್ತಾನೆ; ✦ಅಗ್ನೇ=ಈಗ ಮಂಥನದಿಂದ ಉತ್ಪನ್ನನಾದ ಅಗ್ನಿಯೇ! ವಿಪ್ರಃ=ಬ್ರಾಹ್ಮಣಜಾತ್ಯಭಿಮಾನಿಯಾದ; ಸನ್=ಅವಿನಾಶಿಯಾದ/ಯಾವಾಗಲೂ ಇರುವ; ಸಖಾ= ಪೂರ್ವಾಗ್ನಿಗೆ ಗೆಳೆಯನಾದ; ತ್ವಮ್=ನೀನು; ವಿಪ್ರೇಣ=ಬ್ರಾಹ್ಮಣಾಭಿಮಾನಿಯಾದ; ಸತಾ=ಯಾವಾಗಲೂ ಇರುವ; ಸಖ್ಯಾ=ಗೆಳೆಯನಾದ; ಅಗ್ನಿನಾ=ಮೊದಲಿನ ಅಗ್ನಿಯೊಡನೆ; ಸಮಿಧ್ಯಸೇ ಹಿ=ಚೆನ್ನಾಗಿ ಪ್ರಜ್ವಲಿತನಾಗುವೆಯಷ್ಟೆ.

## ತಂ ಮರ್ಜಯಂತ ಸುಕ್ರತುಂ ಪುರೋಯಾವಾನ ಮಾಜಿಷು । ಸ್ವೇಷು ಕ್ಷಯೇಷು ವಾಜಿನಮ್ ॥

---

ತಮ್ । ಮರ್ಜಯಂತ । ಸುಕ್ರತುಮಿತಿ ಸು-ಕ್ರತುಮ್ । ಪುರೋಯಾವಾನಮಿತಿ ಪುರಃ-ಯಾವಾನಮ್ । ಆಜಿಷು ॥ ಸ್ವೇಷು । ಕ್ಷಯೇಷು । ವಾಜಿನಮ್ ॥

---

| ಮಂತ್ರ | ವಿನಿಯೋಗ |
|---|---|
| ತಮ್...ವಾಜಿನಮ್ ॥ | ಅಗ್ನಿಯೋಜನೆಯ ಐದನೆಯ ಮಂತ್ರ. |

---

✦[ಋತ್ವಿಜರೇ!] ಸುಕ್ರತುಮ್=ಒಳ್ಳೆಯ ಕರ್ಮಗಳ/ಯಜ್ಞಗಳ ನಿಷ್ಪಾದಕನಾದ; ಆಜಿಷು=ಯುದ್ಧಗಳಲ್ಲಿ; ಪುರೋಯಾವಾನಮ್=ಮುಂದೆ ಹೋಗುವ; ಸ್ವೇಷು ಕ್ಷಯೇಷು=ತನ್ನದಾಗಿರುವ ಯಜಮಾನರ ಮನೆಗಳಲ್ಲಿ; ವಾಜಿನಮ್=ಅನ್ನದ ಸಮೃದ್ಧಿ ಯನ್ನು ಉಂಟುಮಾಡುವವನಾದ; ತಮ್=ಆ ಅಗ್ನಿಯನ್ನು; ಮರ್ಜಯಂತ=ಶೋಧಿಸಿರಿ.

---

ಪ್ರಜೆಗಳಿಗೆ ಒಳ್ಳೆಯ ಯಾಗಗಳನ್ನು ಅನುಷ್ಠಿಸಲು ಸಾಧನನಾದ, ಹವಿಸ್ಸನ್ನು ಸ್ವೀಕರಿಸುವ ಅಗ್ನಿಯನ್ನು ಆಗ ತಾನೆ ಜನಿಸಿದ ಮಗುವನ್ನು ಕೈಗೆತ್ತಿಕೊಳ್ಳುವಂತೆ ಋತ್ವಿಜರು ಪಾತ್ರಾಂತರದಲ್ಲಿ ಕೈಗೆತ್ತಿಕೊಳ್ಳಲಿ.

ಉತ್ಪನ್ನನಾದ ಅಗ್ನಿಯನ್ನು ಮೊದಲಿನ ಅಗ್ನಿಯೊಡನೆ ಸೇರಿಸುವಾಗ ಹೋತೃವು ಆರು ಮಂತ್ರಗಳನ್ನು ಹೇಳಬೇಕು. ಅದರಲ್ಲಿ ಮೊದಲಿನ ಮಂತ್ರವಿದು.

ಋತ್ವಿಜರೇ! ದೇವತೆಗಳ ಹವಿರ್ಭಕ್ಷಣಕ್ಕಾಗಿ ಪ್ರಕಾಶಮಾನನಾಗಿರುವ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿರಿ. ಅಗ್ನಿಯು ತನ್ನದಾದ ಪೂರ್ವಾಗ್ನಿಸ್ಥಾನದಲ್ಲಿ ಕುಳಿತಿರಲಿ.

ಮನೆಗೆ ಬಂದಿರುವ ಪ್ರಿಯನಾದ ಅತಿಥಿಯನ್ನು ಪೂಜಿಸಿ, ಆತನು ಸುಖವಾಗಿ ಮಲಗಿ ಕೊಳ್ಳುವಂತೆ ಉಪಚರಿಸುವರಷ್ಟೆ. ಹಾಗೆಯೇ ಋತ್ವಿಜರಾದ ನೀವು ಈಗಲೇ ಜನಿಸಿ ರುವ ಅಗ್ನಿಯನ್ನು ಪೂರ್ವಾಗ್ನಿಸ್ಥಾನದಲ್ಲಿ ಸುಖವಾಗಿ ಇರುವಂತೆ ಮಾಡಿರಿ.

ಎಲೈ! ಋತ್ವಿಜರೇ! ಪ್ರಾಜ್ಞನೂ, ಗೃಹರಕ್ಷಕನೂ, ನಿತ್ಯತರುಣನೂ, ದೇವತೆಗಳಿಗೆ ಹವ್ಯಗಳನ್ನು ಒಯ್ಯುವ ಅಗ್ನಿಯು ಪೂರ್ವಾಗ್ನಿಯೊಡನೆ ಕೂಡಿದವನಾಗಿ ಚೆನ್ನಾಗಿ ಜ್ವಲಿಸುವಂತೆ ಮಾಡಿರಿ.

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಸ್ಸಚಂತೇ ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥೩೬–11॥

[ವೋಢವೇ ದೂತಸ್ತ್ವಂ ತಮು ಸೀದ ತ್ವಾ ಯತ್ರ ಚತ್ವಾರಿ ಚ ॥]

---

ಯಜ್ಞೇನ । ಯಜ್ಞಮ್ । ಅಯಜಂತ । ದೇವಾಃ । ತಾನಿ । ಧರ್ಮಾಣಿ । ಪ್ರಥಮಾನಿ । ಆಸನ್ನ್ ॥ ತೇ । ಹ । ನಾಕಮ್ । ಮಹಿಮಾನಃ । ಸಚಂತೇ । ಯತ್ರ । ಪೂರ್ವೇ । ಸಾಧ್ಯಾಃ । ಸಂತಿ । ದೇವಾಃ ॥೩೬॥

---

| ಮಂತ್ರ | ವಿನಿಯೋಗ |
|---|---|
| ಯಜ್ಞೇನ...ದೇವಾಃ ॥ | ಅಗ್ನಿಯೋಜನೆಯ ಆರನೆಯ ಮಂತ್ರ. |

---

+ದೇವಾಃ=ದೇವತ್ವವನ್ನು ಬಯಸುವ ಯಜಮಾನರು; ಯಜ್ಞೇನ=ಯಜ್ಞಸಾಧಕನಾದ ನೂತನಾಗ್ನಿಯೊಡನೆ; ಯಜ್ಞಮ್=ಯಜ್ಞಸಾಧಕವಾದ ಪೂರ್ವಾಗ್ನಿಯನ್ನು; ಅಯಜಂತ=ಪೂಜಿಸಿದರು; ತಾನಿ ಧರ್ಮಾಣಿ=ಆ ಅಗ್ನಿದ್ವಯಸಾಧ್ಯಕರ್ಮಗಳು; ಪ್ರಥಮಾನಿ ಆಸನ್=ಮುಖ್ಯವಾದವುಗಳಾದವು; ಯತ್ರ=ಯಾವ ಸ್ವರ್ಗದಲ್ಲಿ; ಪೂರ್ವೇ ಸಾಧ್ಯಾಃ ದೇವಾಃ=ಹಿಂದಿನ ಸತ್ಕರ್ಮಫಲವಾಗಿ ದೇವತೆಗಳಾಗಿರುವ ಯಜಮಾನರು; ಸಂತಿ=ಇದ್ದಾರೆಯೋ; ತೇ ಹ ಮಹಿಮಾನಃ=ಆ ಮಹಿಮಾವಂತರಾದ ಯಜಮಾನರು; ನಾಕಮ್=ಆ ಸ್ವರ್ಗವನ್ನು; ಸಚಂತೇ=ಸೇವಿಸುವರಷ್ಟೆ/ಹೊಂದಿ ಸುಖಿಗಳಾಗಿರುವರಷ್ಟೆ.

---

ಬ್ರಾಹ್ಮಣಜಾತ್ಯಭಿಮಾನಿಯಾದ ಅಗ್ನಿಯೇ! ನೀನು ಬ್ರಾಹ್ಮಣಾಭಿಮಾನಿಯಾದ ಅಗ್ನಿಯೊಡನೆ ಸೇರಿ ಚೆನ್ನಾಗಿ ಜ್ವಲಿಸುವೆಯಷ್ಟೆ.

ಪ್ರಜಾಪತಿಯು ಮುಖದಿಂದ ಅಗ್ನಿಯನ್ನೂ, ಬ್ರಾಹ್ಮಣನನ್ನೂ ಸೃಷ್ಟಿಸಿರುವನೆಂದು ವರ್ಣನೆಯಿದೆ. [ತೈ.ಸಂ.೭.೧] ಆದುದರಿಂದ ಇಲ್ಲಿ ಅಗ್ನಿಯನ್ನು ವಿಪ್ರನೆಂದು ಹೇಳಿದೆ.

ಇದು ಹೊಸದಾಗಿ ಉತ್ಪನ್ನನಾದ ಅಗ್ನಿಯ ಪ್ರಶಂಸೆ.

ಆ ಅಗ್ನಿಯು ಯಜ್ಞಾದಿಸತ್ಕಾರ್ಯಸಂಪಾದಕನು. ಯುದ್ಧಗಳಲ್ಲಿ ಅಗ್ರಗಾಮಿಯಾಗಿ ಗೆಲುವನ್ನು ಸಂಪಾದಿಸಿಕೊಡುವವನು. ಮನೆಗಳಲ್ಲಿ ಅನ್ನಸಂಪತ್ತನ್ನು ಕೊಡುವವನು. ಈ ಅಗ್ನಿಯನ್ನು ಶೋಧಿಸಿರಿ.

ದೇವತ್ವವನ್ನು ಬಯಸುವ ಯಜಮಾನರು ಈ ಎರಡು ಅಗ್ನಿಗಳಿಂದ ಯಜ್ಞಾದಿ ಮುಖ್ಯಕರ್ಮಗಳನ್ನು ಮಾಡಿದರು. ಈಗ ಇಂತಹ ಕಾರ್ಯಗಳನ್ನು ಮಾಡಿ ಮಹಿಮಾವಂತರಾದ ಯಜಮಾನರೂ ಸತ್ಕರ್ಮದ ಫಲವಾಗಿ ದೇವತೆಗಳಾದ ಹಿಂದಿನ ಯಜಮಾನರಂತೆಯೇ ಸ್ವರ್ಗವನ್ನು ಪಡೆದು ದೇವತೆಗಳಾಗುತ್ತಾರೆ.

---

ಪೂರ್ಣ ಋಷಯೋಽಗ್ನಿನಾ ಯೇ ದೇವಾಸ್ಸೂರ್ಯೋ ಮಾ ಸಂ ತ್ವಾ ನಹ್ಯಾಮಿ ವಷಟ್ಕಾರಸ್ಸಖದಿರ ಉಪಯಾಮಗೃಹೀತೋಽಸಿ ಯಾಂ ವೈ ತ್ವೇ ಕ್ರತುಂ ಪ್ರ ದೇವಮೇಕಾದಶ ॥ ೧೧ ॥

ಪೂರ್ಣಾ ಸಹಜಾನ್ತ್ವಾಗ್ನೇ ಪ್ರಾಣೈರೇವ ಷಟ್ತ್ರಿಗ್ಂಶತ್ ॥ ೩೬ ॥

ಪೂರ್ಣಾ ಸಂತಿ ದೇವಾಃ ॥

ಹರಿಃ ಓಮ್ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಇತಿ ತೃತೀಯಕಾಂಡೇ ಪಂಚಮಃ ಪ್ರಶ್ನಃ ॥

॥ ಶ್ರೀ ಕೃಷ್ಣಯಜುರ್ವೇದಸಂಹಿತಾಯಾಂ ತೃತೀಯಕಾಂಡಃ ಸಮಾಪ್ತಃ ॥

# ವಿನಿಯೋಗಸಂಗ್ರಹ

ಅಥ ಪಾಶುಕಹೌತ್ರಸ್ಯ ಶೇಷ ಔತ್ತರವೇದಿಕೇ।
ಅಗ್ನಿಪ್ರಣಯನೇ ಹ್ಯಷ್ಟೌ 1-8ಪ್ರದೇವಮಿತಿ ಮಂತ್ರಕಾಃ ॥
ಅಥಾಗ್ನಿಮಂಥನೇ ಪಂಚ9-13 ಜಾತೇ ವಹ್ನಾವೃತ14-15ದ್ವಯಮ್।
ಪ್ರ16-21 ದೇಽಗ್ನ್ಯೋರ್ಮೇಲನೇ ಷಟ್ ಸ್ಯುರ್ಮಂತ್ರಾ ಅತ್ರೈಕವಿಂಶತಿಃ ॥

## ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–21

---

## ಅನುವಾಕದ ವಿಶೇಷ ವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸಿನ ಹೆಸರು |
|---|---|
| ಪ್ರದೇವಂ...ದಾನುಷಕ್ ॥ | ಗಾಯತ್ರೀ |
| ಅಯಮು...ತ್ಮನಾ ॥ | ಅನುಷ್ಟುಪ್ |
| ಅಯಮಗ್ನಿ...ಕೃತಃ ॥ | ಅನುಷ್ಟುಪ್ |
| ಇಡಾಯಾ...ವೋಢವೇ ॥ | ಅನುಷ್ಟುಪ್ |
| ಅಗ್ನೇ ವಿಶ್ವೇಭಿ...ಸಾಧು ॥ | ತ್ರಿಷ್ಟುಪ್ |
| ಸೀದ...ವಯೋಧಾಃ ॥ | ತ್ರಿಷ್ಟುಪ್ |
| ನಿ ಹೋತಾ...ಅಗ್ನಿಃ ॥ | ತ್ರಿಷ್ಟುಪ್ |

| | |
|---|---|
| ತ್ವಂ ದೂತ...ಗೋಪಾಃ ॥ | ತ್ರಿಷ್ಟುಪ್ |
| ಅಭಿ ತ್ವಾ...ಮೀಮಹೇ ॥ | ಗಾಯತ್ರೀ |
| ಮಹೀ ದ್ಯೌಃ...ಭರೀಮಭಿಃ ॥ | ಗಾಯತ್ರೀ |
| ತ್ವಾಮಗ್ನೇ...ವಾಘತಃ ॥ | ಗಾಯತ್ರೀ |
| ತಮು ತ್ವಾ...ಪುರಂದರಮ್ ॥ | ಗಾಯತ್ರೀ |
| ತಮು ತ್ವಾ...ರಣೇರಣೇ ॥ | ಗಾಯತ್ರೀ |
| ಉತ ಬ್ರುವಂತು...ರಣೇರಣೇ ॥ | ಗಾಯತ್ರೀ |
| ಆ ಯಗ್ಂ...ಸ್ವಧ್ವರಮ್ ॥ | ಗಾಯತ್ರೀ |
| ಪ್ರ ದೇವಂ...ನಿಷೀದತು ॥ | ಗಾಯತ್ರೀ |
| ಆ ಜಾತಂ... ಗೃಹಪತಿಮ್ ॥ | ಗಾಯತ್ರೀ |
| ಅಗ್ನಿನಾ...ಜುಹ್ವಾಸ್ಯಃ ॥ | ಗಾಯತ್ರೀ |
| ತ್ವಗ್ಗ್ಂ ಹ್ಯಗ್ನೇ...ಸಮಿಧ್ಯಸೇ ॥ | ಗಾಯತ್ರೀ |
| ತಂ ಮರ್ಜಯಂತ...ವಾಜಿನಮ್ ॥ | ಗಾಯತ್ರೀ |
| ಯಜ್ಞೇನ...ದೇವಾಃ ॥ | ತ್ರಿಷ್ಟುಪ್ |

# ತೈತ್ತಿರೀಯ ಸಂಹಿತಾ

## ಚತುರ್ಥಕಾಂಡಃ ಪ್ರಥಮಃ ಪ್ರಶ್ನಃ

### ಪ್ರಥಮೋಽನುವಾಕಃ

#### ಪೀಠಿಕಾ

ತೃತೀಯಕಾಂಡೇ ಸೋಮಸ್ಯ ಶೇಷಃ ಪ್ರಾಯೇಣ ವರ್ಣಿತಃ ।
ಚತುರ್ಥೇ ತ್ವಗ್ನಿಚಿತ್ಯಂಗಮಂತ್ರಾಣಾಂ ಪಾಠ ಈರ್ಯತೇ ॥
ಅವಾಂತರವಿಶೇಷಾಸ್ತು ವಿನಿಯೋಗೇ ಪ್ರದರ್ಶಿತಾಃ ।
ಚತುರ್ಥಕಾಂಡಮಗ್ನ್ಯಾಖ್ಯಂ ಸಪ್ತಭಿಃ ಪಾಠಕೈರ್ಯುತಮ್ ॥
ಉಖಾಸಂಭರಣೇ ಮಂತ್ರಾಃ ಪ್ರಥಮೇ ಪಾಠಕೇ ಶ್ರುತಾಃ ।
ಏಕಾದಶಾನುವಾಕಾಃ ಸ್ಯುಸ್ತದರ್ಥಾಃ ಸ್ಯುಃ ಕ್ರಮಾದಮೀ ॥
ಅಭ್ರ್ಯಾದಾನಂ ಮೃದಾಕ್ರಾಂತಿಃ ಖನನಂ ಹರಣಂ ತಥಾ ।
ಉಖಾನಿರ್ಮಾಣಸಂಸ್ಕಾರೌ ಸಾಮಿಧೇನ್ಯಸ್ತಥಾಽಽಪ್ರಿಯಃ ।
ಅಗ್ನ್ಯುತ್ಪಾದೋ ಧಾರಣಂ ಚ ಯಾಜ್ಯಾ ಇತ್ಯನುವಾಕಗಾಃ ॥

---

ಅಗ್ನಿ ಎಂಬ ಹೆಸರಿನ ಈ ನಾಲ್ಕನೆಯ ಕಾಂಡದಲ್ಲಿ ಏಳು ಪ್ರಪಾಠಕಗಳು ಇವೆ. ಹಿಂದಿನ ಮೂರನೆಯ ಕಾಂಡದಲ್ಲಿ ಹೆಚ್ಚಾಗಿ ಸೋಮಯಾಗದ ಶೇಷವು ಹೇಳಲ್ಪಟ್ಟಿದೆ. ಈ ಕಾಂಡದಲ್ಲಿ ಅಗ್ನಿಚಿತಿಯ ಅಂಗವಾದ ಮಂತ್ರಗಳೂ, ಅವಾಂತರ ವಿಶೇಷಗಳು ವಿನಿಯೋಗಸಂಗ್ರಹದಲ್ಲಿಯೂ ಹೇಳಲ್ಪಡುತ್ತವೆ. ಪ್ರಥಮಪ್ರಶ್ನದ ಹನ್ನೊಂದು ಅನುವಾಕಗಳ ವಿಷಯಸಂಗ್ರಹವು ಮೇಲೆ ಹೇಳಲ್ಪಟ್ಟಿದೆ.

ಮೊದಲನೆಯ ಅನುವಾಕದಲ್ಲಿ ಹೋಮಮಂತ್ರಗಳು ಹೇಳಲ್ಪಟ್ಟಿವೆ.

ಯುಂಜಾನಃ ಪ್ರಥಮಂ ಮನಸ್ತತ್ವಾಯ ಸವಿತಾ ಧಿಯಃ ।
ಅಗ್ನಿಂ ಜ್ಯೋತಿರ್ನಿಚಾಯ್ಯ ಪೃಥಿವ್ಯಾ ಅಧ್ಯಾಽಭರತ್ ॥

---

ಯುಂಜಾನಃ । ಪ್ರಥಮಮ್ । ಮನಃ । ತತ್ವಾಯ । ಸವಿತಾ । ಧಿಯಃ । ಅಗ್ನಿಮ್ । ಜ್ಯೋತಿಃ । ನಿಚಾಯ್ಯೇತಿ ನಿ-ಚಾಯ್ಯ । ಪೃಥಿವ್ಯಾಃ । ಅಧಿ । ಏತಿ । ಅಭರತ್ ॥

---

| ಮಂತ್ರ | ವಿನಿಯೋಗ |
| --- | --- |
| ಯುಂಜಾನಃ...ಆ ಭರತ್ ॥ | ಯಜುಸ್ಸೇ ಎಂಟನೆಯದಾಗಿರುವ ಸಾವಿತ್ರಹೋಮದ ಎಂಟು ಮಂತ್ರಗಳಲ್ಲಿ ಮೊದಲನೆಯ ಮಂತ್ರ. ಸಾವಿತ್ರಹೋಮವನ್ನು ಅನುಷ್ಠಿಸಲು. |

---

✦ಸವಿತಾ=ಸರ್ವಪ್ರೇರಕನಾದ ಪರಮೇಶ್ವರನು; ಪ್ರಥಮಮ್=ಮೊದಲು; ಮನಃ ಯುಂಜಾನಃ=[ಅಗ್ನಿಚಯನದ ವಿಷಯವಾಗಿ] ಮನಸ್ಸನ್ನು ಇಡುವವನಾಗಿ; ಧಿಯಃ= ಇಷ್ಟಕಾದಿವಿಷಯಗಳಾದ ಜ್ಞಾನಗಳನ್ನು; ತತ್ವಾಯ=ವಿಸ್ತರಿಸಿ; ಅಗ್ನಿಮ್ ಜ್ಯೋತಿಃ =[ಚಯನ ಮಾಡುವ] ಅಗ್ನಿಯನ್ನು [ಸಫಲವಾದ ಕರ್ಮಗಳಿಗೆ] ಪ್ರಕಾಶಕನನ್ನಾಗಿ; ನಿಚಾಯ್ಯ=ನಿಶ್ಚಯಿಸಿ; ಪೃಥಿವ್ಯಾಃ ಅಧಿ=ಭೂಮಿಯ ಮೇಲೆ; ಆ ಭರತ್=ತಂದನು.

---

ಪರಮೇಶ್ವರನು ಸರ್ವಪ್ರೇರಕನು. ಮೊದಲು ಆತನು ಅಗ್ನಿಚಯನದಲ್ಲಿ ಮನಸ್ಸನ್ನು ಇಟ್ಟನು. ಬಳಿಕ ಇಷ್ಟಕಾದಿವಿಷಯಕಗಳಾದ ಜ್ಞಾನಗಳನ್ನು ವಿಸ್ತರಿಸಿದನು. ಅನಂತರ ಚಯನ ಮಾಡುವ ಅಗ್ನಿಯನ್ನು ಕರ್ಮಫಲಪ್ರಕಾಶಕನೆಂದು ನಿಶ್ಚಯಿಸಿ ಉಖಾರೂಪ ವಾದ ಭೂಮಿಯಲ್ಲಿ ಇಡಲು ನಿಶ್ಚಯಿಸಿದನು. ಆ ಅಗ್ನಿಚಯನದ ಅಂಗವಾದ ಸಾವಿತ್ರಹೋಮವನ್ನು ಶ್ರುತಿಯು ಇಲ್ಲಿ ಹೇಳುತ್ತಿದೆ.

ಯುಕ್ತ್ವಾಯ ಮನಸಾ ದೇವಾನ್ಥ್ಸುವರ್ಯತೋ

ಧಿಯಾ ದಿವಮ್ । ಬೃಹಜ್ಜ್ಯೋತಿಃ ಕರಿಷ್ಯತಃ ಸವಿತಾ

ಪ್ರ ಸುವಾತಿ ತಾನ್ ।

---

ಯುಕ್ತ್ವಾಯ । ಮನಸಾ । ದೇವಾನ್ । ಸುವಃ । ಯತಃ । ಧಿಯಾ । ದಿವಮ್ ॥

ಬೃಹತ್ । ಜ್ಯೋತಿಃ । ಕರಿಷ್ಯತಃ । ಸವಿತಾ । ಪ್ರೇತಿ । ಸುವಾತಿ । ತಾನ್ ॥

---

| ಮಂತ್ರ | ವಿನಿಯೋಗ |
|---|---|
| ಯುಕ್ತ್ವಾಯ...ಸುವಾತಿ ತಾನ್ ॥ | ಸಾವಿತ್ರಹೋಮದ ಎರಡನೆಯ ಮಂತ್ರ. |

✦**ಸವಿತಾ**=ಪ್ರೇರಕನಾದ ಪರಮೇಶ್ವರನು; **ಮನಸಾ**=ಮನಸ್ಸಿನಿಂದ; **ದೇವಾನ್**= ಕ್ರೀಡಾಪರವಾಗಿ ಚಂಚಲವಾಗಿ ಇರುವ; **ಸುವಃ ಯತಃ**=ಸ್ವರ್ಗವನ್ನು ಹೊಂದಲು ಪ್ರಯತ್ನಿಸುತ್ತಿರುವ; **ಧಿಯಾ**=[ಇಷ್ಟಕಾದಿವಿಷಯಕವಾದ]ಜ್ಞಾನದಿಂದ; **ಬೃಹತ್ ಜ್ಯೋತಿಃ ದಿವಮ್ ಕರಿಷ್ಯತಃ**=ಪ್ರೌಢವಾದ, ಚಯನ ಮಾಡುತ್ತಿರುವ ಅಗ್ನಿಯನ್ನು ಪ್ರಕಾಶ ಮಾಡಲು ಉದ್ಯತವಾದ [ಇಂದ್ರಿಯಗಳನ್ನು]; **ಯುಕ್ತ್ವಾಯ**=ನಿಯಂತ್ರಿಸಿ [ಹತೋಟಿಯಲ್ಲಿಟ್ಟು] **ತಾನ್**=ಆ ಇಂದ್ರಿಯಗಳನ್ನು; **ಪ್ರಸುವಾತಿ**=ಚೆನ್ನಾಗಿ ಪ್ರೇರಿಸುತ್ತಾನೆ.

---

**ಪ್ರೇರಕನಾದ ಪರಮೇಶ್ವರನು ಮನಸ್ಸಿನಿಂದ ಚಂಚಲವಾದ ಇಂದ್ರಿಯಗಳನ್ನು ನಿಯಂತ್ರಿಸುತ್ತಾನೆ. ಇಷ್ಟಕಾದಿವಿಷಯಕವಾದ ಜ್ಞಾನದಿಂದ ಅಗ್ನಿಚಯನವು ಸ್ಪಷ್ಟವಾಗಿ ತಿಳಿಯುವಂತೆ ಮಾಡುತ್ತಾನೆ. ಸ್ವರ್ಗವನ್ನು ಹೊಂದಲು ಯತ್ನಿಸುವಂತೆಯೂ ಮಾಡುತ್ತಾನೆ. ಹೀಗೆ ಇಂದ್ರಿಯಗಳನ್ನು ಪ್ರೇರಿಸುತ್ತಾನೆ. ಅವನು ಈ ಹೋಮದಿಂದ ತೃಪ್ತನಾಗಲಿ.**

ಯುಕ್ತೇನ ಮನಸಾ ವಯಂ ದೇವಸ್ಯ ಸವಿತುಃ ಸವೇ ।
ಸುವರ್ಗೇಯಾಯ ಶಕ್ತ್ಯೈ ೩ ।  ಯುಂಜತೇ ಮನ ಉತ
ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ ॥

---

ಯುಕ್ತೇನ । ಮನಸಾ । ವಯಮ್ । ದೇವಸ್ಯ । ಸವಿತುಃ । ಸವೇ ॥
ಸುವರ್ಗೇಯಾಯೇತಿ ಸುವಃ-ಗೇಯಾಯ । ಶಕ್ತ್ಯೈ ೩ ॥ ಯುಂಜತೇ । ಮನಃ । ಉತ ।
ಯುಂಜತೇ । ಧಿಯಃ । ವಿಪ್ರಾಃ । ವಿಪ್ರಸ್ಯ । ಬೃಹತಃ । ವಿಪಶ್ಚಿತಃ ॥

---

| ಮಂತ್ರ | ವಿನಿಯೋಗ |
|---|---|
| ಯುಕ್ತೇನ...ಶಕ್ತ್ಯೈ ೩ ॥ | ಸಾವಿತ್ರಹೋಮದ ಮೂರನೆಯ ಮಂತ್ರ. |
| ಯುಂಜತೇ...ಪರಿಷ್ಟುತಿಃ ॥ | ಸಾವಿತ್ರಹೋಮದ ನಾಲ್ಕನೆಯ ಮಂತ್ರ. |

---

+ಸವಿತುಃ ದೇವಸ್ಯ ಸವೇ=ಪ್ರೇರಕಪರಮೇಶ್ವರನ ಪ್ರೇರಣೆಯಾಗಲಾಗಿ; ವಯಮ್ =ನಾವು; ಯುಕ್ತೇನ ಮನಸಾ=ಇಂದ್ರಿಯಗಳ ದೆಸೆಯಿಂದ ನಿಯಂತ್ರಿತವಾದ ಮನಸ್ಸಿನಿಂದ; ಸುವರ್ಗೇಯಾಯ=ಸ್ವರ್ಗದಲ್ಲಿ ಹೊಗಳಲ್ಪಡುವ [ಅಗ್ನಿಚಯನವನ್ನು ಹೊಂದುವುದಕ್ಕೆ]; ಶಕ್ತ್ಯೈ ೩=ಶಕ್ತರಾಗಿ ಆಗೋಣ. +ಬೃಹತಃ=ಅಗ್ನಿಚಯನದಿಂದ ಅಭಿವೃದ್ಧನಾದ; ವಿಪಶ್ಚಿತಃ=ಯಾಗಪ್ರಯೋಗವನ್ನು ತಿಳಿದಿರುವ; ವಿಪ್ರಸ್ಯ= ಬ್ರಾಹ್ಮಣನಾದ ಯಜಮಾನನ; ವಿಪ್ರಾಃ=ಅಭಿಜ್ಞರಾದ ಬ್ರಾಹ್ಮಣರಾದ; ಹೋತ್ರಾಃ= ಹೋಮ/ಯಾಗತತ್ಪರರಾದ ಋತ್ವಿಜರು; ಮನಃ=ಮನಸ್ಸನ್ನು; ಯುಂಜತೇ= ಯಜ್ಞದಲ್ಲಿಯೇ ಸೇರಿರುವಂತೆ ಮಾಡುತ್ತಾರೆ; ಉತ=ಮತ್ತು; ಧಿಯಃ ಯುಂಜತೇ =ಜ್ಞಾನಗಳನ್ನು ಸಂಪಾದಿಸುತ್ತಾರೆ.

ವಿ ಹೋತ್ರಾ ದಧೇ ವಯುನಾವಿದೇಕ

[ಇತ್(೧)ಮಹೀ]ಇನ್ಮಹೀ ದೇವಸ್ಯ ಸವಿತುಃ ಪರಿಷ್ಟುತಿಃ ॥

ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರ್ವಿಶ್ಲೋಕಾ

ಯಂತಿ ಪಥ್ಯೇವ ಸೂರಾಃ ।

---

ವೀತಿ । ಹೋತ್ರಾಃ । ದಧೇ । ವಯುನಾವಿದಿತಿ ವಯುನ-ವಿತ್ । ಏಕಃ । ಇತ್ ।(೧)। ಮಹೀ । ದೇವಸ್ಯ । ಸವಿತುಃ । ಪರಿಷ್ಟುತಿರಿತಿ ಪರಿ-ಸ್ತುತಿಃ ॥ ಯುಜೇ । ವಾಮ್ । ಬ್ರಹ್ಮ । ಪೂರ್ವ್ಯಮ್ । ನಮೋಭಿರಿತಿ ನಮಃ-ಭಿಃ । ವೀತಿ । ಶ್ಲೋಕಾಃ । ಯಂತಿ । ಪಥ್ಯಾ । ಇವ । ಸೂರಾಃ ॥

---

| ಮಂತ್ರ | ವಿನಿಯೋಗ |
|---|---|
| ಯುಜೇ ವಾಂ...ತಸ್ಥುಃ ॥ | ಸಾವಿತ್ರಹೋಮದ ಐದನೆಯ ಮಂತ್ರ. |

---

ವಯುನಾವಿತ್=ಋತ್ವಿಗ್ಯಜಮಾನರ ಅಭಿಪ್ರಾಯವನ್ನು ತಿಳಿದಿರುವ; ಏಕಃ ಇತ್ ಸವಿತಾ=ಸವಿತೃದೇವನೊಬ್ಬನೇ; ವಿ ದಧೇ=ಇದೆಲ್ಲವನ್ನೂ ಮಾಡಿರುತ್ತಾನೆ; ದೇವಸ್ಯ ಸವಿತುಃ=ಸವಿತೃದೇವನ; ಪರಿಷ್ಟುತಿಃ=[ಸರ್ವವೇದಗಳಲ್ಲಿಯೂ] ಕೇಳಿಬರುತ್ತಿರುವ ಸ್ತುತಿಯು; ಮಹೀ=ದೊಡ್ಡದಾಗಿದೆ. +[ಯಜಮಾನದಂಪತಿಗಳೇ!] ವಾಮ್= ನಿಮಗೋಸ್ಕರವಾಗಿ; ಪೂರ್ವ್ಯಮ್=ಹಿಂದಿನ ಮಹರ್ಷಿಗಳಿಂದ ಅನುಷ್ಠಿಸಲ್ಪಟ್ಟ, ಬ್ರಹ್ಮ =ವಿಸ್ತಾರವಾಗಿರುವ; [ಅಗ್ನಿಚಯನವನ್ನು] ನಮೋಭಿಃ ಯುಜೇ=ನಮಸ್ಕಾರ ಪೂರ್ವಕ ವಾದ ಇಷ್ಟಕೋಪಧಾನಾದಿಗಳಿಂದ ಸಂಪಾದಿಸುತ್ತಿರುವೆನು;[ಬಳಿಕ] ಪಥ್ಯಾ ಸೂರಾಃ ಇವ=ದೇವಮಾರ್ಗದಲ್ಲಿ ಸೂರ್ಯರಶ್ಮಿಗಳು ಪ್ರಸರಿಸುವಂತೆ; ಶ್ಲೋಕಾಃ=ಯಜ ಮಾನನ ಕೀರ್ತಿಗಳು; ವಿ ಯಂತಿ=ವಿವಿಧವಾಗಿ ಭೂಮಿಯಲ್ಲಿ ಪ್ರಸರಿಸುತ್ತವೆ;

ಶೃಣ್ವಂತಿ ವಿಶ್ವೇ ಅಮೃತಸ್ಯ ಪುತ್ರಾ ಆ ಯೇ ಧಾಮಾನಿ ದಿವ್ಯಾನಿ ತಸ್ಥುಃ ॥ ಯಸ್ಯ ಪ್ರಯಾಣಮನ್ವನ್ಯ ಇದ್ಯಯುರ್ದೇವಾ ದೇವಸ್ಯ ಮಹಿಮಾನಮರ್ಚತಃ ।

---

ಶೃಣ್ವಂತಿ । ವಿಶ್ವೇ । ಅಮೃತಸ್ಯ । ಪುತ್ರಾಃ । ಏತಿ । ಯೇ । ಧಾಮಾನಿ । ದಿವ್ಯಾನಿ । ತಸ್ಥುಃ ॥ ಯಸ್ಯ । ಪ್ರಯಾಣಮಿತಿ ಪ್ರ-ಯಾನಮ್ । ಅನ್ವಿತಿ । ಅನ್ಯೇ । ಇತ್ । ಯಯುಃ । ದೇವಾಃ । ದೇವಸ್ಯ । ಮಹಿಮಾನಮ್ । ಅರ್ಚತಃ ॥

---

| ಮಂತ್ರ | ವಿನಿಯೋಗ |
|---|---|
| ಯಸ್ಯ ಪ್ರಯಾಣಂ...ಮಹಿತ್ವನಾ ॥ | ಸಾವಿತ್ರಹೋಮದ ಆರನೆಯ ಮಂತ್ರ. |

---

ಯೇ=ಯಾವ ದೇವತೆಗಳು; ದಿವ್ಯಾನಿ ಧಾಮಾನಿ=ದೇವಲೋಕವನ್ನು; ಆ ತಸ್ಥುಃ= ಹೊಂದಿರುವವರೋ; [ತೇ=ಆ]ಅಮೃತಸ್ಯ=ಪ್ರಜಾಪತಿದೇವನ; ವಿಶ್ವೇ ಪುತ್ರಾಃ= ಮಕ್ಕಳಾದ ದೇವತೆಗಳೆಲ್ಲರೂ; ಶೃಣ್ವಂತಿ=ಯಜಮಾನನ ಕೀರ್ತಿಯನ್ನು ಕೇಳುತ್ತಾರೆ. +ಯಸ್ಯ ಪ್ರಯಾಣಮ್=ಯಾವ ಸವಿತೃದೇವನ ಪ್ರವೃತ್ತಿಯನ್ನು; ದೇವಸ್ಯ ಮಹಿಮಾನಮ್=ಆ ಸವಿತೃದೇವನ ಮಹಿಮೆಯನ್ನು; ಅರ್ಚತಃ=ಪೂಜಿಸುತ್ತಾ; ಅನ್ಯೇ ದೇವಾಃ ಇತ್=ಬೇರೆಯ ದೇವತೆಗಳೂ; ಅನು ಯಯುಃ=ಅನುಸರಿಸಿ ಹೋಗುತ್ತಾರೆಯೋ;

---

ಪ್ರೇರಕನಾದ ಪರಮೇಶ್ವರನ ಪ್ರೇರಣೆಯಿಂದ ನಾವು ಅಗ್ನಿಚಯನವನ್ನು ಅನುಷ್ಠಿಸಲು ಶಕ್ತರಾಗೋಣ. ಈ ಹೋಮದಿಂದ ಆ ಸವಿತೃವು ತೃಪ್ತನಾಗಲಿ. 'ಯಂ ತು ರಕ್ಷಿತುಮ್ [ದೇವಾಃ] ಇಚ್ಛಂತಿ ಬುಧ್ಯಾ ಸಂಯೋಜಯಂತಿ ತಮ್' ಎಂಬಂತೆ ದೇವತೆಗಳ ಪ್ರೇರಣೆಯಿಂದ ಮಾನವನು ಒಳ್ಳೆಯ ಕಾರ್ಯಗಳಲ್ಲಿ ಪ್ರವೃತ್ತನಾಗಿ ಶ್ರೇಯಸ್ಸನ್ನು ಹೊಂದುತ್ತಾನೆ.

ಯಃ ಪಾರ್ಥಿವಾನಿ ವಿಮಮೇ ಸ ಏತಶೋ ರಜಾಗ್ಂಸಿ ದೇವಃ ಸವಿತಾ ಮಹಿತ್ವನಾ । ದೇವ ಸವಿತಃ ಪ್ರ ಸುವ ಯಜ್ಞಂ ಪ್ರ ಸುವ [೨] ಯಜ್ಞಪತಿಂ ಭಗಾಯ ದಿವ್ಯೋ ಗಂಧರ್ವಃ ।

ಯಃ । ಪಾರ್ಥಿವಾನಿ । ವಿಮಮ ಇತಿ-ವಿ ಮಮೇ । ಸಃ । ಏತಶಃ । ರಜಾಗ್ಂಸಿ । ದೇವಃ । ಸವಿತಾ । ಮಹಿತ್ವನೇತಿ ಮಹಿ-ತ್ವನಾ ॥ ದೇವ । ಸವಿತಃ । ಪ್ರೇತಿ । ಸುವ । ಯಜ್ಞಮ್ । ಪ್ರೇತಿ । ಸುವ ।(೨)। ಯಜ್ಞಪತಿಮಿತಿ ಯಜ್ಞ-ಪತಿಮ್ । ಭಗಾಯ । ದಿವ್ಯಃ । ಗಂಧರ್ವಃ ।

| ಮಂತ್ರ | ವಿನಿಯೋಗ |
|---|---|
| ದೇವ ಸವಿತಃ...ನಃ ॥ | ಸಾವಿತ್ರಹೋಮದ ಏಳನೆಯ ಮಂತ್ರ. |

ಯಃ=ಯಾವ ಸವಿತೃದೇವನು; ಪಾರ್ಥಿವಾನಿ ರಜಾಗ್ಂಸಿ=ಭೂಮಿಯ ಪರಮಾಣುಗಳನ್ನು/ಭೂಮಿಯ ವಸ್ತುಗಳನ್ನು; ವಿಮಮೇ=ಎಣಿಸಿ ನಿರ್ಮಿಸಿದನೋ; ಸಃ ದೇವಃ ಸವಿತಾ=ಆ ಸವಿತೃದೇವನು; ಮಹಿತ್ವನಾ=ತನ್ನ ಮಹಿಮೆಯಿಂದ; ಏತಶಃ=ಎಲ್ಲವನ್ನೂ ವ್ಯಾಪಿಸುವವನಾಗಿ [ಏತಿ=ಹೋಗುತ್ತಾನೆ] ✦ದೇವ ಸವಿತಃ =ಸವಿತೃದೇವನೇ! ಭಗಾಯ=ಒಳ್ಳೆಯ ಭಾಗ್ಯಕ್ಕಾಗಿ [ಐಶ್ವರ್ಯಕ್ಕಾಗಿ]; ಯಜ್ಞಮ್ ಪ್ರಸುವ=ಯಜ್ಞವನ್ನು ಪ್ರೇರಿಸು; ಯಜ್ಞಪತಿಮ್ ಪ್ರಸುವ=ಯಜಮಾನನನ್ನು ಪ್ರೇರೇಪಿಸು; ದಿವ್ಯಃ=ದೇವಲೋಕದಲ್ಲಿ ಇರುವ; ಕೇತಪೂಃ=ಬೇರೆಯವರ ಮನಸ್ಸನ್ನು ತಿಳಿದು ಶುದ್ಧಗೊಳಿಸುವ ಸಾಮರ್ಥ್ಯವುಳ್ಳ; ಗಂಧರ್ವಃ=ಗಂಧರ್ವನು;

ಬ್ರಾಹ್ಮಣನಾದ, ಪ್ರಯೋಗವನ್ನು ತಿಳಿದಿರುವ ಯಜಮಾನನ ಋತ್ವಿಜರು ಬ್ರಾಹ್ಮಣರು; ಯಜ್ಞಶೀಲರು; ಅವರು ತಮ್ಮ ಮನಸ್ಸನ್ನು ನಿಗ್ರಹಿಸಿ ಯಜ್ಞಕಾರ್ಯದಲ್ಲಿಯೇ ತತ್ಪರ

ಕೇತಪೂಃ ಕೇತಂ ನಃ ಪುನಾತು ವಾಚಸ್ಪತಿರ್ವಾಚಮದ್ಯ ಸ್ವದಾತಿ ನಃ ॥ ಇಮಂ ನೋ ದೇವ ಸವಿತರ್ಯಜ್ಞಂ ಪ್ರ ಸುವ ದೇವಾಯುವಗ್ಂ ಸಖಿವಿದಗ್ಂ ಸತ್ರಾಜಿತಂ ಧನಜಿತಗ್ಂ ಸುವರ್ಜಿತಮ್ ॥

---

ಕೇತಪೂರಿತಿ ಕೇತ–ಪೂಃ । ಕೇತಮ್ । ನಃ । ಪುನಾತು । ವಾಚಃ । ಪತಿಃ । ವಾಚಮ್ । ಅದ್ಯ । ಸ್ವದಾತಿ । ನಃ ॥ ಇಮಮ್ । ನಃ । ದೇವ । ಸವಿತಃ । ಯಜ್ಞಮ್ । ಪ್ರೇತಿ । ಸುವ । ದೇವಾಯುವಮಿತಿ ದೇವ–ಯುವಮ್ । ಸಖಿವಿದಮಿತಿ ಸಖಿ–ವಿದಮ್ । ಸತ್ರಾಜಿತಮಿತಿ ಸತ್ರ–ಜಿತಮ್ । ಧನಜಿತಮಿತಿ ಧನ–ಜಿತಮ್ । ಸುವರ್ಜಿತಮಿತಿ ಸುವಃ–ಜಿತಮ್ ।

---

| ಮಂತ್ರ | ವಿನಿಯೋಗ |
|---|---|
| ಇಮಂ ನಃ...ಸುವರ್ಜಿತಮ್ ॥ | ಸಾವಿತ್ರಹೋಮದ ಎಂಟನೆಯ ಮಂತ್ರವಾದ ಯಜುರ್ಮಂತ್ರ. |

---

ನಃ ಕೇತಮ್=ನಮ್ಮ ಮನಸ್ಸಿನ ಜ್ಞಾನವನ್ನು; ಪುನಾತು=ಭ್ರಾಂತಿರಹಿತವನ್ನಾಗಿ ಶೋಧಿಸಲಿ; ವಾಚಸ್ಪತಿಃ=ಬೃಹಸ್ಪತಿಯು; ಅದ್ಯ=ಈಗ; ನಃ ವಾಚಮ್=ನಮ್ಮ ಮಾತನ್ನು; ಸ್ವದಾತಿ=ಮಧುರವನ್ನಾಗಿ ಮಾಡಲಿ.✦ ದೇವ ಸವಿತಃ=ಸವಿತೃದೇವನೇ! ದೇವಾಯುವಮ್=ದೇವತೆಗಳೊಡನೆ ಸಂಬಂಧಿಸಿರುವ; ಸಖಿವಿದಮ್=ತನ್ನನ್ನು ಅನುಷ್ಠಿಸುತ್ತಿರುವ ಯಜಮಾನನನ್ನು ಸ್ನೇಹಿತನೆಂದು ತಿಳಿದಿರುವ; ಸತ್ರಾಜಿತಮ್=ದ್ವಾದಶಾಹಾದಿಸತ್ರಗಳನ್ನು ಸಂಪೂರ್ಣವಾಗುವಂತೆ/ಸಫಲವಾಗುವಂತೆ ಮಾಡುವ; ಧನಜಿತಮ್=ಫಲರೂಪವಾಗಿ ಧನವನ್ನು ಸಂಪಾದಿಸಿಕೊಡುವ; ಸುವರ್ಜಿತಮ್=ಫಲವಾಗಿ ಸ್ವರ್ಗವನ್ನೂ ಕೊಡುವ; ನಃ=ನಮ್ಮ; ಇಮಮ್ ಯಜ್ಞಮ್=ಈ ಯಜ್ಞವನ್ನು; ಪ್ರಸುವ=ಪ್ರೇರಿಸು.

**ಋಚಾ ಸ್ತೋಮಗ್ಂ ಸಮರ್ಧಯ ಗಾಯತ್ರೇಣ ರಥಂತರಮ್ । ಬೃಹದ್ಗಾಯತ್ರವರ್ತನಿ ॥**

---

ಋಚಾ । ಸ್ತೋಮಮ್ । ಸಮಿತಿ । ಅರ್ಧಯ । ಗಾಯತ್ರೇಣ । ರಥಂತರಮಿತಿ ರಥಮ್-ತರಮ್ । ಬೃಹತ್ । ಗಾಯತ್ರವರ್ತನೀತಿ ಗಾಯತ್ರ-ವರ್ತನಿ ।

---

| ಮಂತ್ರ | ವಿನಿಯೋಗ |
| --- | --- |
| ಋಚಾ...ಗಾಯತ್ರವರ್ತನಿ ॥ | ಚತುರ್ಗೃಹೀತಹೋಮವನ್ನು ಮಾಡಲು. |

---

✦[ಎಲೈ! ಅಗ್ನಿದೇವನೇ]ಋಚಾ=[ಸ್ತೋತ್ರಸಾಧನವಾದ ಸಾಮಕ್ಕೆ ಆಧಾರವಾದ] ಋಕ್ಕಿನಿಂದ; **ಸ್ತೋಮಮ್**=ಋಗಾವೃತ್ತಿರೂಪವಾದ ಸ್ತೋಮವನ್ನು; **ಸಮರ್ಧಯ** =ಸಮೃದ್ಧವನ್ನಾಗಿ ಮಾಡು; **ಗಾಯತ್ರೇಣ**=ಗಾಯತ್ರಸಾಮದಿಂದ; **ರಥಂತರಮ್**= ರಥಂತರಸ್ತೋತ್ರವನ್ನು; **ಸಮರ್ಧಯ**=ಸಮೃದ್ಧಿಗೊಳಿಸು; **ಗಾಯತ್ರವರ್ತನಿ**= ಗಾಯತ್ರಸಾಮವೇ ಮಾರ್ಗವಾಗಿರುವ; **ಬೃಹತ್**=ಬೃಹತ್ಸಾಮವನ್ನೂ; **ಸಮರ್ಧಯ** =ಸಮೃದ್ಧಿಗೊಳಿಸು.

---

**ವಾಗುವಂತೆ ಮಾಡುತ್ತಾರೆ. ಬೇಕಾದ ಜ್ಞಾನವನ್ನು ಸಂಪಾದಿಸುತ್ತಾರೆ. ಸವಿತೃ ದೇವನ ಅನುಗ್ರಹದಿಂದ ಇದೆಲ್ಲವೂ ಸಾಧ್ಯವಾಗುತ್ತದೆ. ಸವಿತೃವು ಸರ್ವಶಕ್ತನು. ಅವನ ಮಹಿಮೆಯು ಸರ್ವವೇದಗಳಲ್ಲಿಯೂ ಪ್ರಸಿದ್ಧವಾಗಿದೆ. ಆದುದರಿಂದ ಇದು ಆಶ್ಚರ್ಯ ಕರವಲ್ಲ. ಅಂತಹ ಸವಿತೃದೇವನು ಹೋಮದಿಂದ ಪ್ರಸನ್ನನಾಗಲಿ.**

**ಯಜಮಾನದಂಪತಿಗಳೇ! ಪೂರ್ವಮುನಿಗಳು ಮಾಡಿರುವ ಇಷ್ಟಕೋಪಧಾನಾದಿ ಗಳಿಂದ ಯುಕ್ತವಾದ ಮಹತ್ತಾದ ಅಗ್ನಿಚಯನವನ್ನು ನಿಮಗಾಗಿ ಮಾಡುತ್ತೇನೆ. ಇದರಿಂದ ಅಂತರಿಕ್ಷದಲ್ಲಿ ಸೂರ್ಯನ ರಶ್ಮಿಗಳು ಪ್ರಸರಿಸುವಂತೆ ಯಜಮಾನನ ಕೀರ್ತಿಗಳು ಭೂಮಿಯಲ್ಲಿ ಪ್ರಸರಿಸಲಿ. ಹಾಗೆಯೇ ತಮ್ಮ ಸತ್ಕರ್ಮಗಳಿಂದ ದೇವ ಲೋಕವನ್ನು ಹೊಂದಿರುವ ಪ್ರಜಾಪತಿಯ ಮಕ್ಕಳಾದ ದೇವತೆಗಳು ಸ್ವರ್ಗಲೋಕ ದಲ್ಲಿಯೂ ಯಜಮಾನನ ಕೀರ್ತಿಯನ್ನು ಕೇಳಲಿ. ಇಂತಹ ಸ್ಥಿತಿಯು ಸವಿತೃದೇವನ ಅನುಗ್ರಹದಿಂದ ಲಭಿಸಲಿ.**

ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ

ಪೂಷ್ಣೋ ಹಸ್ತಾಭ್ಯಾಂ ಗಾಯತ್ರೇಣ

ಛಂದಸಾಽಽದದೇಽಂಗಿರಸ್ವ-

---

ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಅಶ್ವಿನೋಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಪೂಷ್ಣಃ । ಹಸ್ತಾಭ್ಯಾಮ್ । ಗಾಯತ್ರೇಣ । ಛಂದಸಾ । ಏತಿ । ದದೇ । ಅಂಗಿರಸ್ವತ್ ।

---

| ಮಂತ್ರ | ವಿನಿಯೋಗ |
| --- | --- |
| ದೇವಸ್ಯ...ಅಂಗಿರಸ್ವತ್ ॥ | ಅಭ್ರಿಯನ್ನು ತೆಗೆದುಕೊಳ್ಳುವ ನಾಲ್ಕು ಮಂತ್ರಗಳಲ್ಲಿ ಮೊದಲನೆಯದು. |

---

✦[ಹೇ! ಅಭ್ರಿಯೇ]ಸವಿತುಃ ದೇವಸ್ಯ=ಸವಿತೃದೇವನ; ಪ್ರಸವೇ=ಅನುಮತಿಯಾಗಲಾಗಿ; ಅಶ್ವಿನೋಃ ಬಾಹುಭ್ಯಾಮ್=ಅಶ್ವಿನೀದೇವತೆಗಳ ತೋಳುಗಳಿಂದ; ಪೂಷ್ಣಃ ಹಸ್ತಾಭ್ಯಾಮ್=ಪೂಷದೇವನ ಕೈಗಳಿಂದ; ಗಾಯತ್ರೇಣ ಛಂದಸಾ=ಗಾಯತ್ರೀ ಛಂದಸ್ಸಿನ ಸಹಾಯದಿಂದ; ಅಂಗಿರಸ್ವತ್=ಅಂಗಿರಸ ಮುನಿಗಳಂತೆ; ತ್ವಾ=ನಿನ್ನನ್ನು; ಆದದೇ=ತೆಗೆದುಕೊಳ್ಳುತ್ತೇನೆ.

---

ದೇವತೆಗಳು ಸವಿತೃದೇವನ ಮಹಿಮೆಯನ್ನು ಪೂಜಿಸುತ್ತಾ ಸವಿತೃದೇವನ ದಾರಿಯನ್ನೇ ಅನುಸರಿಸುತ್ತಾರೆ. ಸವಿತೃದೇವನು ಭೂಮಿಯ ಪರಮಾಣುಗಳನ್ನೂ ನಿರ್ಮಿಸಿರುತ್ತಾನೆ. ಸವಿತೃದೇವನು ತನ್ನ ಮಹಿಮೆಯಿಂದ ಎಲ್ಲವನ್ನೂ ವ್ಯಾಪಿಸುತ್ತಾ ಮುಂದೆ ಹೋಗುತ್ತಾನೆ. ಅಂತಹ ಸವಿತೃವು ಈ ಹೋಮದಿಂದ ಪ್ರಸನ್ನನಾಗಲಿ.

ಸವಿತೃದೇವನೇ! ಯಜಮಾನನ ಸೌಭಾಗ್ಯಕ್ಕಾಗಿ ಯಜ್ಞವನ್ನೂ ಯಜಮಾನನನ್ನೂ

ದಭ್ರಿರಸಿ ನಾರಿ[ನಾರಿಃ(೩)ಅಸಿ ಪೃಥಿವ್ಯಾಃ]ರಸಿ ಪೃಥಿವ್ಯಾಃ ಸಧಸ್ಥಾದಗ್ನಿಂ ಪುರೀಷ್ಯಮಂಗಿರಸ್ವದಾಭರ ತ್ರೈಷ್ಟುಭೇನ ತ್ವಾ ಛಂದಸಾಽಽದದೇಽಂಗಿರಸ್ವ-

---

ಅಭ್ರಿಃ । ಅಸಿ । ನಾರಿಃ (೩) ಅಸಿ । ಪೃಥಿವ್ಯಾಃ । ಸಧಸ್ಥಾದಿತಿ ಸಧ-ಸ್ಥಾತ್ । ಅಗ್ನಿಮ್ । ಪುರೀಷ್ಯಮ್ । ಅಂಗಿರಸ್ವತ್ । ಏತಿ । ಭರ । ತ್ರೈಷ್ಟುಭೇನ । ತ್ವಾ । ಛಂದಸಾ । ಏತಿ । ದದೇ । ಅಂಗಿರಸ್ವತ್ ।

---

| ಮಂತ್ರ | ವಿನಿಯೋಗ |
|---|---|
| ಅಭ್ರಿರಸಿ...ಅಂಗಿರಸ್ವತ್ ॥ | ಅಭ್ರಿಯನ್ನು ತೆಗೆದುಕೊಳ್ಳುವ ಎರಡನೆಯ ಮಂತ್ರ. |

---

✢[ಎಲೈ! ಅಭ್ರಿಯೇ! ನೀನು] ಅಭ್ರಿಃ ಅಸಿ=ಅಗೆಯುವ ಸಾಧನವಾಗಿರುವೆ; ನಾರಿಃ ಅಸಿ=ಶತ್ರುಗಳಿಲ್ಲದವಳೂ ಆಗಿದ್ದೀಯೆ; ಪೃಥಿವ್ಯಾಃ ಸಧಸ್ಥಾತ್=ಭೂಮಿಯ ತೊಡೆಯಿಂದ/ಮೇಲ್ಭಾಗದಿಂದ; ಪುರೀಷ್ಯಮ್ ಅಗ್ನಿಮ್=ಅಗ್ನಿಧಾರಣೆಯ ಉಖೆಯನ್ನು ಮಾಡಲು ಬೇಕಾದ ಮೃತ್ತಿಕೆಯನ್ನು [ಅಗ್ನಿಯನ್ನು]; ಅಂಗಿರಸ್ವತ್=ಅಂಗಿರಸ ಮುನಿಗಳಂತೆ; ಆ ಭರ=ತೆಗೆದು ತಾ; ತ್ವಾ=ನಿನ್ನನ್ನು; ತ್ರೈಷ್ಟುಭೇನ ಛಂದಸಾ= ತ್ರಿಷ್ಟುಪ್ ಛಂದಸ್ಸಿನ ಸಹಾಯದಿಂದ; ಅಂಗಿರಸ್ವತ್=ಅಂಗಿರಸಮುನಿಗಳಂತೆ; ಆ ದದೇ=ತೆಗೆದುಕೊಳ್ಳುತ್ತೇನೆ.

---

ಚೆನ್ನಾಗಿ ಪ್ರೇರಿಸು. ದೇವಲೋಕದಲ್ಲಿ ಇರುವ, ಬೇರೆಯವರ ಜ್ಞಾನವನ್ನು ತಿಳಿದು ಶುದ್ಧಗೊಳಿಸಬಲ್ಲ ಒಬ್ಬ ಗಂಧರ್ವನು ನಮ್ಮ ಭ್ರಾಂತ್ಯಾದಿಗಳನ್ನು ಪರಿಹರಿಸಿ ನಮ್ಮ ಜ್ಞಾನವನ್ನು ಶುದ್ಧಿಗೊಳಿಸಲಿ. ಬೃಹಸ್ಪತಿಯು ನಮ್ಮ ಮಾತನ್ನು ಮಧುರಗೊಳಿಸಲಿ.

ದ್ಬಭ್ರಿರಸಿ ನಾರಿರಸಿ ತ್ವಯಾ ವಯಗ್ಂ ಸಧಸ್ಥ ಆಽಗ್ನಿಗ್ಂ

ಶಕೇಮ ಖನಿತುಂ ಪುರೀಷ್ಯಂ ಜಾಗತೇನ ತ್ವಾ

ಛಂದಸಾಽಽದದೇಽಂಗಿರಸ್ವ–

---

ಬಭ್ರಿಃ । ಅಸಿ । ನಾರಿಃ । ಅಸಿ । ತ್ವಯಾ । ವಯಮ್ । ಸಧಸ್ಥ ಇತಿ ಸಧ–ಸ್ಥೇ । ಏತಿ ।

ಅಗ್ನಿಮ್ । ಶಕೇಮ । ಖನಿತುಮ್ । ಪುರೀಷ್ಯಮ್ । ಜಾಗತೇನ । ತ್ವಾ । ಛಂದಸಾ ।

ಏತಿ । ದದೇ । ಅಂಗಿರಸ್ವತ್ ।

---

| ಮಂತ್ರ | ವಿನಿಯೋಗ |
|---|---|
| ಬಭ್ರಿರಸಿ...ಅಂಗಿರಸ್ವತ್ ॥ | ಅಭ್ರಿಯನ್ನು ತೆಗೆದುಕೊಳ್ಳುವ ಎರಡನೆಯ ಮಂತ್ರ. |

---

✦[ಎಲೈ! ಅಭ್ರಿಯೇ! ನೀನು]ಬಭ್ರಿಃ ಅಸಿ=ಮೃತ್ಸಂಪಾದನದಲ್ಲಿ ಕುಶಲಳಾಗಿದ್ದೀಯೆ; ನಾರಿಃ ಅಸಿ=ಶತ್ರುಗಳಿಲ್ಲದವಳೂ ಆಗಿದ್ದೀಯೆ; ತ್ವಯಾ=ನಿನ್ನಿಂದ; ವಯಮ್= ನಾವು; ಸಧಸ್ಥೇ=ಭೂಮಿಯ ಮೇಲ್ಭಾಗದಲ್ಲಿ; ಅಗ್ನಿಮ್ ಪುರೀಷ್ಯಮ್=ಉಖಾ ಸಾಧನವಾದ ಮೃತ್ತಿಕೆಯನ್ನು; ಆ ಖನಿತುಮ್=ಸುತ್ತಲೂ ಅಗೆಯುವುದಕ್ಕೆ; ಶಕೇಮ=ಶಕ್ತರಾಗುವೆವು; ತ್ವಾ=ನಿನ್ನನ್ನು [ಅಭ್ರಿಯನ್ನು] ಜಾಗತೇನ ಛಂದಸಾ= ಜಗತೀಛಂದಸ್ಸಿನ ಸಹಾಯದಿಂದ; ಅಂಗಿರಸ್ವತ್=ಅಂಗಿರಸರಂತೆ; ಆ ದದೇ= ತೆಗೆದುಕೊಳ್ಳುತ್ತೇನೆ.

---

ಸವಿತೃದೇವನೇ! ದೇವತೆಗಳೊಡನೆ ಸಂಬಂಧಿಸಿರುವ ಯಜಮಾನನನ್ನು ಮಿತ್ರನೆಂದು ತಿಳಿದಿರುವ ಸ್ವರ್ಗ–ಧನಾದಿಗಳನ್ನು ನೀಡುವ ನಮ್ಮ ಈ ಯಜ್ಞವನ್ನು ಪ್ರೇರಿಸು. ಈ ಹೋಮದಿಂದ ಸವಿತೃದೇವನು ತೃಪ್ತನಾಗಲಿ.

ಈ ಎಂಟು ಮಂತ್ರಗಳಿಂದ ಆಜ್ಯವನ್ನು ಹೋಮ ಮಾಡಬೇಕು.

ದ್ಧಸ್ತ ಆಧಾಯ ಸವಿತಾ ಬಿಭ್ರದಭ್ರಿಗ್ಂ ಹಿರಣ್ಯಯೀಮ್ । ತಯಾ ಜ್ಯೋತಿರಜಸ್ರಮಿದಗ್ನಿಂ ಖಾತ್ವೀ ನ ಆ ಭರಾಽಽನುಷ್ಟುಭೇನ ತ್ವಾ ಛಂದಸಾಽಽದದೇಂಗಿರಸ್ವತ್ [೪-1]

[ಇದ್ವ್ಯಜ್ಞಂ ಪ್ರಸುವ ನಾರಿರಾನುಷ್ಟುಭೇನ ತ್ವಾ ಛಂದಸಾ ತ್ರೀಣಿ ಚ ॥]

---

ಹಸ್ತೇ । ಆಧಾಯೇತ್ಯಾ-ಧಾಯ । ಸವಿತಾ । ಬಿಭ್ರತ್ । ಅಭ್ರಿಮ್ । ಹಿರಣ್ಯಯೀಮ್ ॥ ತಯಾ । ಜ್ಯೋತಿಃ । ಅಜಸ್ರಮ್ । ಇತ್ । ಅಗ್ನಿಮ್ । ಖಾತ್ವೀ । ನಃ । ಏತಿ । ಭರ । ಆನುಷ್ಟುಭೇನೇತ್ಯಾನು-ಸ್ತುಭೇನ । ತ್ವಾ । ಛಂದಸಾ । ಏತಿ । ದದೇ । ಅಂಗಿರಸ್ವತ್ ॥

---

| ಮಂತ್ರ | ವಿನಿಯೋಗ |
|---|---|
| ಹಸ್ತ...ಅಂಗಿರಸ್ವತ್ ॥ | ಅಭ್ರ್ಯಾದಾನದ ನಾಲ್ಕನೆಯ ಮಂತ್ರ. |

---

✦ಸವಿತಾ=ಪ್ರೇರಕನಾದ ಪರಮೇಶ್ವರನು; [ಮೊದಲು] ಹಿರಣ್ಯಯೀಮ್ ಅಭ್ರಿಮ್ =ಚಿನ್ನದ ಅಭ್ರಿಯನ್ನು; ಹಸ್ತೇ ಆಧಾಯ=ಕೈಯಲ್ಲಿಟ್ಟು; ಬಿಭ್ರತ್=ಪೋಷಿಸಿದನು; ತಯಾ=ಆ ಅಭ್ರಿಯಿಂದ ಕೂಡಿ; ಅಜಸ್ರಮ್ ಇತ್=ಯಾವಾಗಲೂ; ಜ್ಯೋತಿಃ=ಪ್ರಕಾಶ ಮಾನವಾದ; ಅಗ್ನಿಮ್=ಉಖಾಸಾಧನವಾದ ಮೃತ್ತಿಕೆಯನ್ನು; ಖಾತ್ವೀ=ಅಗೆದು; ನಃ=ನಮಗೆ [ಹೇ ಅಭ್ರಿಯೇ] ಆ ಭರ=ತಂದು ಕೊಡು; ತ್ವಾ=ನಿನ್ನನ್ನು [ಅಭ್ರಿಯನ್ನು]; ಆನುಷ್ಟುಭೇನ ಛಂದಸಾ=ಅನುಷ್ಟುಪ್ ಛಂದಸ್ಸಿನ ಸಹಾಯದಿಂದ; ಅಂಗಿರಸ್ವತ್= ಅಂಗಿರಸಮುನಿಗಳಂತೆ; ಆದದೇ=ತೆಗೆದುಕೊಳ್ಳುತ್ತೇನೆ.

---

ರಥಂತರ, ಬೃಹತ್ ಮುಂತಾದ ಸ್ತೋತ್ರಗಳಿಗೆ ಸಾಮಯುಕ್ತವಾದ ಋಕ್ಕುಗಳೇ ಆಧಾರ. ಆದರಿಂದ ತ್ರಿವೃದಾದಿಸ್ತೋಮಯುಕ್ತವಾದ ಸ್ತೋತ್ರಗಳು ನಿಷ್ಪನ್ನವಾಗುತ್ತವೆ.

ಹೇ! ಅಗ್ನಿದೇವನೇ! ನೀನು ಅವುಗಳನ್ನು ಸಮೃದ್ಧಿಗೊಳಿಸು.

ಅಭ್ರಿಯನ್ನು ತೆಗೆದುಕೊಳ್ಳಲು ನಾಲ್ಕು ಮಂತ್ರಗಳು ವಿನಿಯುಕ್ತವಾಗಿವೆ. ಅಭ್ರಿಯೆಂದರೆ ಮಣ್ಣನ್ನು ಅಗೆಯುವ ಸಾಧನ. ಅಗ್ನಿಯನ್ನು ಇಡಲು ಮಣ್ಣಿನ ಪಾತ್ರೆಯು ಬೇಕು. ಆ ಪಾತ್ರೆಗಾಗಿ ಮಣ್ಣನ್ನು ಅಗೆದು ತರಬೇಕು. ಮಣ್ಣನ್ನು ಅಗೆಯುವುದಕ್ಕಾಗಿ ಬೇಕಾದ ಅಭ್ರಿಯನ್ನು ತೆಗೆದುಕೊಳ್ಳಲು ಬೇಕಾದ ಮಂತ್ರಗಳು ಇವು.

ಎಲೈ! ಅಭ್ರಿಯೇ! ಸವಿತೃದೇವನ ಅನುಮತಿಯನ್ನು ಪಡೆದು, ದೇವವೈದ್ಯರಾದ ಅಶ್ವಿನೀದೇವತೆಗಳ ಬಾಹುಗಳಿಂದಲೂ, ಪೂಷದೇವನ ಕೈಗಳಿಂದಲೂ ಗಾಯತ್ರೀ ಛಂದಸ್ಸಿನ ಬೆಂಬಲದಿಂದಲೂ ಮಣ್ಣನ್ನು ಅಗೆಯಲು ಸಾಧನವಾದ ನಿನ್ನನ್ನು ತೆಗೆದು ಕೊಳ್ಳುತ್ತೇನೆ.

ಎಲೈ! ಅಭ್ರಿಯೇ! ನೀನು ಅಂಗಿರಸ ಮುನಿಗಳಂತೆ ಅಗ್ನಿಯನ್ನು [ಮೃತ್ತಿಕೆಯನ್ನು] ತೆಗೆದು ತಾ. ನಿನ್ನನ್ನು ತೆಗೆದುಕೊಳ್ಳುತ್ತೇನೆ.

ಈ ಚಯನಪ್ರಕರಣದಲ್ಲಿ ಚಯನವನ್ನೂ, ಉಖೆಯ ನಿರ್ಮಾಣಕ್ಕೆ ಬೇಕಾದ ಮಣ್ಣನ್ನೂ, ಅಗ್ನಿಯೆಂದು ಆರೋಪಿಸಿ ಹೇಳಲಾಗಿದೆ. ಈ ಅಗ್ನಿಯೊಡನೆಯ ಅಭೇದದ ಆರೋಪವು ಈ ಅಗ್ನಿಚಯನಪ್ರಕರಣದಲ್ಲಿ ಮುಂದುವರೆದಿದೆ.

ಹೇ! ಅಭ್ರಿಯೇ! ನೀನು ಮೃತ್ತಿಕಾಸಂಪಾದನಕುಶಲಳಾಗಿದ್ದೀಯೆ. ನಿನ್ನಿಂದ ನಾವು ಭೂಮಿಯನ್ನು ಉಖಾಸಾಧನವಾದ ಮೃತ್ತಿಕೆಗಾಗಿ ಅಗೆಯಲು ಶಕ್ತರಾಗುವೆವು. ನಿನ್ನನ್ನು ಜಗತೀಛಂದಸ್ಸಿನ ಸಹಾಯದಿಂದ ಅಂಗಿರಸಮುನಿಗಳಂತೆ ತೆಗೆದು ಕೊಳ್ಳುವೆನು.

'ಚತುರ್ಭಿರಭ್ರಿಮಾದತ್ತೇ' ಎಂಬ ವಿನಿಯೋಗವಚನದಂತೆ ಇದು ನಾಲ್ಕನೆಯ ಮಂತ್ರ. ಪರಮೇಶ್ವರನು ಮೊದಲು ಬಂಗಾರದ ಅಭ್ರಿಯನ್ನು ಕೈಯಲ್ಲಿಟ್ಟು ಘೋಷಿಸಿದನು.

ಹೇ! ಅಭ್ರಿಯೇ! ನೀನು ಉಖಾಸಾಧನವಾದ ಮೃತ್ತಿಕೆಯನ್ನು ತಂದು ಕೊಡು. ನಿನ್ನನ್ನು ಅನುಷ್ಟುಪ್ ಛಂದಸ್ಸಿನ ಸಹಾಯದಿಂದ ತೆಗೆದುಕೊಳ್ಳುತ್ತೇನೆ.

---

## ವಿನಿಯೋಗಸಂಗ್ರಹ

1-8 ಯುಂಜಾಪ್ಸ್ವಕೇನ್ನೈಕಹೋಮ ಋಚಾ ಸ್ತೋಮಂ ಪುನರ್ಹುತಿಃ ।

10-13ದೇವೇತ್ಯಭ್ರಿಂ ಚತುಷ್ಕೇಣಾऽऽದತ್ತೇ ಮಂತ್ರಾಸ್ತ್ರಯೋದಶ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–13

# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

೧) ಅಭ್ರ್ಯಾದಾನದ ಮಂತ್ರಗಳ ಸಮುಚ್ಚಯವೇ? ವಿಕಲ್ಪವೇ?

[ಜೈ.ಸೂ.೧೨.೩.೧೫]

'ಚತುರ್ಭಿರಭ್ರಿಮಾದತ್ತೇ' ಎಂಬ ವಚನವಿರುವುದರಿಂದ ಅಭ್ರ್ಯಾದಾನದ ಈ ಮಂತ್ರಗಳಿಗೆ ವಿಕಲ್ಪದಿಂದ ವಿನಿಯೋಗವೇ? ಅಥವಾ ಮಂತ್ರಸಮುಚ್ಚಯಕ್ಕೆ ವಿನಿಯೋಗವೇ? ಇದು ಇಲ್ಲಿನ ಸಂಶಯ.

'ದೇವಸ್ಯ' ಎಂದು ಆರಂಭವಾಗುವ ಪ್ರತಿ ಮಂತ್ರಗಳಲ್ಲಿಯೂ 'ಆದದೇ' ಎಂಬ ಬೇರೆ ಬೇರೆ ಕ್ರಿಯಾಪದಗಳಿರುವುದರಿಂದ ನ್ಯಾಯದಿಂದ ವಿಕಲ್ಪವಾಗುತ್ತದೆ ಎಂದು ಇಲ್ಲಿನ ಪೂರ್ವಪಕ್ಷ.

'ಚತುರ್ಭಿರಭ್ರಿಮಾದತ್ತೇ' ಎಂಬ ವಾಕ್ಯದಲ್ಲಿ ಚತುಃಸಂಖ್ಯೆಗೆ ಕರಣತ್ವವು ಇರುವುದರಿಂದ ಆ ವಾಚನಿಕವಾದ ಸಂಖ್ಯೆಯು ನ್ಯಾಯಪ್ರಾಪ್ತವಾದ ಸಂಖ್ಯೆಯನ್ನು ಬಾಧಿಸುತ್ತದೆಯಾದುದರಿಂದ ಮಂತ್ರಸಮುಚ್ಚಯಕ್ಕೇ ವಿನಿಯೋಗ ಎಂಬುದು ಇಲ್ಲಿನ ಸಿದ್ಧಾಂತ.

ജ❀ഢജ❀ഢ

## ॥ ದ್ವಿತೀಯೋಽನುವಾಕಃ ॥

ಇಮಾಮಗೃಭ್ಣನ್ರಶನಾಮೃತಸ್ಯ ಪೂರ್ವ ಆಯುಷಿ

ವಿದಥೇಷು ಕವ್ಯಾ । ತಯಾ ದೇವಾಃ ಸುತಮಾ

ಬಭೂವುರ್ ಋತಸ್ಯ ಸಾಮನ್ಥ್ಸರಮಾರಪಂತೀ ॥

---

ಇಮಾಮ್ । ಅಗೃಭ್ಣನ್ । ರಶನಾಮ್ । ಋತಸ್ಯ । ಪೂರ್ವೇ । ಆಯುಷಿ । ವಿದಥೇಷು । ಕವ್ಯಾ ॥ ತಯಾ । ದೇವಾಃ । ಸುತಮ್ । ಆ । ಬಭೂವುಃ । ಋತಸ್ಯ । ಸಾಮನ್ । ಸರಮ್ । ಆರಪಂತೀತ್ಯಾ-ರಪಂತೀ ।

---

ಮೊದಲ ಅನುವಾಕದಲ್ಲಿ ಅಭ್ರ್ಯಾದಾನವು ಹೇಳಲ್ಪಟ್ಟಿತು. ಈ ಎರಡನೆಯ ಅನುವಾಕದಲ್ಲಿ ಮೃದಾಕ್ರಾಂತಿಯು ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
|---|---|
| ಇಮಾಮ್...ಆರಪಂತೀ ॥ | ಕುದುರೆಯ ಹಗ್ಗವನ್ನು ತೆಗೆದುಕೊಳ್ಳಲು |

---

+ಪೂರ್ವೇ=ಪುರಾತನರಾದ ಮಹರ್ಷಿಗಳು; ಕವ್ಯಾ ವಿದಥೇಷು=ಋತ್ವಿಜರನ್ನು ಅಪೇಕ್ಷಿಸುವ ಯಜ್ಞಗಳಲ್ಲಿ; ಋತಸ್ಯ ಆಯುಷಿ=ಯಜ್ಞಸಾಧನವಾದ ಅಶ್ವದ ಆಗಮನವು ನಿಮಿತ್ತವಾಗಲಾಗಿ; ಇಮಾಮ್ ರಶನಾಮ್=[ಕುದುರೆಯನ್ನು ಕಟ್ಟುವ] ಈ ಹಗ್ಗವನ್ನು; ಅಗೃಭ್ಣನ್=ತೆಗೆದುಕೊಂಡರು; [ಯಾ=ಯಾವ ಹಗ್ಗವು] ಋತಸ್ಯ ಸಾಮನ್=ಯಜ್ಞದ ಸಮಾಪ್ತಿಯವರೆಗೂ; ಸರಮ್=ಋತ್ವಿಗ್ಯಜಮಾನರ ಪ್ರವೃತ್ತಿಯನ್ನು; ಆರಪಂತೀ[ವರ್ತತೇ]=ಹೇಳುತ್ತಾ/ತಿಳಿಸುತ್ತಾ ಇರುತ್ತದೆಯೋ; ತಯಾ=ಆ ಹಗ್ಗದಿಂದ; ದೇವಾಃ=ಪುರಾತನದೇವತೆಗಳು; ಸುತಮ್ ಆಬಭೂವುಃ=ಸೋಮಯಾಗಗಳನ್ನು ಹೊಂದಿದರು. [ಆ ಹಗ್ಗವನ್ನು ನಾನು ತೆಗೆದುಕೊಳ್ಳುತ್ತೇನೆ.]

ಪ್ರತೂರ್ತಂ ವಾಜಿನ್ನಾದ್ರವ ವರಿಷ್ಠಾಮನು ಸಂವತಮ್ । ದಿವಿ ತೇ ಜನ್ಮ ಪರಮಮಂತರಿಕ್ಷೇ ನಾಭಿಃ ಪೃಥಿವ್ಯಾಮಧಿ ಯೋನಿಃ ॥

---

ಪ್ರತೂರ್ತಮಿತಿ ಪ್ರ-ತೂರ್ತಮ್ । ವಾಜಿನ್ನ್ । ಏತಿ । ದ್ರವ । ವರಿಷ್ಠಾಮ್ । ಅನ್ವಿತಿ । ಸಂವತಮಿತಿ ಸಂ-ವತಮ್ ॥ ದಿವಿ । ತೇ । ಜನ್ಮ । ಪರಮಮ್ । ಅಂತರಿಕ್ಷೇ । ನಾಭಿಃ । ಪೃಥಿವ್ಯಾಮ್ । ಅಧೀತಿ । ಯೋನಿಃ ॥

---

| ಮಂತ್ರ | ವಿನಿಯೋಗ |
|---|---|
| ಪ್ರತೂರ್ತಂ...ಯೋನಿಃ ॥ | ಕುದುರೆಯನ್ನು ಕಟ್ಟುವುದಕ್ಕಾಗಿ |

---

✦ವಾಜಿನ್=ಎಲೈ! ಅಶ್ವವೇ! ವರಿಷ್ಠಾಮ್=ಶ್ರೇಷ್ಠವಾದ; ಸಂವತಮ್=ಮಣ್ಣನ್ನು ತೆಗೆಯಲು ಅತಿಪ್ರಶಸ್ತವಾದ ಭೂಮಿಯನ್ನು; ಅನು=ಕುರಿತು; ಪ್ರತೂರ್ತಮ್=ಅತಿ ಶೀಘ್ರವಾಗಿ; ಆ ದ್ರವ=ಹೋಗು; ತೇ=ನಿನ್ನ; ಪರಮಮ್ ಜನ್ಮ=ಶ್ರೇಷ್ಠವಾದ ಉತ್ಪತ್ತಿಯು; ದಿವಿ=ಸ್ವರ್ಗದಲ್ಲಿ [ಆಗಿದೆ;] ಅಂತರಿಕ್ಷೇ ನಾಭಿಃ=[ನಿನ್ನ ದೇಹದ ಚಲನವಲನಗಳು] ಅಂತರಿಕ್ಷದಲ್ಲಿ ಎಂದು ಪ್ರಸಿದ್ಧವಾಗಿದೆ; ಪೃಥಿವ್ಯಾಮ್ ಅಧಿ ಯೋನಿಃ=ಭೂಮಿಯ ಮೇಲೆ ನಿನ್ನ ವಾಸವು ಪ್ರಸಿದ್ಧವಾಗಿಯೇ ಇದೆ; [ನೀನು ಇಂತಹ ಮಹಿಮೆಯುಳ್ಳವನು]

---

ಸೋಮಯಾಗದಲ್ಲಿ ಅಗ್ನಿಚಯನವನ್ನು ಹೇಳಿರುತ್ತಾರೆ. ಉಖೆಗಾಗಿಯೂ, ಇಷ್ಟಕೆಗಳಿಗಾಗಿಯೂ ಮಣ್ಣು ಬೇಕಾಗಿದೆ. ಆ ಮೃದಾಕ್ರಮಣಕಾರ್ಯದಲ್ಲಿ ಕುದುರೆಯು ಬೇಕಾಗಿದೆ. ಆ ಕುದುರೆಯನ್ನು ಕಟ್ಟುವುದಕ್ಕಾಗಿ ಹಗ್ಗವು ಬೇಕಾಗಿದೆ. ಅದರಲ್ಲಿ ಈ ಮಂತ್ರವು ವಿಹಿತವಾಗಿದೆ.

ಪೂರ್ವಿಕರಾದ ಮುನಿಗಳು ಋತ್ವಿಜರನ್ನು ಅಪೇಕ್ಷಿಸುವ ಜ್ಯೋತಿಷ್ಟೋಮಾದಿ ಯಾಗಗಳಲ್ಲಿ, ಅಶ್ವಾಗಮನನಿಮಿತ್ತವಾಗಿ ಈ ಹಗ್ಗವನ್ನು ತೆಗೆದುಕೊಂಡರು. ಈ ಹಗ್ಗವು

## ಯುಂಜಾಥಾಗ್ಂ ರಾಸಭಂ ಯುವಮಸ್ಮಿನ್, ಯಾಮೇ ವೃಷಣ್ವಸೂ । ಅಗ್ನಿಂ ಭರಂತಮಸ್ಮಯುಮ್ ॥

ಯುಂಜಾಥಾಮ್ । ರಾಸಭಮ್ । ಯುವಮ್ । ಅಸ್ಮಿನ್ನ್ । ಯಾಮೇ । ವೃಷಣ್ವಸೂ ಇತಿ ವೃಷಣ್ಣ್-ವಸೂ ॥ ಅಗ್ನಿಮ್ । ಭರನ್ತಮ್ । ಅಸ್ಮಯುಮಿತ್ಯಸ್ಮ-ಯುಮ್ ॥

| ಮಂತ್ರ | ವಿನಿಯೋಗ |
| --- | --- |
| ಯುಂಜಾಥಾಗ್ಂ...ಅಸ್ಮಯುಮ್ ॥ | ಗರ್ದಭಬಂಧನವನ್ನು ಮಾಡಲು |

✦[ಯಜಮಾನದಂಪತಿಗಳೇ!] ವೃಷಣ್ವಸೂ=ಯಾಗನಿಷ್ಪಾದಕವಾದ, ಯಾಗಫಲಕ್ಕೆ ಸಾಧಕವಾದ ಧನವನ್ನು ಹೊಂದಿರುವ; ಯುವಮ್=ನೀವಿಬ್ಬರೂ; ಅಸ್ಮಿನ್ ಯಾಮೇ= ಮೃದ್ವಹನರೂಪವಾದ ನಿಯಮವು ನಿಮಿತ್ತವಾಗಲಾಗಿ; ಅಗ್ನಿಮ್ ಭರಂತಮ್= ಉಖಾಸಾಧನವಾದ ಮಣ್ಣನ್ನು ಹೊರುವ; ಅಸ್ಮಯುಮ್=ನಮ್ಮನ್ನು ಒಡೆಯರನ್ನಾಗಿ ಬಯಸುವ;/ನಮ್ಮ ಹಿತೈಷಿಯಾದ; ರಾಸಭಮ್=ಕತ್ತೆಯನ್ನು; ಯುಂಜಾಥಾಮ್= [ಹಗ್ಗದಿಂದ] ಕಟ್ಟಿರಿ;

ಯಾಗಸಮಾಪ್ತಿಪರ್ಯಂತವಾಗಿ ಋತ್ವಿಗ್ಯಜಮಾನರ ಕರ್ತವ್ಯಗಳನ್ನು ನೆನಪಿಸುತ್ತದೆ. ಈ ಯಜ್ಞಸಾಧನದಿಂದ ಋಷಿಗಳು ಸೋಮಯಾಗವನ್ನು ಮಾಡಿದರು. ಇಂತಹ ಹಗ್ಗವನ್ನು ನಾನು ತೆಗೆದುಕೊಳ್ಳುತ್ತೇನೆ.

ಎಲೈ! ಅಶ್ವವೇ! ನೀನು ಮೃದಾಕ್ರಮಣದ ಭೂಮಿಯನ್ನು ಕುರಿತು ಬೇಗನೇ ಹೋಗು. ನಿನ್ನ ಉತ್ಪತ್ತಿಯು ಸ್ವರ್ಗದಲ್ಲಿಯೂ, ದೇಹದ ಚಲನಾದಿಗಳು ಅಂತರಿಕ್ಷದಲ್ಲಿಯೂ, ನಿನ್ನ ವಾಸವು ಭೂಮಿಯ ಮೇಲೆ ಎಂದೂ ಪ್ರಸಿದ್ಧವಾಗಿದೆ.

'ಏತೇ ವೈ ದೇವಾಶ್ವಾಃ' ಎಂಬ ಶ್ರುತಿವಾಕ್ಯವೂ 'ನಿಯುತಃ ವಾಯೋಃ ಅಶ್ವಾಃ' ಎಂದು ಹೇಳಿರುವುದು ಅಶ್ವಕ್ಕೆ ದ್ಯುಲೋಕ-ಅಂತರಿಕ್ಷಲೋಕಗಳ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಅಶ್ವವನ್ನು ಪ್ರಶಂಸಿಸಲಾಗಿದೆ.

**ಯೋಗೇಯೋಗೇ ತವಸ್ತರಂ ವಾಜೇವಾಜೇ ಹವಾಮಹೇ ।**

**ಸಖಾಯ ಇಂದ್ರಮೂತಯೇ ॥**

---

ಯೋಗೇಯೋಗ ಇತಿ ಯೋಗೇ-ಯೋಗೇ । ತವಸ್ತರಮಿತಿ ತವಃ-ತರಮ್ । ವಾಜೇವಾಜ ಇತಿ ವಾಜೇ-ವಾಜೇ । ಹವಾಮಹೇ ॥ ಸಖಾಯಃ । ಇಂದ್ರಮ್ । ಊತಯೇ ॥

---

| ಮಂತ್ರ | ವಿನಿಯೋಗ |
| --- | --- |
| ಯೋಗೇಯೋಗೇ...ಊತಯೇ ॥ | ಮೃತ್ಖನನಪ್ರದೇಶಕ್ಕೆ ಕುದುರೆಯನ್ನು ಮುಂದಿಟ್ಟು ಕೊಂಡು ಹೋಗಲು ಪ್ರಥಮಮಂತ್ರ. |

---

✦ಸಖಾಯಃ=ಅನ್ಯೋನ್ಯಮೈತ್ರಿಯಿಂದ ಋತ್ವಿಗ್ಯಜಮಾನರಾದ ನಾವು; ಯೋಗೇ ಯೋಗೇ=ಪ್ರತಿಕರ್ಮದಲ್ಲಿಯೂ; ತವಸ್ತರಮ್=ಅತಿಶಯಬಲಿಷ್ಠವಾದ; ಇಂದ್ರಮ್=ಇಂದ್ರಿಯಶಕ್ತಿಪ್ರದವಾದ ಅಶ್ವವನ್ನು; ಊತಯೇ=ರಕ್ಷಣೆಗಾಗಿ; ವಾಜೇ ವಾಜೇ=ಪ್ರತಿಯೊಂದು ಅನ್ನದ ಪ್ರಾಪ್ತಿಗಾಗಿ; ಹವಾಮಹೇ=ಆಹ್ವಾನಿಸುತ್ತೇವೆ.

---

ಎಲೈ! ಯಜಮಾನದಂಪತಿಗಳೇ! ಉಖಾನಿರ್ಮಾಣಕ್ಕೆ ಕಾರಣವಾಗಿ ಯಾಗಸಾಧನವಾದ ಧನವನ್ನು ಹೊಂದಿರುವ ನೀವು ಯಾಗಸಾಧನವಾದ ಕತ್ತೆಯನ್ನು ಹಗ್ಗದಿಂದ ಕಟ್ಟಿರಿ. ಈ ಕತ್ತೆಯು ಯಾಗಸಾಧನವಾದ ಮಣ್ಣನ್ನು ಹೊರಲು ಸಮರ್ಥವಾಗಿದೆ. ನಮ್ಮ ಹಿತೈಷಿಯೂ ಆಗಿದೆ. ಇದನ್ನು ಕಟ್ಟಿರಿ.

ಅಶ್ವವು ಪ್ರತಿಯೊಂದು ಕಾರ್ಯದಲ್ಲಿಯೂ ಅತಿಸಮರ್ಥವಾದುದು. ಇಂದ್ರಿಯ ಶಕ್ತಿಯನ್ನುಂಟುಮಾಡುವಂತಹದು. ಋತ್ವಿಗ್ಯಜಮಾನರೂ ಪರಸ್ಪರ ಸ್ನೇಹಿತರೂ ಆದ ನಾವು ರಕ್ಷಣೆಗಾಗಿಯೂ, ಪ್ರತಿಯೊಂದು ಅನ್ನದ ಪ್ರಾಪ್ತಿಗಾಗಿಯೂ ಅಶ್ವವನ್ನು ಆಹ್ವಾನಿಸುತ್ತೇವೆ.

ಪ್ರತೂರ್ವನ್ನೇ[...ರ್ವನ್ನ್(೫)ಏಹ್ಯವ...]ಹ್ಯವಕ್ರಾಮನ್ನಶಸ್ತೀ

ರುದ್ರಸ್ಯ ಗಾಣಪತ್ಯಾನ್ಮಯೋಭೂರೇಹಿ ।

ಉರ್ವಂತರಿಕ್ಷಮನ್ವಿಹಿ ಸ್ವಸ್ತಿಗವ್ಯೂತಿರಭಯಾನಿ ಕೃಣ್ವನ್ ।

---

ಪ್ರತೂರ್ವನ್ನಿತಿ ಪ್ರ-ತೂರ್ವನ್ ।(೫)। ಏತಿ । ಇಹಿ । ಅವಕ್ರಾಮನ್ನಿತ್ಯವ-ಕ್ರಾಮನ್ । ಅಶಸ್ತೀಃ । ರುದ್ರಸ್ಯ । ಗಾಣಪತ್ಯಾದಿತಿ ಗಾಣ-ಪತ್ಯಾತ್ । ಮಯೋಭೂರಿತಿ ಮಯಃ-ಭೂಃ । ಏತಿ । ಇಹಿ ॥ ಉರು । ಅಂತರಿಕ್ಷಮ್ । ಅನ್ವಿತಿ । ಇಹಿ । ಸ್ವಸ್ತಿಗವ್ಯೂತಿರಿತಿ ಸ್ವಸ್ತಿ-ಗವ್ಯೂತಿಃ । ಅಭಯಾನಿ । ಕೃಣ್ವನ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರತೂರ್ವನ್...ಕೃಣ್ವನ್ ॥ | ಮೃತ್ಖನನಪ್ರದೇಶದಲ್ಲಿ ಅಶ್ವವನ್ನು ಮುಂದಿಟ್ಟುಕೊಂಡು ಸುತ್ತಲು ಎರಡನೆಯ ಮಂತ್ರ. |

---

✦[ಎಲೈ! ಅಶ್ವವೇ!] ಪ್ರತೂರ್ವನ್=ಶತ್ರುಗಳನ್ನು ಹಿಂಸಿಸುತ್ತಾ; ಅಶಸ್ತೀಃ=ವೈರಿಗಳು ಕಲ್ಪಿಸುವ ದುಷ್ಕೀರ್ತಿಗಳನ್ನು; ಅವಕ್ರಾಮನ್=ದೂರ ಮಾಡುತ್ತಾ; ಏಹಿ=ಬಾ; ರುದ್ರಸ್ಯ=ಪಶುಪತಿಯಾದ ರುದ್ರದೇವನ; ಗಾಣಪತ್ಯಾತ್=ಆಧಿಪತ್ಯದ ದೆಸೆಯಿಂದ; [ಬಿಡುಗಡೆ ಹೊಂದಿ] ಮಯೋಭೂಃ=ನಮಗೆ ಸುಖವನ್ನುಂಟು ಮಾಡುವವನಾಗಿ; ಏಹಿ=ಬಾ; ಉರು ಅಂತರಿಕ್ಷಮ್ ಅನು=ವಿಸ್ತೀರ್ಣವಾದ ಅಂತರಿಕ್ಷದಲ್ಲಿ; ಸ್ವಸ್ತಿಗವ್ಯೂತಿಃ=ಗೋಸಮೂಹಕ್ಕೆ ಕ್ಷೇಮವನ್ನು ಉಂಟು ಮಾಡುವವನಾಗಿ; ಅಭಯಾನಿ ಕೃಣ್ವನ್=ವ್ಯಾಘ್ರಾದಿಗಳಿಂದ ಭಯವಿಲ್ಲದಂತೆ ಮಾಡುತ್ತಾ; ಇಹಿ=ಬಾ.

ಪೂಷ್ಣಾ ಸಯುಜಾ ಸಹ । ಪೃಥಿವ್ಯಾಃ ಸಧಸ್ಥಾದಗ್ನಿಂ
ಪುರೀಷ್ಯಮಂಗಿರಸ್ವದಚ್ಛೇಹ್ಯಗ್ನಿಂ ಪುರೀಷ್ಯ
ಮಂಗಿರಸ್ವದಚ್ಛೇಮೋ-

---

ಪೂಷ್ಣಾ । ಸಯುಜೇತಿ ಸ-ಯುಜಾ । ಸಹ ॥ ಪೃಥಿವ್ಯಾಃ । ಸಧಸ್ಥಾದಿತಿ ಸಧ-ಸ್ಥಾತ್ । ಅಗ್ನಿಮ್ । ಪುರೀಷ್ಯಮ್ । ಅಂಗಿರಸ್ವತ್ । ಅಚ್ಛ । ಇಹಿ । ಅಗ್ನಿಮ್ । ಪುರೀಷ್ಯಮ್ । ಅಂಗಿರಸ್ವತ್ । ಅಚ್ಛ । ಇಮಃ ।

---

| ಮಂತ್ರ | ವಿನಿಯೋಗ |
| --- | --- |
| ಪೂಷ್ಣಾ...ಅಚ್ಛೇಹಿ ॥ | ಮೃತ್ಖನನಪ್ರದೇಶದಲ್ಲಿ ಸುತ್ತುವಲ್ಲಿ ಮೂರನೆಯ ಮಂತ್ರ. |
| ಅಗ್ನಿಂ...ಅಚ್ಛೇಮಃ ॥ | ಶತ್ರುನಿವಾರಣಾರ್ಥವಾಗಿ ಹೇಳಲು |

---

✦[ಹೇ! ಅಶ್ವವೇ!]ಸಯುಜಾ ಪೂಷ್ಣಾ ಸಹ=ಸಹಾಯಭೂತನಾದ/ಪೋಷಕನಾದ ಪೂಷದೇವನೊಡನೆ; ಪೃಥಿವ್ಯಾಃ ಸಧಸ್ಥಾತ್=ಭೂಮಿಯ ಮೇಲ್ಭಾಗದಿಂದ; ಅಂಗಿರಸ್ವತ್=ಅಂಗಿರಸಮುನಿಗಳಂತೆ; ಪುರೀಷ್ಯಮ್ ಅಗ್ನಿಮ್=ಉಖಾನಿರ್ಮಾಣ ಸಾಧನವಾದ ಮಣ್ಣನ್ನು [ಅಗ್ನಿಯನ್ನು] ಅಚ್ಛ=ಹೊಂದುವುದಕ್ಕೆ; ಇಹಿ=ಬಾ. ✦ಪುರೀಷ್ಯಮ್=ಉಖಾನಿರ್ಮಾಣಕ್ಕೆ ಸಾಧನವಾದ; ಅಗ್ನಿಮ್=ಮೃತ್ತಿಕೆಯನ್ನು; ಅಂಗಿರಸ್ವತ್=ಅಂಗಿರಸರಂತೆ; ಅಚ್ಛ=ಹೊಂದುವುದಕ್ಕೆ; ಇಮಃ=ಹೋಗುತ್ತಿದ್ದೇವೆ.

---

ಎಲೈ! ಅಶ್ವವೇ! ನೀನು ಹಿಂಸಿಸುತ್ತಾ ಬಾ. ಆಗದವರು ಹರಡುವ ಅಪಕೀರ್ತಿಗಳನ್ನು ಹೋಗಲಾಡಿಸು. ಪಶುಪತಿಯಾದ ರುದ್ರನ ಅನುಗ್ರಹದಿಂದ ಅವನ ಒಡೆತನದಿಂದ ಬಂದು ನಮಗೆ ಸುಖವನ್ನುಂಟುಮಾಡುವವನಾಗು. ವಿಶಾಲವಾದ ಅಂತರಿಕ್ಷದಲ್ಲಿ ತಡೆಯಿಲ್ಲದೆ ಸಂಚರಿಸು. ಪಶುಸಮೂಹಕ್ಕೆ ಕ್ಷೇಮವನ್ನುಂಟುಮಾಡು.ವ್ಯಾಘ್ರಾದಿಗಳಿಂದ

ಽಗ್ನಿಂ ಪುರೀಷ್ಯಮಂಗಿರಸ್ವದ್ಭರಿಷ್ಯಾಮೋಽಗ್ನಿಂ ಪುರೀಷ್ಯಮಂಗಿರಸ್ವದ್ಭರಾಮಃ ॥

---

ಅಗ್ನಿಮ್ । ಪುರೀಷ್ಯಮ್ । ಅಂಗಿರಸ್ವತ್ । ಭರಿಷ್ಯಾಮಃ । ಅಗ್ನಿಮ್ । ಪುರೀಷ್ಯಮ್ । ಅಂಗಿರಸ್ವತ್ । ಭರಾಮಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿಂ...ಭರಿಷ್ಯಾಮಃ ॥ | ಹುತ್ತದ ಮೇಲ್ಭಾಗದ ಮಣ್ಣಿನ ಉಪಸ್ಥಾನವನ್ನು ಮಾಡಲು |
| ಅಗ್ನಿಂ...ಭರಾಮಃ ॥ | ಶತ್ರುನಾಶಾರ್ಥಕ್ಕಾಗಿ ಹೇಳಲು |

---

+ಅಂಗಿರಸ್ವತ್=ಅಂಗಿರಸಮುನಿಗಳಂತೆ; ಪುರೀಷ್ಯಮ್ ಅಗ್ನಿಮ್=ಅಗ್ನಿಸಾಧನವಾದ ಮೃತ್ತಿಕೆಯನ್ನು; ಭರಿಷ್ಯಾಮಃ=ಹೊಂದುವೆವು. +ಅಂಗಿರಸ್ವತ್= ಅಂಗಿರಸರಂತೆ; ಪುರೀಷ್ಯಮ್ ಅಗ್ನಿಮ್=ಉಖೆಯನ್ನು ಮಾಡಲು ಯೋಗ್ಯವಾದ ಮಣ್ಣನ್ನು; ಭರಾಮಃ=ಹೊಂದುತ್ತೇವೆ.

---

ಭಯವಿಲ್ಲದಂತೆ ಮಾಡುತ್ತಾ ಸಂಚರಿಸು.

ಹೇ! ಅಶ್ವವೇ! ಸಹಾಯಭೂತನಾದ ಪೂಷದೇವನೊಡನೆ ಭೂಮಿಯ ಮೇಲ್ಭಾಗದಿಂದ ಉಖಾನಿರ್ಮಾಣಯೋಗ್ಯವಾದ ಮಣ್ಣನ್ನು ಹೊಂದುವುದಕ್ಕಾಗಿ ಬಾ.

ಶತ್ರುವು ಎದುರಾದರೆ ಈ 'ಅಗ್ನಿಂ...ಅಚ್ಛೇಮಃ' ಎಂಬ ಈ ಮಂತ್ರವನ್ನು ಹೇಳಬೇಕು. ಶತ್ರುವು ಬರದಿದ್ದರೂ ಶತ್ರುವನ್ನು ಉದ್ದೇಶಿಸಿ ಈ ಮಂತ್ರವನ್ನು ಹೇಳಬೇಕು. ಶತ್ರುವಿಲ್ಲದಿದ್ದರೂ ಪಾಪವನ್ನೇ ಶತ್ರುವೆಂದು ಭಾವಿಸಿ ಈ ಮಂತ್ರವನ್ನು ಹೇಳಬೇಕು.

'ಇಯಂ ವೈ ಪ್ರಜಾಪತಿಸ್ತಸ್ಯಾ ಏತಚ್ಛ್ರೋತ್ರಂ ಯದ್ವಲ್ಮೀಕಃ' [ತೈ.ಸಂ.೫.೧.೨] ಎಂಬ ಬ್ರಾಹ್ಮಣವಚನದಂತೆ ಪ್ರಜಾಪತಿಯ ಕರ್ಣರೂಪವಾದ ಈ ಹುತ್ತದ ಮೇಲ್ಭಾಗದ ಮೃತ್ತಿಕೆಯನ್ನು ಹೊಂದುವೆವು.

# ಅನ್ವಗ್ನಿರುಷಸಾಮಗ್ರಮಖ್ಯದನ್ವಹಾನಿ ಪ್ರಥಮೋ ಜಾತವೇದಾಃ । ಅನು ಸೂರ್ಯಸ್ಯ [(೬)ಪುರುತ್ರಾ..] ಪುರುತ್ರಾ ಚ ರಶ್ಮೀನನು ದ್ಯಾವಾಪೃಥಿವೀ ಆ ತತಾನ ॥

ಅನ್ವಿತಿ । ಅಗ್ನಿಃ । ಉಷಸಾಮ್ । ಅಗ್ರಮ್ । ಅಖ್ಯತ್ । ಅನ್ವಿತಿ । ಅಹಾನಿ । ಪ್ರಥಮಃ । ಜಾತವೇದಾ ಇತಿ ಜಾತ-ವೇದಾಃ ॥ ಅನ್ವಿತಿ । ಸೂರ್ಯಸ್ಯ ।(೬)। ಪುರುತ್ರೇತಿ ಪುರು-ತ್ರಾ । ಚ । ರಶ್ಮೀನ್ । ಅನ್ವಿತಿ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಏತಿ । ತತಾನ ॥

| ಮಂತ್ರ | ವಿನಿಯೋಗ |
|---|---|
| ಅನ್ವಗ್ನಿಃ...ಆತತಾನ ॥ | ಹುತ್ತದ ಬಳಿಯಿಂದ ಹೊರಡಲು |

+ಅಗ್ನಿಃ=ಈ ಅಗ್ನಿಯು; ಉಷಸಾಮ್ ಅಗ್ರಮ್=ಉಷಃಕಾಲದ ಉಪಕ್ರಮವನ್ನು; ಅನು ಅಖ್ಯತ್=ಅನುಕ್ರಮವಾಗಿ ಪ್ರಕಾಶಪಡಿಸಿದನು; ಪ್ರಥಮಃ=ಮುಖ್ಯನಾದ; ಜಾತವೇದಾಃ=ಅಗ್ನಿಯು; ಅಹಾನಿ=ಹಗಲುಗಳನ್ನು/ದಿನಗಳನ್ನು; ಅನು ಅಖ್ಯತ್=ಅನುಕ್ರಮವಾಗಿ ಪ್ರಕಾಶಪಡಿಸಿದನು; ಚ=ಮತ್ತು; ಸೂರ್ಯಸ್ಯ=ಸೂರ್ಯದೇವನ; ಪುರುತ್ರಾ ರಶ್ಮೀನ್=ಬಹಳವಾದ ಕಿರಣಗಳನ್ನು; ಅನು ಅಖ್ಯತ್=ಅನುಕ್ರಮವಾಗಿ ವ್ಯಾಪಿಸುವಂತೆ ಮಾಡಿದನು; ದ್ಯಾವಾಪೃಥಿವೀ ಅನು ಆತತಾನ= ಭೂಮ್ಯಂತರಿಕ್ಷಗಳನ್ನು ಅನುಕ್ರಮವಾಗಿ ತನ್ನ ಪ್ರಕಾಶದಿಂದ ವ್ಯಾಪಿಸಿದನು.

'ಅಗ್ನಿಂ..ಭರಾಮಃ' ಎಂಬ ಈ ಮಂತ್ರದಿಂದ ನಿಧಾನವಾಗಿ ಹಿಂದಕ್ಕೆ ಬರಬೇಕು. ಶತ್ರುಪರಿಹಾರವು ಹಿಂದಿನ 'ಅಗ್ನಿಂ...ಅಚ್ಛೇಮಃ' ಎಂಬ ಮಂತ್ರದ ತಾತ್ಪರ್ಯದಲ್ಲಿ ತಿಳಿಸಿದಂತೆಯೇ ಇರುತ್ತದೆ.

ಆಗತ್ಯ ವಾಜ್ಯಧ್ವನಃ ಸರ್ವಾ ಮೃಧೋ ವಿ ಧೂನುತೇ ।

ಅಗ್ನಿಗ್‌ಂ ಸಧಸ್ಥೇ ಮಹತಿ ಚಕ್ಷುಷಾ ನಿಚಿಕೀಷತೇ ॥

---

ಆಗತ್ಯೇತ್ಯಾ–ಗತ್ಯ । ವಾಜೀ । ಅಧ್ವನಃ । ಸರ್ವಾಃ । ಮೃಧಃ । ವೀತಿ । ಧೂನುತೇ ।

ಅಗ್ನಿಮ್ । ಸಧಸ್ಥ ಇತಿ ಸಧ–ಸ್ಥೇ । ಮಹತಿ । ಚಕ್ಷುಷಾ । ನೀತಿ । ಚಿಕೀಷತೇ ।

---

| ಮಂತ್ರ | ವಿನಿಯೋಗ |
|---|---|
| ಆಗತ್ಯ...ನಿಚಿಕೀಷತೇ ॥ | ಮಣ್ಣನ್ನು ಅಗೆಯಲು ಯೋಗ್ಯವಾದ ಪ್ರದೇಶವನ್ನು ಕುದುರೆಯಿಂದ ತುಳಿಸಲು ಇರುವ ಎರಡು ಮಂತ್ರಗಳಲ್ಲಿ ಪ್ರಥಮಮಂತ್ರ. |

---

✦ವಾಜೀ=ಈ ಕುದುರೆಯು; ಅಧ್ವನಃ=ಮಾರ್ಗದಿಂದ; ಆಗತ್ಯ=ಬಂದು; ಸರ್ವಾಃ ಮೃಧಃ=ಮಾರ್ಗಾಯಾಸಾದಿಸಮಸ್ತಕ್ಲೇಶಗಳನ್ನೂ; ವಿಧೂನುತೇ=ಹೋಗಲಾಡಿಸುತ್ತದೆ; ಮಹತಿ=ದೊಡ್ಡದಾದ; ಸಧಸ್ಥೇ=ಮಣ್ಣನ್ನು ಅಗೆಯುವ ಪ್ರದೇಶದಲ್ಲಿ; ಚಕ್ಷುಷಾ=ಕಣ್ಣಿನಿಂದ ನೋಡಿ; ಅಗ್ನಿಮ್=ಉಖಾನಿರ್ಮಾಣಯೋಗ್ಯವಾದ ಮಣ್ಣನ್ನು; ನಿಚಿಕೀಷತೇ=ಸಂಪಾದಿಸಲು ಇಚ್ಛಿಸುತ್ತದೆ.

---

ಇಲ್ಲಿ ಉಖೆಯಲ್ಲಿ ಸ್ಥಾಪಿಸುವ ಅಗ್ನಿಗೂ ಸೂರ್ಯನಿಗೂ ಅಭೇದವನ್ನು ಕಲ್ಪಿಸಿ, ವರ್ಣಿಸಲಾಗಿದೆ. ಅಗ್ನಿಯು ಉಷಃಕಾಲವನ್ನು ಪ್ರಕಾಶಪಡಿಸಿದನು. ಬಳಿಕ ಹಗಲನ್ನೂ ಬೆಳಗಿದನು. ಸೂರ್ಯನ ಕಿರಣಗಳನ್ನು ಸರ್ವತ್ರ ವ್ಯಾಪಿಸುವಂತೆ ಮಾಡಿದನು. ಮತ್ತು ಭೂಮಿ–ಅಂತರಿಕ್ಷಗಳನ್ನೂ ತನ್ನ ತೇಜಸ್ಸಿನಿಂದ ತುಂಬಿದನು. ಇಂತಹ ಪ್ರಕಾಶವುಳ್ಳ ಅಗ್ನಿಯು ಮಹಾಪ್ರಭಾವವುಳ್ಳವನಾಗಿದ್ದಾನೆ.

ಈ ಕುದುರೆಯು ಮೃತ್ಖನನಪ್ರದೇಶವನ್ನು ಹೊಂದಿರುವುದರಿಂದ ಮಾರ್ಗದಿಂದ ಬಂದು ಮಾರ್ಗಶ್ರಮಾದಿಕ್ಲೇಶಗಳನ್ನು ದೂರ ಮಾಡುತ್ತದೆ. ಕಣ್ಣಿನಿಂದ ನೋಡಿ ಮಣ್ಣನ್ನು ಹೆಚ್ಚಾಗಿ ಪಡೆಯಬಹುದಾದ ಪ್ರದೇಶವನ್ನು ನಿಶ್ಚಯಿಸುತ್ತದೆ.

ಆಕ್ರಮ್ಯ ವಾಜಿನ್ಪೃಥಿವೀಮಗ್ನಿಮಿಚ್ಛ ರುಚಾ ತ್ವಮ್ । ಭೂಮ್ಯಾ ವೃತ್ವಾಯ ನೋ ಬ್ರೂಹಿ ಯತಃ ಖನಾಮ ತಂ ವಯಮ್ ॥

---

ಆಕ್ರಮ್ಯೇತ್ಯಾ-ಕ್ರಮ್ಯ । ವಾಜಿನ್ನ್ । ಪೃಥಿವೀಮ್ । ಅಗ್ನಿಮ್ । ಇಚ್ಛ । ರುಚಾ । ತ್ವಮ್ ॥ ಭೂಮ್ಯಾಃ । ವೃತ್ವಾಯ । ನಃ । ಬ್ರೂಹಿ । ಯತಃ । ಖನಾಮ । ತಮ್ । ವಯಮ್ ॥

---

| ಮಂತ್ರ | ವಿನಿಯೋಗ |
|---|---|
| ಆಕ್ರಮ್ಯ...ವಯಮ್ ॥ | ಕುದುರೆಯಿಂದ ತುಳಿಸಲು ಎರಡನೆಯ ಮಂತ್ರ |

---

+ವಾಜಿನ್=ಅಶ್ವವೇ! ತ್ವಮ್=ನೀನು; ಪೃಥಿವೀಮ್=ಮಣ್ಣನ್ನು ಅಗೆಯುವ ಪ್ರದೇಶವನ್ನು; ಆಕ್ರಮ್ಯ=ತುಳಿದು; ರುಚಾ=ನಿನ್ನ ತೇಜಸ್ಸಿನಿಂದ/ಮಾನಸಜ್ಞಾನದಿಂದ; ಅಗ್ನಿಮ್ ಇಚ್ಛ=ಉಖೆಗೆ ಯೋಗ್ಯವಾದ ಮಣ್ಣನ್ನು ನಿಶ್ಚಯಿಸು; ವಯಮ್=ನಾವು; ಯತಃ=ಯಾವ ಪ್ರದೇಶದಿಂದ; ಖನಾಮ=[ಮಣ್ಣನ್ನು]ಅಗೆಯುತ್ತೇವೆಯೋ ಭೂಮ್ಯಾಃ =ವಿಸ್ತೀರ್ಣಪ್ರದೇಶದಿಂದ/ಪ್ರದೇಶದ ದೆಸೆಯಿಂದ; ತಮ್=[ಯೋಗ್ಯವಾದ] ಆ ಪ್ರದೇಶವನ್ನು; ವೃತ್ವಾಯ=ಆರಿಸಿ; ನಃ ಬ್ರೂಹಿ=ನಮಗೆ ಹೇಳು/ ತಿಳಿಸಿಕೊಡು.

---

ಎಲೈ! ಅಶ್ವವೇ! ನೀನು ಖನನಪ್ರದೇಶವನ್ನು ತುಳಿದು ನಿನ್ನ ಮಾನಸಜ್ಞಾನದಿಂದ ಅಗೆಯಲು ಯೋಗ್ಯವಾದ ಪ್ರದೇಶವನ್ನು ಪಡೆಯಲು ಇಚ್ಛಿಸು. ಆ ಪ್ರದೇಶವನ್ನು ನಿಶ್ಚಯಿಸು. ವಿಶಾಲವಾದ ಪ್ರದೇಶದಿಂದ ನಾವು ಅಗೆಯಲು ಯೋಗ್ಯವಾದ ಪ್ರದೇಶವನ್ನು ಆರಿಸಿ, ನಮಗೆ ತಿಳಿಸು.

ಹೇ! ಅಶ್ವವೇ! ನಿನ್ನ ಅವಯವಗಳು ದ್ಯುಲೋಕ ಮುಂತಾದ ರೂಪಗಳಾಗಿವೆ.

ದ್ಯೌಸ್ತೇ ಪೃಷ್ಠಂ ಪೃಥಿವೀ ಸಧಸ್ಥಮಾತ್ಮಾಂತರಿಕ್ಷಗ್ಂ ಸಮುದ್ರಸ್ತೇ ಯೋನಿಃ। ವಿಖ್ಯಾಯ ಚಕ್ಷುಷಾ ತ್ವಮಭಿ ತಿಷ್ಠ [(೭)ಪೃತನ್ಯತಃ] ಪೃತನ್ಯತಃ ॥

---

ದ್ಯೌಃ । ತೇ । ಪೃಷ್ಠಮ್ । ಪೃಥಿವೀ । ಸಧಸ್ಥಮಿತಿ ಸಧ-ಸ್ಥಮ್ । ಆತ್ಮಾ । ಅಂತರಿಕ್ಷಮ್ । ಸಮುದ್ರಃ । ತೇ । ಯೋನಿಃ ॥ ವಿಖ್ಯಾಯೇತಿ ವಿ-ಖ್ಯಾಯ । ಚಕ್ಷುಷಾ । ತ್ವಮ್ । ಅಭೀತಿ । ತಿಷ್ಠ । (೭) । ಪೃತನ್ಯತಃ ।

---

| ಮಂತ್ರ | ವಿನಿಯೋಗ |
|---|---|
| ದ್ಯೌಸ್ತೇ...ಪೃತನ್ಯತಃ ॥ | ಕುದುರೆಯ ಬೆನ್ನನ್ನು ತೊಳೆಯಲು |

---

+[ಎಲೈ! ಅಶ್ವವೇ!]ದ್ಯೌಃ=ದ್ಯುಲೋಕವು; ತೇ ಪೃಷ್ಠಮ್=ನಿನ್ನ ಬೆನ್ನಾಗಿದೆ; ಪೃಥಿವೀ=ಭೂಮಿಯು; ಸಧಸ್ಥಮ್=ನೀನು ನಿಂತಿರುವ [ಉಖಾಯೋಗ್ಯವಾದ] ಪ್ರದೇಶವಾಗಿದೆ; ಅಂತರಿಕ್ಷಮ್=ಅಂತರಿಕ್ಷವು; ಆತ್ಮಾ=ನಿನ್ನ [ಮಧ್ಯಶರೀರದಲ್ಲಿ ಇರುವ] ಜೀವಾತ್ಮವಾಗಿದೆ; ಸಮುದ್ರಃ=ಸಮುದ್ರವು; ತೇ ಯೋನಿಃ=ನಿನ್ನ ಉತ್ಪತ್ತಿಸ್ಥಾನ ವಾಗಿದೆ; ತ್ವಮ್=ನೀನು; ಚಕ್ಷುಷಾ=ಕಣ್ಣಿನಿಂದ; ವಿಖ್ಯಾಯ=[ಮಣ್ಣನ್ನು ಅಗೆಯಲು ಯೋಗ್ಯವಾದ ಪ್ರದೇಶವನ್ನು] ಚೆನ್ನಾಗಿ ನೋಡಿ; ಪೃತನ್ಯತಃ=ಹೋರಾಡಲು ಇಚ್ಛಿಸುವ [ಈ ಪ್ರದೇಶದಲ್ಲಿ ಗೂಢವಾಗಿರುವ ರಾಕ್ಷಸಾದಿಗಳನ್ನು] ಅಭಿ ತಿಷ್ಠ= ಕಾಲಿನಿಂದ ತುಳಿದು ನಾಶಪಡಿಸು.

---

'ಅಪ್ಸುಯೋನಿರ್ವಾ ಅಶ್ವಃ' ಎಂದೂ 'ಸಮುದ್ರೇ ತೇ ಯೋನಿಃ' ಎಂದೂ ಶ್ರುತಿಯು ಹೇಳಿದೆ. ಈ ಮಂತ್ರದಲ್ಲಿ ಅಶ್ವವು ಲೋಕತ್ರಯಸ್ವರೂಪವಾಗಿದೆಯೆಂದು ಪ್ರಶಂಸಿ ಸಲಾಗಿದೆ.

ಉತ್ಕ್ರಾಮ ಮಹತೇ ಸೌಭಗಾಯಾಸ್ಮಾದಾಸ್ಥಾನಾದ್ದ್ರವಿಣೋದಾ ವಾಜಿನ್ನ್। ವಯಗ್ಗ್ಂ ಸ್ಯಾಮ ಸುಮತೌ ಪೃಥಿವ್ಯಾ ಅಗ್ನಿಂ ಖನಿಷ್ಯಂತ ಉಪಸ್ಥೇ ಅಸ್ಯಾಃ ॥

---

ಉದಿತಿ। ಕ್ರಾಮ। ಮಹತೇ। ಸೌಭಗಾಯ। ಅಸ್ಮಾತ್। ಆಸ್ಥಾನಾದಿತ್ಯಾ-ಸ್ಥಾನಾತ್। ದ್ರವಿಣೋದಾ ಇತಿ ದ್ರವಿಣಃ-ದಾಃ। ವಾಜಿನ್ನ್॥ ವಯಮ್। ಸ್ಯಾಮ। ಸುಮತಾವಿತಿ ಸು-ಮತೌ। ಪೃಥಿವ್ಯಾಃ। ಅಗ್ನಿಮ್। ಖನಿಷ್ಯಂತಃ। ಉಪಸ್ಥ ಇತ್ಯುಪ-ಸ್ಥೇ। ಅಸ್ಯಾಃ।

---

| ಮಂತ್ರ | ವಿನಿಯೋಗ |
|---|---|
| ಉತ್ಕ್ರಾಮ...ಅಸ್ಯಾಃ ॥ | ಮಣ್ಣು ಅಗೆಯುವ ಪ್ರದೇಶದಿಂದ ಕುದುರೆಯನ್ನು ಉದಙ್ಮುಖವಾಗಿ ಹೊರಕಳಿಸಲು ಪ್ರಥಮಮಂತ್ರ. |

---

+ದ್ರವಿಣೋದಾಃ=ಧನಪ್ರದನಾದ; ವಾಜಿನ್=ಎಲೈ! ಅಶ್ವವೇ! ಮಹತೇ ಸೌಭಗಾಯ=[ಯಜಮಾನನ] ಮಹತ್ತಾದ ಸೌಭಾಗ್ಯಕ್ಕಾಗಿ; ಅಸ್ಮಾತ್ ಆಸ್ಥಾನಾತ್ =ಈ ಮಣ್ಣನ್ನು ಅಗೆಯುವ ಪ್ರದೇಶದಿಂದ; ಉತ್ಕ್ರಾಮ=ಹೊರಕ್ಕೆ ಹೊರಡು; ಅಸ್ಯಾಃ ಉಪಸ್ಥೇ=ಈ ಮಣ್ಣನ್ನು ಅಗೆಯುವ ಭೂಭಾಗದಲ್ಲಿ; ಅಗ್ನಿಮ್ ಖನಿಷ್ಯಂತಃ= ಉಖಾಸಾಧನವಾದ ಮಣ್ಣನ್ನು ಅಗೆಯುವ; ವಯಮ್=ನಾವು; ಪೃಥಿವ್ಯಾಃ= ಭೂಮ್ಯಧಿದೇವತೆಯ; ಸುಮತೌ=ಒಳ್ಳೆಯ ಅನುಗ್ರಹಬುದ್ಧಿಯಲ್ಲಿ; ಸ್ಯಾಮ= ಇರುವವರಾಗೋಣ.

---

ಅಶ್ವವೇ! ನೀನು ಯಜಮಾನನಿಗೆ ಧನಪ್ರದನು. ಈ ಮೃತ್ಖನನ ಪ್ರದೇಶದಿಂದ ಉದಙ್ಮುಖನಾಗಿ ಹೊರಡು. ನಾವು ಮಣ್ಣನ್ನು ಅಗೆದು ಯಾಗ ಮಾಡುತ್ತೇವೆ. ಭೂದೇವಿಯು ನಮ್ಮನ್ನು ಅನುಗ್ರಹಬುದ್ಧಿಯಿಂದ ನೋಡಲಿ.

ಉದಕ್ರಮೀದ್ದ್ರವಿಣೋದಾ ವಾಜ್ಯರ್ವಾಽಕಃ ಸ ಲೋಕಗ್ಂ
ಸುಕೃತಂ ಪೃಥಿವ್ಯಾಃ । ತತಃ ಖನೇಮ ಸುಪ್ರತೀಕಮಗ್ನಿಗ್ಂ
ಸುವೋ ರುಹಾಣಾ ಅಧಿ ನಾಕ ಉತ್ತಮೇ ॥

---

ಉದಿತಿ । ಅಕ್ರಮೀತ್ । ದ್ರವಿಣೋದಾ ಇತಿ ದ್ರವಿಣಃ–ದಾಃ । ವಾಜೀ । ಅರ್ವಾ । ಅಕಃ । ಸಃ । ಲೋಕಮ್ । ಸುಕೃತಮಿತಿ ಸು–ಕೃತಮ್ । ಪೃಥಿವ್ಯಾಃ ॥ ತತಃ । ಖನೇಮ । ಸುಪ್ರತೀಕಮಿತಿ ಸು–ಪ್ರತೀಕಮ್ । ಅಗ್ನಿಮ್ । ಸುವಃ । ರುಹಾಣಾಃ । ಅಧೀತಿ । ನಾಕೇ । ಉತ್ತಮ ಇತ್ಯುತ್–ತಮೇ ॥

---

| ಮಂತ್ರ | ವಿನಿಯೋಗ |
|---|---|
| ಉದಕ್ರಮೀತ್...ಉತ್ತಮೇ ॥ | ಅಶ್ವವನ್ನು ಹೊರಕ್ಕೆ ಕಳುಹಿಸಲು. |

---

+ದ್ರವಿಣೋದಾಃ=ಯಾಗದ ಫಲವಾಗಿ ಧನವನ್ನು ಕೊಡುವ; ವಾಜೀ=ಅನ್ನವನ್ನೂ ಕೊಡುವ; ಅರ್ವಾ=ಗಮನಕುಶಲವಾದ [ಅಶ್ವವು] ಉದಕ್ರಮೀತ್=ಹೊರಕ್ಕೆ ಹೊರಟಿತು; ಸಃ=ಆ ಕುದುರೆಯು; ಪೃಥಿವ್ಯಾಃ=ಭೂಮಿಯ; ಲೋಕಮ್=ಮಣ್ಣನ್ನು ಅಗೆಯುವ ಪ್ರದೇಶವನ್ನು; ಸುಕೃತಮ್=ರಾಕ್ಷಸಾದಿಪೀಡೆಗಳಿಲ್ಲದ ಒಳ್ಳೆಯ ಪ್ರದೇಶವನ್ನಾಗಿ; ಅಕಃ=ತನ್ನ ಪಾದಪ್ರಕ್ಷೇಪದಿಂದ ಮಾಡಿತು; ಉತ್ತಮೇ=ಸುಖಸ್ವರೂಪವಾಗಿ ಶ್ರೇಷ್ಠವಾದ; ನಾಕೇ=ದುಃಖರಹಿತವಾದ; ಸುವಃ=ಸ್ವರ್ಗದಲ್ಲಿ; ಅಧಿರುಹಾಣಾಃ =ಮೇಲೆ ಏರುವ [ಏರಲು ಇಚ್ಛಿಸುವ] [ನಾವು] ತತಃ=ಆ ಖನನಪ್ರದೇಶದಿಂದ; ಸುಪ್ರತೀಕಮ್=ಸುಮುಖವಾದ; ಅಗ್ನಿಮ್=ಉಖಾಸಾಧನವಾದ ಮಣ್ಣನ್ನು; ಖನೇಮ=ಅಗೆಯುತ್ತೇವೆ.

ಅಪೋ ದೇವೀರುಪ ಸೃಜ ಮಧುಮತೀರಯಕ್ಷ್ಮಾಯ ಪ್ರಜಾಭ್ಯಃ । ತಾಸಾಗ್‌ಂ ಸ್ಥಾನಾದುಜ್ಜಿಹತಾಮೋಷಧಯಃ ಸುಪಿಪ್ಪಲಾಃ ॥

---

ಅಪಃ । ದೇವೀಃ । ಉಪೇತಿ । ಸೃಜ । ಮಧುಮತೀರಿತಿ ಮಧು-ಮತೀಃ । ಅಯಕ್ಷ್ಮಾಯ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ ॥ ತಾಸಾಮ್ । ಸ್ಥಾನಾತ್ । ಉದಿತಿ । ಜಿಹತಾಮ್ । ಓಷಧಯಃ । ಸುಪಿಪ್ಪಲಾ ಇತಿ ಸು-ಪಿಪ್ಪಲಾಃ ।

---

| ಮಂತ್ರ | ವಿನಿಯೋಗ |
|---|---|
| ಅಪೋ ದೇವೀಃ...ಸುಪಿಪ್ಪಲಾಃ ॥ | ಕುದುರೆಯ ಹೆಜ್ಜೆಯ ಪ್ರದೇಶದಲ್ಲಿ ನೀರನ್ನು ಹಾಕಲು |

---

✦[ನಾನು] **ದೇವೀಃ**=ಪ್ರಕಾಶಮಾನವಾದ; **ಮಧುಮತೀಃ**=ಮಧುರವಾದ; **ಅಪಃ**=ನೀರನ್ನು; **ಪ್ರಜಾಭ್ಯಃ**=ಪ್ರಜೆಗಳ; **ಅಯಕ್ಷ್ಮಾಯ**=ಆರೋಗ್ಯಕ್ಕಾಗಿ; [ರೋಗವಿಲ್ಲದಿರುವುದಕ್ಕಾಗಿ] **ಉಪಸೃಜ**=ಖನನಪ್ರದೇಶದಲ್ಲಿ ಹಾಕುತ್ತೇನೆ; **ತಾಸಾಮ್ ಸ್ಥಾನಾತ್**=ಆ ನೀರನ್ನು ಹಾಕಿದ ಪ್ರದೇಶದಿಂದ; **ಸುಪಿಪ್ಪಲಾಃ**=ಒಳ್ಳೆಯ ಫಲಭರಿತವಾದ; **ಓಷಧಯಃ**=ಸಸ್ಯಗಳು; **ಉಜ್ಜಿಹತಾಮ್**=ಉತ್ಪನ್ನವಾಗಲಿ;

---

ಯಾಗಕ್ಕೆ ಪರಂಪರೆಯಿಂದ ಸಾಧನವಾಗಿರುವ ಅಶ್ವವು ಧನಪ್ರದವೂ ಅನ್ನಪ್ರದವೂ ಆಗಿದೆ. ತಾನು ಹೆಜ್ಜೆಯಿಡುವುದರಿಂದ ಈ ಖನನಪ್ರದೇಶವನ್ನು ರಾಕ್ಷಸಾದಿ ಪೀಡಾರಹಿತವನ್ನಾಗಿ ಮಾಡಿದೆ. ದುಃಖರಹಿತವಾಗಿ, ಸುಖರೂಪವಾದ ಸ್ವರ್ಗಕ್ಕೆ ಹೋಗಲು ಅಪೇಕ್ಷಿಸುವ ನಾವು ಈ ಮಣ್ಣನ್ನು ಅಗೆಯುವ ಪ್ರದೇಶದಿಂದ ಮಣ್ಣನ್ನು ಅಗೆಯುತ್ತೇವೆ.

ಜಿಘರ್ಮ್ಯ[ಜಿಘರ್ಮಿ(ಲ)ಅಗ್ನಿಂ]ಗ್ನಿಂ ಮನಸಾ ಘೃತೇನ ಪ್ರತಿಕ್ಷ್ಯಂತಂ ಭುವನಾನಿ ವಿಶ್ವಾ । ಪೃಥುಂ ತಿರಶ್ಚಾ ವಯಸಾ ಬೃಹಂತಂ ವ್ಯಚಿಷ್ಠಮನ್ನಗ್ಂ ರಭಸಂ ವಿದಾನಮ್ ॥

---

ಜಿಘರ್ಮಿ । (ಲ) । ಅಗ್ನಿಮ್ । ಮನಸಾ । ಘೃತೇನ । ಪ್ರತಿಕ್ಷ್ಯಂತಮಿತಿ ಪ್ರತಿ-ಕ್ಷ್ಯಂತಮ್ । ಭುವನಾನಿ । ವಿಶ್ವಾ ॥ ಪೃಥುಮ್ । ತಿರಶ್ಚಾ । ವಯಸಾ । ಬೃಹಂತಮ್ । ವ್ಯಚಿಷ್ಠಮ್ । ಅನ್ನಮ್ । ರಭಸಮ್ । ವಿದಾನಮ್ ॥

---

| ಮಂತ್ರ | ವಿನಿಯೋಗ |
|---|---|
| ಜಿಘರ್ಮ್ಯಗ್ನಿಂ...ವಿದಾನಮ್ ॥ | ಹಿರಣ್ಯವನ್ನು ಇಟ್ಟು ಆಜ್ಯಹೋಮವನ್ನು ಮಾಡುವ ಮನಸ್ವತೀಮಂತ್ರದ್ವಯದಲ್ಲಿ ಪ್ರಥಮ. |

---

✦ವಿಶ್ವಾ ಭುವನಾನಿ=ಸಮಸ್ತಲೋಕಗಳಲ್ಲಿಯೂ; ಪ್ರತಿಕ್ಷ್ಯಂತಮ್=ಪ್ರತ್ಯೇಕವಾಗಿ ವಾಸಿಸುವ; ತಿರಶ್ಚಾ ಪೃಥುಮ್=ಅಡ್ಡಲಾಗಿ ಬೆಳೆದಿರುವಿಕೆಯಿಂದ ವಿಸ್ತೀರ್ಣ ನಾಗಿರುವ; ವಯಸಾ=ವಯಸ್ಸಿನಿಂದಲೂ/ಕಾಲದಿಂದಲೂ; ಬೃಹಂತಮ್= ದೊಡ್ಡ ವನಾಗಿರುವ; ವ್ಯಚಿಷ್ಠಮ್=[ಭಕ್ಷ್ಯಭೋಜ್ಯಾದಿ ವಿವಿಧರೂಪವಾಗಿ] ಪೂಜಿತವಾದ; /ರುಚಿಕರವಾದ; ಅನ್ನಮ್=ಅನ್ನವನ್ನು; ರಭಸಮ್=ಶೀಘ್ರವಾಗಿ; ವಿದಾನಮ್= ಹೊಂದುವ; ಅಗ್ನಿಮ್=ಅಗ್ನಿದೇವನನ್ನು; ಮನಸಾ=ಮನಸ್ಸಿನಿಂದ ಧ್ಯಾನಿಸುತ್ತಾ; ಘೃತೇನ=ತುಪ್ಪವನ್ನು ಸುರಿಸುತ್ತಾ; ಜಿಘರ್ಮಿ=ಜ್ವಲನಗೊಳಿಸುತ್ತೇನೆ.

**ಆ ತ್ವಾ ಜಿಘರ್ಮಿ ವಚಸಾ ಘೃತೇನಾರಕ್ಷಸಾ ಮನಸಾ ತಜ್ಜುಷಸ್ವ । ಮರ್ಯಶ್ರೀಃ ಸ್ಪೃಹಯದ್ವರ್ಣೋ ಅಗ್ನಿರ್ನಾಭಿಮೃಶೇ ತನುವಾ ಜರ್ಹೃಷಾಣಃ ॥**

---

ಆ । ತ್ವಾ । ಜಿಘರ್ಮಿ । ವಚಸಾ । ಘೃತೇನ । ಅರಕ್ಷಸಾ । ಮನಸಾ । ತತ್ । ಜುಷಸ್ವ ॥ ಮರ್ಯಶ್ರೀರಿತಿ ಮರ್ಯ-ಶ್ರೀಃ । ಸ್ಪೃಹಯದ್ವರ್ಣ ಇತಿ ಸ್ಪೃಹಯತ್-ವರ್ಣಃ । ಅಗ್ನಿಃ । ನ । ಅಭಿಮೃಶ ಇತ್ಯಭಿ-ಮೃಶೇ । ತನುವಾ । ಜರ್ಹೃಷಾಣಃ ॥

---

| ಮಂತ್ರ | ವಿನಿಯೋಗ |
|---|---|
| ಆ ತ್ವಾ ಜಿಘರ್ಮಿ...ಜರ್ಹೃಷಾಣಃ ॥ | ಹಿರಣ್ಯಹೋಮದ ಎರಡನೆಯ ಮಂತ್ರ. |

---

✦[ಅಗ್ನಿಯೇ!]ತ್ವಾ=ನಿನ್ನನ್ನು; **ವಚಸಾ**=ಮಂತ್ರರೂಪವಾದ ವಚನದಿಂದ; **ಘೃತೇನ**=ತುಪ್ಪದಿಂದ; **ಆ ಜಿಘರ್ಮಿ**=ಸುತ್ತಲೂ ಸೇಚಿಸುತ್ತೇನೆ; **ತತ್**=ಅದನ್ನು; **ಅರಕ್ಷಸಾ**=ಕ್ರೌರ್ಯರಹಿತವಾದ/ಸೌಮ್ಯವಾದ; **ಮನಸಾ**=ಮನಸ್ಸಿನಿಂದ; **ಜುಷಸ್ವ**=ಸೇವಿಸು; **ಮರ್ಯಶ್ರೀಃ**=ಮನುಷ್ಯರಿಂದ ಆಶ್ರಯಿಸಲ್ಪಡುವ; **ಸ್ಪೃಹಯದ್ವರ್ಣಃ**=ಯಜಮಾನರಿಂದ ಅಪೇಕ್ಷಿಸಲ್ಪಡುವ ರೂಪವುಳ್ಳ; **ಅಗ್ನಿಃ**=ಅಗ್ನಿದೇವನು; **ನ ಅಭಿಮೃಶೇ**=ಮುಟ್ಟಲು/ತಿರಸ್ಕರಿಸಲು ಅಶಕ್ಯನು; [ಸಃ] **ತನುವಾ**=[ಅವನು] [ಆಜ್ಯಪಾನದಿಂದ ಪುಷ್ಟವಾದ] ಶರೀರದಿಂದ ಕೂಡಿ; **ಜರ್ಹೃಷಾಣಃ**=ಸಂತುಷ್ಟನಾಗಿರುತ್ತಾನೆ; [ಅವನು ನಮ್ಮನ್ನು ಅನುಗ್ರಹಿಸಲಿ]

---

**ಈ ಅಶ್ವಪಾದಪ್ರದೇಶದಲ್ಲಿ ಪ್ರಕಾಶಮಾನವಾಗಿಯೂ ಮಧುರವಾಗಿಯೂ ಇರುವ ನೀರನ್ನು ಚೆಲ್ಲುತ್ತೇನೆ.**

## ಪರಿ ವಾಜಪತಿಃ ಕವಿರಗ್ನಿರ್ ಹವ್ಯಾನ್ಯಕ್ರಮೀತ್ ।
## ದಧದ್ರತ್ನಾನಿ ದಾಶುಷೇ ॥

---

ಪರೀತಿ । ವಾಜಪತಿರಿತಿ ವಾಜ–ಪತಿಃ । ಕವಿಃ । ಅಗ್ನಿಃ । ಹವ್ಯಾನಿ । ಅಕ್ರಮೀತ್ ॥

ದಧತ್ । ರತ್ನಾನಿ । ದಾಶುಷೇ ॥

---

| ಮಂತ್ರ | ವಿನಿಯೋಗ |
| --- | --- |
| ಪರಿ...ದಾಶುಷೇ ॥ | ಮಣ್ಣನ್ನು ಅಗೆಯುವ ಪ್ರದೇಶವನ್ನು ಅಭ್ರಿಯಿಂದ ಗುರುತಿಸುವುದಕ್ಕಾಗಿರುವ ಮೂರು ಮಂತ್ರಗಳಲ್ಲಿ ಪ್ರಥಮಮಂತ್ರ. |

---

✦ವಾಜಪತಿಃ=ಅನ್ನರಕ್ಷಕನಾದ; ಕವಿಃ=ವಿದ್ವಾಂಸನಾದ; ಅಗ್ನಿಃ=ಅಗ್ನಿದೇವನು; ಹವ್ಯಾನಿ=ಹವ್ಯಗಳನ್ನು; ದಾಶುಷೇ=[ಹವಿಸ್ಸುಗಳನ್ನು] ಕೊಡುವ ಯಜಮಾನನಿಗೆ; ರತ್ನಾನಿ=ಮನೋಹರವಾದ ಧನಗಳನ್ನು; ದಧತ್=ಕೊಡುವವನಾಗಿ; ಪರಿ ಅಕ್ರಮೀತ್=ಸ್ವೀಕರಿಸಿದನು.

---

ಈ ಪ್ರದೇಶದಿಂದ ಫಲಭರಿತವಾದ ಸಸ್ಯವರ್ಗಗಳು ಹುಟ್ಟಿ ಚೆನ್ನಾಗಿ ಬೆಳೆಯಲಿ.

ಅಗ್ನಿಯು ಸರ್ವಲೋಕವಾಸಿ. ಈತನು ಗಾತ್ರದಿಂದಲೂ ಕಾಲದಿಂದಲೂ ದೊಡ್ಡವನು. ಬಗೆ ಬಗೆಯಾದ ರುಚಿಕರವಾದ ಅನ್ನವನ್ನು ಬೇಗನೆ ಪಡೆಯತಕ್ಕವನು. ಈ ಅಗ್ನಿಯನ್ನು ಮನಸ್ಸಿನಿಂದ ಧ್ಯಾನಿಸುತ್ತಾ ಹಿರಣ್ಯರೂಪವಾದ ಅಗ್ನಿಯನ್ನು–ತುಪ್ಪವನ್ನು ಸುರಿಸಿ–ಜ್ವಲಿಸುವಂತೆ/ಪ್ರಕಾಶಿಸುವಂತೆ ಮಾಡುತ್ತೇನೆ.

ಹಿರಣ್ಯಹೋಮದ ಈ ಎರಡನೆಯ ಮಂತ್ರದಲ್ಲಿ ಅಧ್ವರ್ಯುವು ಅಗ್ನಿಯನ್ನು ಈ ರೀತಿಯಾಗಿ ಪ್ರಾರ್ಥಿಸುತ್ತಾನೆ.

ಹೇ! ಅಗ್ನಿದೇವನೇ! ನಿನ್ನನ್ನು ಮಂತ್ರಗಳ ಹೇಳುವಿಕೆಯಿಂದ ಕೂಡಿದ ತುಪ್ಪದ ಧಾರೆಯಿಂದ ಸುತ್ತಲೂ ಸೇಚಿಸುತ್ತೇನೆ. ಅದನ್ನು ನೀನು ಶಾಂತವಾದ ಮನಸ್ಸಿನಿಂದ

**ಪರಿ ತ್ವಾಽಗ್ನೇ ಪುರಂ ವಯಂ ವಿಪ್ರಗ್ಂ ಸಹಸ್ಯ ಧೀಮಹಿ ।**

**ಧೃಷದ್ವರ್ಣಂ ದಿವೇದಿವೇ ಭೇತ್ತಾರಂ ಭಂಗುರಾವತಃ ॥**

---

ಪರೀತಿ । ತ್ವಾ । ಅಗ್ನೇ । ಪುರಮ್ । ವಯಮ್ । ವಿಪ್ರಮ್ । ಸಹಸ್ಯ । ಧೀಮಹಿ ॥

ಧೃಷದ್ವರ್ಣಮಿತಿ ಧೃಷತ್ - ವರ್ಣಮ್ । ದಿವೇದಿವ ಇತಿ ದಿವೇ-ದಿವೇ ।

ಭೇತ್ತಾರಮ್ । ಭಂಗುರಾವತ ಇತಿ ಭಂಗುರ-ವತಃ ॥

---

| ಮಂತ್ರ | ವಿನಿಯೋಗ |
|---|---|
| ಪರಿ ತ್ವಾಗ್ನೇ...ಭಂಗುರಾವತಃ ॥ | ಎರಡನೆಯ ಮಂತ್ರ. |

---

✦ ಸಹಸ್ಯ ಅಗ್ನೇ=ಬಲದಲ್ಲಿಯೇ ಜನಿಸಿರುವ ಬಲವಂತನಾದ ಅಗ್ನಿದೇವನೇ! **ವಯಮ್**=ನಾವು; **ಪುರಮ್**=[ನಾವು ಅಪೇಕ್ಷಿಸಿದ ಇಷ್ಟಾರ್ಥಗಳನ್ನು]ಪೂರೈಸುವ; **ವಿಪ್ರಮ್**=ಬ್ರಾಹ್ಮಣಾಭಿಮಾನಿಯಾದ; **ಧೃಷದ್ವರ್ಣಮ್**=[ಶತ್ರುಗಳಿಗೆ] ಭಯ ವನ್ನುಂಟುಮಾಡುವ ರೂಪವುಳ್ಳ; **ದಿವೇದಿವೇ**=ಪ್ರತಿದಿನದಲ್ಲಿಯೂ; **ಭಂಗುರಾವತಃ**=ಯಜ್ಞಭಂಗಕಾರಕರಾದ ರಾಕ್ಷಸಾದಿಗಳನ್ನು; **ಭೇತ್ತಾರಮ್**=ನಾಶಪಡಿಸುವ; **ತ್ವಾ**=ನಿನ್ನನ್ನು; **ಪರಿ ಧೀಮಹಿ**=ಎಲ್ಲ ಕಡೆಗಳಲ್ಲಿಯೂ ಸ್ವೀಕರಿಸುತ್ತೇವೆ.

---

ಸೇವಿಸು. ಮನುಷ್ಯರಿಗೆ ಆಶ್ರಯದಾತನೂ, ಯಜಮಾನರು ಮೆಚ್ಚುವಂತಹ ರೂಪ ವುಳ್ಳವನೂ ಆದ ಅಗ್ನಿದೇವನು ಯಾರಿಂದಲೂ ಮುಟ್ಟಲು ಅಶಕ್ಯನು. ಆಜ್ಯಪಾನ ದಿಂದ ಸಂತುಷ್ಟನಾದ ಅವನು ನಮ್ಮನ್ನು ಕಾಯಲಿ.

ಅಗ್ನಿದೇವನು ಬಲವಂತನು; ಬ್ರಾಹ್ಮಣಾಭಿಮಾನಿಯು; ವಸ್ತುಗಳ ಶುದ್ಧಿಯನ್ನು ಹೇಳುವ ಪ್ರಸಂಗದಲ್ಲಿ 'ಪುನರ್ದಾಹೇನ ಮೃನ್ಮಯಮ್' ಎಂದಿದೆ. ಮಣ್ಣು/ ಮಣ್ಣಿನ ಪಾತ್ರೆಯು ಅಗ್ನಿಯಲ್ಲಿ ಸುಡುವುದರಿಂದ ಶುದ್ಧವಾಗುತ್ತದೆ.

ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ । ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ [೯–2]

[ಪ್ರತೂರ್ವನ್ಥ್ಸೂರ್ಯಸ್ಯ ತಿಷ್ಠ ಜಘರ್ಮಿ ಭೇತ್ತಾರಂ ವಿಗ್ಂಶತಿಶ್ಚ ॥]

---

ತ್ವಮ್ । ಅಗ್ನೇ । ದ್ಯುಭಿರಿತಿ ದ್ಯು–ಭಿಃ । ತ್ವಮ್ । ಆಶುಶುಕ್ಷಣಿಃ । ತ್ವಮ್ । ಅದ್ಭ್ಯ ಇತ್ಯತ್ –ಭ್ಯಃ । ತ್ವಮ್ । ಅಶ್ಮನಃ । ಪರಿ ॥ ತ್ವಮ್ । ವನೇಭ್ಯಃ । ತ್ವಮ್ । ಓಷಧೀಭ್ಯ ಇತ್ಯೋಷಧಿ–ಭ್ಯಃ । ತ್ವಮ್ । ನೃಣಾಮ್ । ನೃಪತ ಇತಿ ನೃ–ಪತೇ । ಜಾಯಸೇ । ಶುಚಿಃ ॥ (೯) ॥

---

| ಮಂತ್ರ | ವಿನಿಯೋಗ |
|---|---|
| ತ್ವಮಗ್ನೇ...ಶುಚಿಃ ॥ | ಖನನಭೂಮಿಯನ್ನು ಗುರುತಿಸುವ ಮೂರನೆಯ ಮಂತ್ರವಿದು. |

---

✦ಅಗ್ನೇ=ಅಗ್ನಿದೇವನೇ! ತ್ವಮ್=ನೀನು; ದ್ಯುಭಿಃ=ದೇವಲೋಕನಿಮಿತ್ತವಾಗಿ/ ಯಾಗದ ಮೂಲಕವಾಗಿ ಸ್ವರ್ಗವನ್ನು ಹೊಂದುವ ನಿಮಿತ್ತವಾಗಿ; ಜಾಯಸೇ= ಉತ್ಪನ್ನನಾಗುತ್ತೀಯೆ; ತ್ವಮ್ ಆಶುಶುಕ್ಷಣಿಃ=ನೀನು ಆರ್ದ್ರವಾದ ಭೂಮಿಯನ್ನು ಬೇಗ ಒಣಗಿಸತಕ್ಕವನು; ತ್ವಮ್ ಅದ್ಭ್ಯಃ=ನೀನು ನೀರಿನಿಂದ [ಸಿಡಿಲಾಗಿ]; ಜಾಯಸೇ =ಪರಿಣಮಿಸುವೆ; ತ್ವಮ್=ನೀನು; ಅಶ್ಮನಃ ಪರಿ ಜಾಯಸೇ=ಕಲ್ಲುಗಳ ಪರಸ್ಪರ ಘರ್ಷಣೆಯಿಂದ ಜನಿಸುವೆ; ತ್ವಮ್ ವನೇಭ್ಯಃ ಜಾಯಸೇ=ನೀನು ಕಾಡಿನಲ್ಲಿ ದಾವಾಗ್ನಿರೂಪನಾಗಿ ಜನಿಸುವೆ; ತ್ವಮ್ ಓಷಧೀಭ್ಯಃ ಜಾಯಸೇ=ನೀನು ಸಸ್ಯವರ್ಗದಿಂದ ಭೈಷಜ್ಯವನ್ನು ಉಂಟುಮಾಡುವೆ/ಬಿದಿರುಗಳ ಘರ್ಷಣೆಯಿಂದ ಜನಿಸುವೆ; ನೃಣಾಮ್ ನೃಪತೇ=ಮಾನವರೆಲ್ಲರಿಗೂ ರಕ್ಷಕನಾಗಿರುವವನೇ! ತ್ವಮ್=ನೀನು; ಶುಚಿಃ= [ಅಪವಿತ್ರ ವಸ್ತುಗಳನ್ನು] ಶುದ್ಧಿಗೊಳಿಸುವವನಾಗಿ; ಜಾಯಸೇ=ಹುಟ್ಟುವೆ/ ಶುದ್ಧಿಗೊಳಿಸುವೆ.

ಇಂತಹ ಅಗ್ನಿಯನ್ನೂ ಅವನ ಉತ್ಪತ್ತಿಯನ್ನೂ ಪ್ರಶಂಸಿಸಿ ಬಹುವಿಧವಾಗಿ ಸ್ತುತಿಸಲಾಗಿದೆ. ಅಗ್ನಿಯ ಸ್ತುತಿಯು ಇಲ್ಲಿ ತಾತ್ಪರ್ಯವಾಗಿದೆ.

## ವಿನಿಯೋಗಸಂಗ್ರಹ

[1]ಇಮಾಂ ರಜ್ಜುಂ ಸಮಾದಾಯ [2]ಪ್ರತೂ ತುರಗಬಂಧನಮ್ ।
[3]ಯುಂಜಾ ಗರ್ದಭಮಾಬಧ್ಯ [4-6] ಯೋಗೇ ಯಾಂತಿ ತ್ರಿಭಿರ್ಮೃದಮ್ ॥
ಇಮೋ[7]ಂತಾದಗ್ನಿಮಿತ್ಯಾದೇರ್ಗಮನೇ ದ್ವೇಷ್ಯಮಂತ್ರಣಮ್ ।
[8]ಷ್ಯಾಮೋಽಂತೇನ ವಪಾ ಜಪ್ಯಾ [9]ರಾಮೋಽಂತಾದ್ದ್ವೇಷ್ಯಮಂತ್ರಣಂ ॥
10 ಅನ್ವಗ್ನಿ ಗಚ್ಛೇದಾಗತ್ಯ 11-12 ದ್ವಾಭ್ಯಾಮಾಕ್ರಮಯೇದ್ಭುವಮ್ ।
[13]ದ್ಯೌಸ್ತೇಽಶ್ವಪೃಷ್ಠಂ ಸಂಮಾರ್ಷ್ಟಿ ಹ್ಯತ್ರಾಂ [14-15]ದ್ವಾಭ್ಯಾಂ ತದುತ್ತ್ರಮಃ ॥
[16]ಅಪಃ ಪದೇಽಪೋ ನಿನಯೇಜ್ಜಘದ್ವಾಭ್ಯಾಂ [17-18]ಜುಹೋತಿ ಹಿ ।
[19-21]ಪರಿ ತ್ರಿಭಿಃ ಪರಿಲಿಖೇದೇಕವಿಂಶತಿರೀರಿತಾಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–21

ಉ❀ಉಉ❀ಉ

## ॥ ತೃತೀಯೋಽನುವಾಕಃ ॥

ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ
ಪೂಷ್ಣೋ ಹಸ್ತಾಭ್ಯಾಂ ಪೃಥಿವ್ಯಾಃ ಸಧಸ್ಥೇಽಗ್ನಿಂ
ಪುರೀಷ್ಯಮಂಗಿರಸ್ವತ್ಖನಾಮಿ ।

---

ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಅಶ್ವಿನೋಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಪೂಷ್ಣಃ । ಹಸ್ತಾಭ್ಯಾಮ್ । ಪೃಥಿವ್ಯಾಃ । ಸಧಸ್ಥ ಇತಿ ಸಧ-ಸ್ಥೇ । ಅಗ್ನಿಮ್ । ಪುರೀಷ್ಯಮ್ । ಅಂಗಿರಸ್ವತ್ । ಖನಾಮಿ ॥

---

ಎರಡನೆಯ ಅನುವಾಕದಲ್ಲಿ ಮೃದಾಕ್ರಮಣವು ಹೇಳಲ್ಪಟ್ಟಿತು. ಈ ಮೂರನೆಯ ಅನುವಾಕದಲ್ಲಿ ಮೃತ್ಖನನವು ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
|---|---|
| ದೇವಸ್ಯ...ಖನಾಮಿ ॥ | ಮೃತ್ಖನನದಲ್ಲಿ ವಿಹಿತವಾದ ಎರಡು ಮಂತ್ರಗಳಲ್ಲಿ ಮೊದಲನೆಯ ಮಂತ್ರ. |

---

+ದೇವಸ್ಯ ಸವಿತುಃ ಪ್ರಸವೇ=ಪ್ರೇರಕನಾದ ಪರಮೇಶ್ವರನ ಅನುಮತಿಯಾಗಲಾಗಿ; ಅಶ್ವಿನೋಃ ಬಾಹುಭ್ಯಾಮ್=ದೇವವೈದ್ಯರಾದ ಅಶ್ವಿನೀದೇವತೆಗಳ ತೋಳುಗಳಿಂದಲೂ; ಪೂಷ್ಣಃ ಹಸ್ತಾಭ್ಯಾಮ್=ಪೋಷಕನಾದ ಪೂಷದೇವನ ಕೈಗಳಿಂದಲೂ; ಪೃಥಿವ್ಯಾಃ=ಖನನಭೂಮಿಯ; ಸಧಸ್ಥೇ=ಮೇಲ್ಭಾಗದಲ್ಲಿ; ಪುರೀಷ್ಯಮ್=ಪಾಂಸುಯೋಗ್ಯವಾದ; ಅಗ್ನಿಮ್ ತ್ವಾ=ಉಖಾಸಾಧಕವಾದ ನಿನ್ನನ್ನು; [ಮೃತ್ತಿಕೆ] ಅಂಗಿರಸ್ವತ್=ಅಂಗಿರಸಮುನಿಗಳಂತೆ; ಖನಾಮಿ=ಅಗೆಯುತ್ತೇನೆ.

ಜ್ಯೋತಿಷ್ಮಂತಂ ತ್ವಾಽಗ್ನೇ ಸುಪ್ರತೀಕಮಜಸ್ರೇಣ ಭಾನುನಾ ದೀದ್ಯಾನಮ್ । ಶಿವಂ ಪ್ರಜಾಭ್ಯೋಽಹಿಗ್ಂಸಂತಂ ಪೃಥಿವ್ಯಾಃ ಸಧಸ್ಥೇಽಗ್ನಿಂ ಪುರೀಷ್ಯಮಂಗಿರಸ್ವತ್ಖನಾಮಿ ॥

---

ಜ್ಯೋತಿಷ್ಮಂತಮ್ । ತ್ವಾ । ಅಗ್ನೇ । ಸುಪ್ರತೀಕಮಿತಿ ಸು-ಪ್ರತೀಕಮ್ । ಅಜಸ್ರೇಣ । ಭಾನುನಾ । ದೀದ್ಯಾನಮ್ ॥ ಶಿವಮ್ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ಅಹಿಗ್ಂಸಂತಮ್ । ಪೃಥಿವ್ಯಾಃ । ಸಧಸ್ಥ ಇತಿ ಸಧ-ಸ್ಥೇ । ಅಗ್ನಿಮ್ । ಪುರೀಷ್ಯಮ್ । ಅಂಗಿರಸ್ವತ್ । ಖನಾಮಿ ॥

---

| ಮಂತ್ರ | ವಿನಿಯೋಗ |
|---|---|
| ಜ್ಯೋತಿಷ್ಮಂತಂ ತ್ವಾ...ಖನಾಮಿ ॥ | ಮೃತ್ಖನನದಲ್ಲಿ ಎರಡನೆಯ ಮಂತ್ರ. |

---

+ಅಗ್ನೇ=ಅಗ್ನಿಯೇ! **ಜ್ಯೋತಿಷ್ಮಂತಮ್**=ಜ್ವಾಲಾಯುಕ್ತವಾದ; **ಸುಪ್ರತೀಕಮ್**=ಸುಮುಖನಾದ; **ಅಜಸ್ರೇಣ**=ನಿರಂತರವಾದ; **ಭಾನುನಾ**=ಕಿರಣಗಳಿಂದ; **ದೀದ್ಯಾನಮ್**=ಪ್ರಕಾಶಿಸುವ; **ಪ್ರಜಾಭ್ಯಃ**=ಪ್ರಜೆಗಳ ವಿಷಯದಲ್ಲಿ; **ಶಿವಮ್**=ಶಾಂತನಾಗಿರುವ; **ಅಹಿಗ್ಂಸಂತಮ್**=ಹಿಂಸೆ ಮಾಡದಿರುವ; **ಪುರೀಷ್ಯಮ್**=ಪಾಂಸುಯೋಗ್ಯವಾದ; **ಅಗ್ನಿಮ್ ತ್ವಾ**=ಉಖಾಸಾಧನವಾದ ನಿನ್ನನ್ನು [ಮೃತ್ತಿಕೆಯನ್ನು]; **ಪೃಥಿವ್ಯಾಃ ಸಧಸ್ಥೇ**=ಭೂಮಿಯ ಮೇಲ್ಭಾಗದಲ್ಲಿ; **ಅಂಗಿರಸ್ವತ್**=[ಹಿಂದೆ] ಮುನಿಗಳಾದ ಅಂಗಿರಸರಂತೆ; **ಖನಾಮಿ**=ಅಗೆಯುತ್ತೇನೆ.

---

ಪರಮೇಶ್ವರನ ಅನುಮತಿಯಿಂದ ಪಾಂಸುಯೋಗ್ಯವಾದ ಮೃತ್ತಿಕೆಯನ್ನು ಅಗೆಯುತ್ತೇನೆ.

ಇಲ್ಲಿಯೂ ಉಖೆಯಲ್ಲಿ ಸ್ಥಾಪಿಸುವ ಅಗ್ನಿಗೂ ಉಖಾಸಾಧನವಾದ ಮೃತ್ತಿಕೆಗೂ

ಅಪಾಂ ಪೃಷ್ಠಮಸಿ ಸಪ್ರಥಾ ಉರ್ವಗ್ನಿಂ
ಭರಿಷ್ಯದಪರಾವಪಿಷ್ಠಮ್ । ವರ್ಧಮಾನಂ ಮಹ ಆ ಚ
ಪುಷ್ಕರಂ ದಿವೋ ಮಾತ್ರಯಾ ವರಿಣಾ ಪ್ರಥಸ್ವ ।

---

ಅಪಾಮ್ । ಪೃಷ್ಠಮ್ । ಅಸಿ । ಸಪ್ರಥಾ ಇತಿ ಸ-ಪ್ರಥಾಃ । ಉರು । ಅಗ್ನಿಮ್ ।
ಭರಿಷ್ಯತ್ । ಅಪರಾವಪಿಷ್ಠಮಿತ್ಯಪರಾ-ವಪಿಷ್ಠಮ್ ॥ ವರ್ಧಮಾನಮ್ । ಮಹಃ ।
ಐತಿ । ಚ । ಪುಷ್ಕರಮ್ । ದಿವಃ । ಮಾತ್ರಯಾ । ವರಿಣಾ । ಪ್ರಥಸ್ವ ॥

---

| ಮಂತ್ರ | ವಿನಿಯೋಗ |
|---|---|
| ಅಪಾಂ...ಪ್ರಥಸ್ವ ॥ | ತಾವರೆ ಎಲೆಯನ್ನು ತಂದು ದೊನ್ನೆಯಂತೆ ಮಾಡಲು |

---

✦[ಎಲೈ! ತಾವರೆಯ ಎಲೆಯೇ!]**ಅಪಾಮ್ ಪೃಷ್ಠಮ್ ಅಸಿ**=[ನೀನು] ನೀರಿನ ಮೇಲೆ ಬೆಳೆದಿರುತ್ತೀಯೆ. **ಸಪ್ರಥಾಃ**=ವಿಸ್ತೃತವಾಗಿರುವೆ; **ಉರು ಅಗ್ನಿಮ್**=ಹೆಚ್ಚಾದ ಅಗ್ನಿಯನ್ನು [ಮಣ್ಣನ್ನು]; **ಭರಿಷ್ಯತ್**=ಧರಿಸಲು ತಕ್ಕಷ್ಟು ವಿಶಾಲವಾಗಿರುವೆ; **ಅಪರಾವಪಿಷ್ಠಮ್**=ನಾಶರಹಿತನಾಗಿರುವೆ; **ವರ್ಧಮಾನಮ್**=[ನೀರಿನ ಸಂಬಂಧ ದಿಂದ] ವೃದ್ಧಿ ಹೊಂದುತ್ತಿರುವೆ; **ಮಹಃ**=[ಜಲಸಂಪರ್ಕರಹಿತವೆಂದು] ಸ್ತುತಿಸಲ್ಪ ಡುವೆ; **ಚ**=ಮತ್ತು; **ಆ ಪುಷ್ಕರಮ್**=ಸುತ್ತಲೂ ಪುಷ್ಟಿಕರನು. [ಇಂತಹ ನೀನು] **ಮಾತ್ರಯಾ**=ಪರಿಮಾಣದಿಂದ; **ದಿವಃ ವರಿಣಾ**=ಆಕಾಶಕ್ಕಿಂತಲೂ ಆಧಿಕ್ಯದಿಂದ ಕೂಡಿದವನಾಗಿ; **ಆ ಪ್ರಥಸ್ವ**= ಸುತ್ತಲೂ ವಿಸ್ತಾರವಾಗಿ ವೃದ್ಧಿಯನ್ನು ಹೊಂದು.

---

ಅಭೇದವನ್ನು ಕಲ್ಪಿಸಿ ಹೇಳಲಾಗಿದೆ. ಈ ಪ್ರಕರಣದಲ್ಲಿ ಇಂತಹ ಪ್ರಯೋಗವು ಮತ್ತೆ ಮತ್ತೆ ಬರಲಿದೆ.

ಉಖೆಯು ತನ್ನಲ್ಲಿ ಇರುವ ಅಗ್ನಿಯ ಮೂಲಕ ಜ್ವಾಲಾಯುಕ್ತವಾಗಿದೆ. ಯಾವಾಗಲೂ

**ಶರ್ಮ ಚ ಸ್ಥೋ [ಸ್ಥಃ (೧೦)] ವರ್ಮ ಚ ಸ್ಥೋ ಅಚ್ಛಿದ್ರೇ ಬಹುಲೇ ಉಭೇ । ವ್ಯಚಸ್ವತೀ ಸಂ ವಸಾಥಾಂ ಭರ್ತಮಗ್ನಿಂ ಪುರೀಷ್ಯಮ್ ॥**

---

ಶರ್ಮ । ಚ । ಸ್ಥಃ ।(೧೦)। ವರ್ಮ । ಚ । ಸ್ಥಃ । ಅಚ್ಛಿದ್ರೇ ಇತಿ । ಬಹುಲೇ ಇತಿ । ಉಭೇ ಇತಿ ॥ ವ್ಯಚಸ್ವತೀ ಇತಿ । ಸಮಿತಿ । ವಸಾಥಾಮ್ । ಭರ್ತಮ್ । ಅಗ್ನಿಮ್ । ಪುರೀಷ್ಯಮ್ ॥

---

| ಮಂತ್ರ | ವಿನಿಯೋಗ |
|---|---|
| **ಶರ್ಮ ಚ ಸ್ಥೋ...ಪುರೀಷ್ಯಮ್ ॥** | ಕೃಷ್ಣಾಜಿನದ ಮೇಲೆ ಪುಷ್ಕರಪರ್ಣವನ್ನಿಡಲು ಪ್ರಥಮಮಂತ್ರ. |

---

✦[ಎಲೈ! ಕೃಷ್ಣಾಜಿನ-ಪುಷ್ಕರಪರ್ಣಗಳೇ!**ಶರ್ಮ ಚ ಸ್ಥಃ**=[ನೀವು] ಸುಖಕಾರಿಗಳಾಗಿದ್ದೀರಿ. **ವರ್ಮ ಚ ಸ್ಥಃ**=ಕವಚದಂತೆ ರಕ್ಷಕರೂ ಆಗಿರುವಿರಿ; **ಉಭೇ**= ನೀವಿಬ್ಬರೂ; **ಅಚ್ಛಿದ್ರೇ**=ರಂಧ್ರವಿಲ್ಲದವರೂ; **ಬಹುಲೇ**=ವಿಸ್ತೀರ್ಣರಾಗಿರುವವರೂ [ಆಗಿರುತ್ತೀರಿ]; **ವ್ಯಚಸ್ವತೀ**=ಆಚ್ಛಾದನೆಗೆ ಯೋಗ್ಯವಾದ ಆಕಾರವುಳ್ಳವರಾಗಿರುತ್ತೀರಿ; **ಸಂ ವಸಾಥಾಮ್**=[ಅಗ್ನಿಯನ್ನು/ಮೃತ್ತಿಕೆಯನ್ನು] ಚೆನ್ನಾಗಿ ಮುಚ್ಚಿರಿ; **ಪುರೀಷ್ಯಮ್**=ಉಖೆಗೆ ಯೋಗ್ಯವಾದ; **ಅಗ್ನಿಮ್**=[ಅಗ್ನಿಯನ್ನು] ಮಣ್ಣನ್ನು; **ಭರ್ತಮ್** =ಧಾರಣೆ ಮಾಡಿರಿ.

---

ಇರುವ ಕಿರಣಗಳಿಂದ ಪ್ರಕಾಶಮಾನವಾಗಿದೆ. ಪ್ರಜೆಗಳಿಗೆ ಮಂಗಳಕರವಾಗಿದೆ. ಪ್ರಜೆಗಳಿಗೆ ಹಿಂಸೆಯನ್ನು ಮಾಡುವುದಿಲ್ಲ. ಉಖೆಗೆ ಸಾಧನವಾದ ಇಂತಹ ಮಣ್ಣನ್ನು ಈ ಭೂಪ್ರದೇಶದ ಮೇಲ್ಭಾಗದಿಂದ ಮುನಿಗಳಾದ ಅಂಗಿರಸರಂತೆ ಅಗೆಯುತ್ತೇನೆ. ಪುಷ್ಕರಪರ್ಣವೇ! ನೀನು ನೀರಿನ ಮೇಲ್ಭಾಗದಲ್ಲಿರುವೆ. ವಿಸ್ತಾರವಾಗಿರುವೆ.

ಸಂ ವಸಾಥಾಗ್ಂ ಸುವರ್ವಿದಾ ಸಮೀಚೀ ಉರಸಾ ತ್ಮನಾ ।

ಅಗ್ನಿಮಂತರ್ಭರಿಷ್ಯಂತೀ ಜ್ಯೋತಿಷ್ಮಂತಮಜಸ್ರಮಿತ್ ॥

---

ಸಮಿತಿ । ವಸಾಥಾಮ್ । ಸುವರ್ವಿದೇತಿ ಸುವಃ–ವಿದಾ । ಸಮೀಚೀ ಇತಿ । ಉರಸಾ ।

ತ್ಮನಾ ॥ ಅಗ್ನಿಮ್ । ಅಂತಃ । ಭರಿಷ್ಯಂತೀ ಇತಿ । ಜ್ಯೋತಿಷ್ಮಂತಮ್ । ಅಜಸ್ರಮ್ ।

ಇತ್ ॥

---

| ಮಂತ್ರ | ವಿನಿಯೋಗ |
| --- | --- |
| ಸಂವಸಾಥಾಂ...ಇತ್ ॥ | ಕೃಷ್ಣಾಜಿನದ ಮೇಲೆ ಪುಷ್ಕರಪರ್ಣವನ್ನಿಡಲು ಎರಡನೆಯ ಮತ್ತು ಕಡೆಯ ಮಂತ್ರ. |

---

+[ಕೃಷ್ಣಾಜಿನ–ಪುಷ್ಕರಪರ್ಣಗಳೇ!]**ಸುವರ್ವಿದಾ**=ಸ್ವರ್ಗಲಾಭಸಾಧನವಾದ; **ಸಮೀಚೀ**=ಮಣ್ಣನ್ನು ಕಟ್ಟುವುದಕ್ಕೆ ಅನುಕೂಲವಾಗಿರುವ; **ತ್ಮನಾ**=ತಾವಾಗಿಯೇ; **ಉರಸಾ**=ಎದೆಯಿಂದ/ಮಧ್ಯದಿಂದ; **ಅಜಸ್ರಮ್ ಇತ್**=ನಿರಂತರವಾಗಿ; **ಜ್ಯೋತಿಷ್ಮಂತಮ್**=ಪ್ರಕಾಶಮಾನವಾಗಿರುವ; **ಅಗ್ನಿಮ್**=[ಉಖಾಸಾಧನವಾದ] ಅಗ್ನಿಯನ್ನು/ಮಣ್ಣನ್ನು; **ಅಂತಃ ಭರಿಷ್ಯಂತೀ**=ಒಳಗೆ ಧರಿಸುವ ನೀವಿಬ್ಬರೂ; [ಪುರೀಷ್ಯಮ್ ಅಗ್ನಿಮ್=ಅಗ್ನಿಯನ್ನು/ಮಣ್ಣನ್ನು] **ಸಂವಸಾಥಾಮ್**=ಚೆನ್ನಾಗಿ ಆಚ್ಛಾದಿಸಿರಿ.

---

ಆದುದರಿಂದ ಉಖಾಸಾಧನವಾದ ಬಹುಮೃತ್ತಿಕೆಯನ್ನು ಭರಿಸಲು ಸಮರ್ಥನು. ನಾಶರಹಿತನು. ನೀರಿನ ಸಂಬಂಧದಿಂದ ವೃದ್ಧಿ ಹೊಂದುತ್ತಿರುವವನು. ನೀನು ನೀರಿನ ಸಂಪರ್ಕವಿಲ್ಲದವನೆಂಬ ಸ್ತುತಿಗೆ ಅರ್ಹನು. ಅಗ್ನಿಧಾರಣೆಯಿಂದ ಪುಷ್ಟಿಹೇತುವಾಗಿರುವೆ. ನೀನು ಅಗ್ನಿಧಾರಣೆಗಾಗಿ ಆಕಾಶಕ್ಕಿಂತಲೂ ಅಧಿಕವಾಗಿ ಹರಡಿಕೋ. ಇದು ಪುಷ್ಕರಪರ್ಣದ ಸ್ತುತಿ.

ಮೃತ್ಖನನಪ್ರದೇಶದ ಉತ್ತರಭಾಗದಲ್ಲಿ ಪೂರ್ವಮುಖವಾಗಿರುವಂತೆ ಕೂದಲು ಮೇಲೆ ಬರುವಂತೆ ಕೃಷ್ಣಾಜಿನವನ್ನು ಹರಡಿ ಅದರ ಮೇಲೆ ಮೇಲ್ಮುಖವಾಗಿ ಪುಷ್ಕರ

ಪುರೀಷ್ಯೋऽಸಿ ವಿಶ್ವಭರಾಃ । ಅಥರ್ವಾ ತ್ವಾ ಪ್ರಥಮೋ ನಿರಮಂಥದಗ್ನೇ ॥

---

ಪುರೀಷ್ಯಃ । ಅಸಿ । ವಿಶ್ವಭರಾ ಇತಿ ವಿಶ್ವ-ಭರಾಃ ॥ ಅಥರ್ವಾ । ತ್ವಾ । ಪ್ರಥಮಃ । ನಿರಿತಿ । ಅಮಂಥತ್ । ಅಗ್ನೇ ॥

---

| ಮಂತ್ರ | ವಿನಿಯೋಗ |
|---|---|
| ಪುರೀಷ್ಯೋऽಸಿ...ಅಗ್ನೇ ॥ | ಮೃತ್ಖನನಪ್ರದೇಶದ ಅಭಿಮಂತ್ರಣಕ್ಕಾಗಿ. |

---

✦[ಎಲೈ! ಮೃತ್ಖನನಪ್ರದೇಶವೇ!] [ನೀನು]ಪುರೀಷ್ಯಃ ಅಸಿ=ಉಖಾಸಾಧನವಾದ ಮೃತ್ತಿಕೆಗೆ ಯೋಗ್ಯವಾಗಿರುವೆ; ವಿಶ್ವಭರಾಃ=ಉಖೆಯೆಲ್ಲವನ್ನೂ ಭರಿಸಲು ಯೋಗ್ಯವಾಗಿರುವೆ. ಅಗ್ನೇ=ಅಗ್ನಿಯೇ! ಅಥರ್ವಾ=ಅಥರ್ವಮುನಿಯು; ಪ್ರಥಮಃ= ಮೊದಲನೆಯವನಾಗಿ; ತ್ವಾ ನಿರಮಂಥತ್=ನಿನ್ನನ್ನು ಕಡೆದನು/ಚೆನ್ನಾಗಿ ಉಪಯೋಗಿಸಿಕೊಂಡನು.

---

ಪರ್ಣವನ್ನು ಇಡಬೇಕು.

ಕೃಷ್ಣಾಜಿನ-ಪುಷ್ಕರಪರ್ಣಗಳು ಯಾಗಕ್ಕೆ ಸಾಧನವಾಗಿ ಯಜಮಾನಾದಿಗಳಿಗೆ ಸುಖವನ್ನು ಕೊಡುತ್ತವೆ. ಕವಚದಂತೆ ರಕ್ಷಣೆಯನ್ನು ನೀಡುತ್ತವೆ. ರಂಧ್ರವಿಲ್ಲದವುಗಳಾಗಿವೆ. ತುಂಬಾ ವಿಸ್ತಾರವಾಗಿವೆ. ದೊನ್ನೆಗಳಂತೆ ಮಣ್ಣನ್ನು ಮುಚ್ಚಲು ಸಮರ್ಥಗಳಾಗಿವೆ. ಆ ಎರಡೂ ಉಖಾಸಾಧನವಾದ ಅಗ್ನಿಯನ್ನು [ಮಣ್ಣನ್ನು] ಚೆನ್ನಾಗಿ ಮುಚ್ಚಿ ಧರಿಸಲಿ.

ಹೇ! ಕೃಷ್ಣಾಜಿನ-ಪುಷ್ಕರಪರ್ಣಗಳೇ! ನೀವು ನಿರಂತರವಾಗಿ ಪ್ರಕಾಶಮಾನವಾಗಿರುವ ಅಗ್ನಿಯನ್ನು ಒಳಗೆ ಧರಿಸಿರುವಿರಿ. ಅಗ್ನಿಯನ್ನು/ಮಣ್ಣನ್ನು ಚೆನ್ನಾಗಿ ಮುಚ್ಚಿರಿ.

ಇಲ್ಲಿಯೂ ಯಜ್ಞಸಾಧನವಾದ ಅಗ್ನಿಗೂ ಉಖಾಸಾಧಕವಾದ ಮೃತ್ತಿಕೆಗೂ ಅಭೇದವನ್ನು ಕಲ್ಪಿಸಿ ವರ್ಣಿಸಲಾಗಿದೆ.

ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ ।

ಮೂರ್ಧ್ನೋ ವಿಶ್ವಸ್ಯ ವಾಘತಃ ॥

---

ತ್ವಾಮ್ । ಅಗ್ನೇ । ಪುಷ್ಕರಾತ್ । ಅಧೀತಿ । ಅಥರ್ವಾ । ನಿರಿತಿ । ಅಮಂಥತ ॥

ಮೂರ್ಧ್ನಃ। ವಿಶ್ವಸ್ಯ । ವಾಘತಃ ॥

---

| ಮಂತ್ರ | ವಿನಿಯೋಗ |
|---|---|
| ತ್ವಾಮಗ್ನೇ...ವಾಘತಃ ॥ | *ಮೃತ್ಸಂಭರಣವನ್ನು ಮಾಡಲು ಮೊದಲನೆ ಅಥವಾ ಎರಡನೆಯ ಮಂತ್ರ. |

---

✦ಅಗ್ನೇ=ಅಗ್ನಿಯೇ! ಅಥರ್ವಾ=ಅಥರ್ವಮುನಿಯು; ತ್ವಾಮ್=ನಿನ್ನನ್ನು; ವಿಶ್ವಸ್ಯ ವಾಘತಃ=ವಿಶ್ವವನ್ನು ಧರಿಸಿರುವ; ಮೂರ್ಧ್ನಃ=ತಲೆಯಂತೆ ಮುಖ್ಯವಾಗಿರುವ; ಪುಷ್ಕರಾತ್ ಅಧಿ=ಪುಷ್ಕರಪತ್ರದ ಮೇಲೆ; ನಿರಮಂಥತ=ಕಡೆದನು/ಕಡೆದು ಬೆಣ್ಣೆಯಂತೆ ಅಗ್ನಿಯನ್ನು ಪಡೆದನು.

---

ಎಲೈ! ಮೃತ್ಖನನಪ್ರದೇಶವೇ! ನೀನು ಸಮಸ್ತವಾದ ಅಗ್ನಿ/ಮೃತ್ತಿಕೆಯನ್ನು ಧರಿಸಿರುವೆ. ಅಥರ್ವಮುನಿಯು ಮೊದಲು ನಿನ್ನನ್ನು ಕಡೆದನು/ಸಂಪೂರ್ಣವಾಗಿ ಉಪಯೋಗಿಸಿಕೊಂಡನು. ಹೇ! ಅಗ್ನಿಯೇ! ಅಥರ್ವಮುನಿಯು ನಿನ್ನನ್ನು ಮುಖ್ಯವಾಗಿ ತಲೆಯಂತಿರುವ ಪುಷ್ಕರಪರ್ಣದ ಮೇಲೆ ಕಡೆದನು.

'ಪುಷ್ಕರಪರ್ಣೇ ಹ್ಯೇನಮುಪಶ್ರಿತಮವಿಂದತ್' ಎಂದು ಈ ಮಂತ್ರದ ಬ್ರಾಹ್ಮಣವಿದೆ.

---

*ಮೃತ್ತಿಕಾಸಂಭರಣವನ್ನು ಮಾಡಲು ಮೂರು ಮಂತ್ರಗಳನ್ನಾಗಲೀ, ನಾಲ್ಕು ಮಂತ್ರಗಳನ್ನಾಗಲೀ ವಿನಿಯೋಗಿಸಬೇಕೆಂದು ಶ್ರೌತಸೂತ್ರದಲ್ಲಿ ಹೇಳಿದೆ. ಮೂರು ಮಂತ್ರಗಳೆಂಬ ಪಕ್ಷದಲ್ಲಿ ಗಾಯತ್ರೀ ಛಂದಸ್ಸಿನ 'ತ್ವಾಮಗ್ನೇ' ಎಂಬುದು ಮೊದಲನೆಯದು. ಮಂತ್ರಚತುಷ್ಟಯಪಕ್ಷದಲ್ಲಿ 'ಪುರೀಷ್ಯೋಽಸಿ' ಎಂಬ ಹಿಂದಿನ ಮಂತ್ರವನ್ನು ಮೊದಲನೆಯದನ್ನಾಗಿ ಮಾಡಿಕೊಳ್ಳಬೇಕು. ಆಗ 'ತ್ವಾಮಗ್ನೇ' ಎಂಬುದು ಎರಡನೆಯ ಮಂತ್ರವಾಗುತ್ತದೆ.

# ತಮು ತ್ವಾ ದಧ್ಯಙ್ಙೃಷಿಃ ಪುತ್ರ ಈಧೇ [ಈಧೇ (೧೧)] ಅಥರ್ವಣಃ । ವೃತ್ರಹಣಂ ಪುರಂದರಮ್ ॥ ತಮು ತ್ವಾ ಪಾಥ್ಯೋ ವೃಷಾ ಸಮೀಧೇ ದಸ್ಯುಹಂತಮಮ್ । ಧನಂಜಯಗ್ಂ ರಣೇರಣೇ ॥

---

ತಮ್ । ಉ । ತ್ವಾ । ದಧ್ಯಙ್ । ಋಷಿಃ । ಪುತ್ರಃ । ಈಧೇ ।(೧೧)। ಅಥರ್ವಣಃ ॥ ವೃತ್ರಹಣಮಿತಿ ವೃತ್ರ-ಹನಮ್ । ಪುರಂದರಮಿತಿ ಪುರಂ-ದರಮ್ । ತಮ್ । ಉ ॥ ತ್ವಾ । ಪಾಥ್ಯಃ । ವೃಷಾ । ಸಮಿತಿ । ಈಧೇ । ದಸ್ಯುಹಂತಮಮಿತಿ ದಸ್ಯು-ಹಂತಮಮ್ ॥ ಧನಂಜಯಮಿತಿ ಧನಂ-ಜಯಮ್ । ರಣೇರಣ ಇತಿ ರಣೇ-ರಣೇ ॥

---

| ಮಂತ್ರ | ವಿನಿಯೋಗ |
|---|---|
| ತಮು ತ್ವಾ...ಪುರಂದರಮ್ ॥ | ಸಂಭರಣವನ್ನು ಮಾಡಲು ಎರಡನೆಯ ಮಂತ್ರ ಅಥವಾ ಮೂರನೆಯ ಮಂತ್ರ. |
| ತಮು ತ್ವಾ...ರಣೇರಣೇ ॥ | ಮೃತ್ಸಂಭರಣವನ್ನು ಮಾಡಲು ಕೊನೆಯ ಮಂತ್ರ. |

---

✦ **ಅಥರ್ವಣಃ**=ಅಥರ್ವಮುನಿಯ; **ಪುತ್ರಃ**=ಮಗನಾದ; **ದಧ್ಯಙ್ ಋಷಿಃ**= ದಧ್ಯಙ್ ಎಂಬ ಋಷಿಯು; **ವೃತ್ರಹಣಮ್**=ಶತ್ರುನಾಶಕನಾದ; **ಪುರಂದರಮ್**= [ರುದ್ರರೂಪದಿಂದ] ಅಸುರರ ಮೂರು ಪಟ್ಟಣಗಳನ್ನು ದಹಿಸಿದ; **ತಮ್ ಉ ತ್ವಾ**= ಅಂತಹ ಅಗ್ನಿಯಾದ ನಿನ್ನನ್ನೇ; **ಈಧೇ**=ಪ್ರಜ್ವಲಿಸುವಂತೆ ಮಾಡಿದನು. ✦**ವೃಷಾ**= ಶ್ರೇಷ್ಠನಾದ; **ಪಾಥ್ಯಃ**=ಪಾಥ್ಯನೆಂಬ ಮುನಿಯು; **ದಸ್ಯುಹಂತಮಮ್**=ಕಳ್ಳರನ್ನು/ ಶತ್ರುಗಳನ್ನು ನಾಶಪಡಿಸುವ; **ರಣೇರಣೇ**=ಪ್ರತಿಯುದ್ಧದಲ್ಲಿಯೂ; **ಧನಂಜಯಮ್** =[ಶತ್ರುಗಳನ್ನು ಜಯಿಸಿ] ಅವರ ಧನವನ್ನು ವಶಪಡಿಸಿಕೊಳ್ಳುವ; **ತಮ್ ಉ ತ್ವಾ**= ಅಂತಹ ನಿನ್ನನ್ನೇ/ಅಗ್ನಿಯನ್ನೇ; **ಸಮ್ ಈಧೇ**= ಚೆನ್ನಾಗಿ ಜ್ವಲಿಸುವಂತೆ ಮಾಡಿದನು.

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನ್ತ್ಸಾದಯಾ ಯಜ್ಞಗ್ಂ ಸುಕೃತಸ್ಯ ಯೋನೌ । ದೇವಾವೀರ್ದೇವಾನ್, ಹವಿಷಾ ಯಜಾಸ್ಯಗ್ನೇ ಬೃಹದ್ಯಜಮಾನೇ ವಯೋ ಧಾಃ ॥**

---

ಸೀದ । ಹೋತಃ । ಸ್ವೇ । ಉ । ಲೋಕೇ । ಚಿಕಿತ್ವಾನ್ । ಸಾದಯ । ಯಜ್ಞಮ್ । ಸುಕೃತಸ್ಯೇತಿ ಸು-ಕೃತಸ್ಯ । ಯೋನೌ ॥ ದೇವಾವೀರಿತಿ ದೇವ-ಅವೀಃ । ದೇವಾನ್ । ಹವಿಷಾ । ಯಜಾಸಿ । ಅಗ್ನೇ । ಬೃಹತ್ । ಯಜಮಾನೇ । ವಯಃ । ಧಾಃ ।

---

| ಮಂತ್ರ | ವಿನಿಯೋಗ |
|---|---|
| ಸೀದ ಹೋತಃ...ವಯೋ ಧಾಃ ॥ | ಕ್ಷತ್ರಿಯಯಜಮಾನನ ಅಗ್ನಿಚಯನದಲ್ಲಿ ವಿಹಿತವಾದ ತ್ರಿಷ್ಟುಪ್ ಛಂದಸ್ಸಿನ ನಾಲ್ಕು ಮಂತ್ರಗಳಲ್ಲಿ ಮೊದಲನೆಯ ಮಂತ್ರ. |

---

+**ಹೋತಃ**=ಹೋಮನಿಷ್ಪಾದಕನಾದ; **ಅಗ್ನೇ**=ಅಗ್ನಿದೇವನೇ! **ಚಿಕಿತ್ವಾನ್**=ಪ್ರಾಜ್ಞನಾದ [ನೀನು] **ಸ್ವೇ ಉ ಲೋಕೇ**=ನಿನ್ನ ಸ್ಥಾನವಾದ ಉತ್ತರವೇದಿಯಲ್ಲಿ; **ಸೀದ**=ಕುಳಿತುಕೋ. **ಯಜ್ಞಮ್**=ಯಜ್ಞವನ್ನು; **ಸುಕೃತಸ್ಯ**=ಪುಣ್ಯಕರ್ಮಗಳಿಗೆ; **ಯೋನೌ**=ಯೋಗ್ಯವಾದ ಸ್ಥಾನದಲ್ಲಿ; **ಸಾದಯ**=ಸ್ಥಾಪಿಸು; **ದೇವಾವೀಃ**=ದೇವತೆಗಳನ್ನು ಹವಿರ್ದಾನದಿಂದ ರಕ್ಷಿಸುವ ದೇವಪ್ರಿಯನಾದ ನೀನು; **ದೇವಾನ್**=ದೇವತೆಗಳನ್ನು; **ಹವಿಷಾ**=ಹವಿಸ್ಸಿನಿಂದ; **ಯಜಾಸಿ**=ಪೂಜಿಸುತ್ತೀಯೆ; **ಯಜಮಾನೇ**=ಯಜಮಾನನಲ್ಲಿ; **ಬೃಹತ್**=ಹೆಚ್ಚಿನ; **ವಯಃ**=ಜೀವಿತಕಾಲವನ್ನು; **ಧಾಃ**=ನೆಲೆಗೊಳಿಸು.

---

ಅಥರ್ವಮುನಿಯ ಪುತ್ರನಾದ ದಧ್ಯಙ್‌ಋಷಿಯು ಅಸುರರ ಮೂರು ಪಟ್ಟಣಗಳನ್ನು ರುದ್ರರೂಪದಿಂದ ದಹಿಸಿದ ಅಗ್ನಿಯಾದ ನಿನ್ನನ್ನು ಪ್ರಜ್ವಲಿಸುವಂತೆ ಮಾಡಿದನು.

ಶ್ರೇಷ್ಠನಾದ ಪಾಥ್ಯನೆಂಬ ಮುನಿಯು ಯುದ್ಧಗಳಲ್ಲಿ ಗೆಲುವನ್ನು ಸಾಧಿಸುವ ನಿನ್ನನ್ನು ಪ್ರಜ್ವಲಿಸುವಂತೆ ಮಾಡಿದನು.

ನಿ ಹೋತಾ ಹೋತೃಷದನೇ ವಿದಾನಸ್ತ್ವೇಷೋ ದೀದಿವಾಗ್ಂ

ಅಸದಥ್ಸುದಕ್ಷಃ । ಅದಬ್ಧವ್ರತಪ್ರಮತಿರ್ವಸಿಷ್ಠಃ ಸಹಸ್ರಂಭರಃ

ಶುಚಿಜಿಹ್ವೋ ಅಗ್ನಿಃ ॥

---

ನೀತಿ । ಹೋತಾ । ಹೋತೃಷದನ ಇತಿ ಹೋತೃ-ಸದನೇ । ವಿದಾನಃ । ತ್ವೇಷಃ ।

ದೀದಿವಾನ್ । ಅಸದತ್ । ಸುದಕ್ಷ ಇತಿ ಸು-ದಕ್ಷಃ ॥ ಅದಬ್ಧವ್ರತಪ್ರಮತಿರಿತ್ಯದಬ್ಧವ್ರತ-

ಪ್ರಮತಿಃ । ವಸಿಷ್ಠಃ । ಸಹಸ್ರಂಭರ ಇತಿ ಸಹಸ್ರಂ-ಭರಃ । ಶುಚಿಜಿಹ್ವ ಇತಿ ಶುಚಿ-

ಜಿಹ್ವಃ । ಅಗ್ನಿಃ ॥

---

| ಮಂತ್ರ | ವಿನಿಯೋಗ |
|---|---|
| ನಿ ಹೋತಾ...ಅಗ್ನಿಃ ॥ | ಕ್ಷತ್ರಿಯಯಜಮಾನನ ಚಯನದಲ್ಲಿ ಮೃತ್ಸಂಭರಣದ ಎರಡನೆಯ ಮಂತ್ರ. |

---

✦ಹೋತಾ=ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುವ; ತ್ವೇಷಃ=ದೀಪ್ತಿಮಂತನಾದ; ವಿದಾನಃ=ಸ್ಥಾನಗಳನ್ನು ತಿಳಿದಿರುವ; ದೀದಿವಾನ್=ದೇವತೆಗಳಿಗೆ ಹವಿಸ್ಸನ್ನು ಕೊಡುವ; ಸುದಕ್ಷಃ=ಅತ್ಯಂತ ಸಮರ್ಥನಾದ; ಅದಬ್ಧವ್ರತಪ್ರಮತಿಃ=ಹಿಂಸಿತವಲ್ಲದ, ಪ್ರಶಂಸಾಯೋಗ್ಯವಾದ ಕರ್ಮವನ್ನು ತಿಳಿದಿರುವ; ಶ್ರೇಷ್ಠವಾದ ಬುದ್ಧಿಯುಳ್ಳ; ವಸಿಷ್ಠಃ=ಅತಿಶಯವಾಗಿ ವಾಸಸ್ಥಾನವನ್ನು ಕೊಡುವವನಾದ; ಸಹಸ್ರಂಭರಃ=ಸಾವಿರಾರು ಹವಿಸ್ಸುಗಳನ್ನು ಒಯ್ಯುವವನಾದ; ಶುಚಿಜಿಹ್ವಃ=ಶುದ್ಧವಾದ ನಾಲಿಗೆಗಳಂತಿರುವ ಜ್ವಾಲೆಗಳುಳ್ಳ; ಅಗ್ನಿಃ=ಅಗ್ನಿದೇವನು; ಹೋತೃಷದನೇ=[ಹೋಮನಿಷ್ಪಾದನೆಗೆ ಯೋಗ್ಯವಾದ] ಉತ್ತರವೇದಿಸ್ಥಾನದಲ್ಲಿ; ನಿ ಅಸದತ್/ನ್ಯಷದತ್=ಚೆನ್ನಾಗಿ ಪ್ರತಿಷ್ಠಿತನಾಗಲಿ.

---

ಹೀಗೆ 'ಗಾಯತ್ರೀಭಿರ್ಬ್ರಾಹ್ಮಣಸ್ಯ' ಎಂಬ ಬ್ರಾಹ್ಮಣವಾಕ್ಯದಂತೆ ಅಗ್ನಿಚಯನವನ್ನು

ಸಗ್ಂ ಸೀದಸ್ವ ಮಹಾಗ್ಂ ಅಸಿ ಶೋಚಸ್ವ [(೧೨)

ದೇವವೀತಮಃ] ದೇವವೀತಮಃ । ವಿ ಧೂಮಮಗ್ನೇ

ಅರುಷಂ ಮಿಯೇಧ್ಯ ಸೃಜ ಪ್ರಶಸ್ತ ದರ್ಶತಮ್ ॥

---

ಸಮಿತಿ । ಸೀದಸ್ವ । ಮಹಾನ್ । ಅಸಿ । ಶೋಚಸ್ವ । (೧೨) । ದೇವವೀತಮ ಇತಿ ದೇವ–ವೀತಮಃ ॥ ವೀತಿ । ಧೂಮಮ್ । ಅಗ್ನೇ । ಅರುಷಮ್ । ಮಿಯೇಧ್ಯ । ಸೃಜ । ಪ್ರಶಸ್ತೇತಿ ಪ್ರ–ಶಸ್ತ । ದರ್ಶತಮ್ ।

---

| ಮಂತ್ರ | ವಿನಿಯೋಗ |
| --- | --- |
| ಸಗ್ಂ ಸೀದಸ್ವ...ದರ್ಶತಮ್ ॥ | ಕ್ಷತ್ರಿಯಯಜಮಾನನ ಚಯನದಲ್ಲಿ ಮೃತ್ಸಂಭರಣದ ಮೂರನೆಯ ಮಂತ್ರ. |

---

✦ಅಗ್ನೇ=ಅಗ್ನಿದೇವನೇ! ಸಂಸೀದಸ್ವ=[ಪುಷ್ಕರಪರ್ಣದಲ್ಲಿ] ಚೆನ್ನಾಗಿ ಕುಳಿತುಕೋ. ಮಹಾನ್ ಅಸಿ=[ಅನೇಕಕ್ರತುಗಳಿಗೆ ಕಾರಣನಾಗಿರುವುದರಿಂದ] ಮಹಾಂತನಾಗಿರುತ್ತೀಯೆ; ದೇವವೀತಮಃ=ದೇವತೆಗಳಿಗೆ ಅತ್ಯಂತ ಪ್ರಿಯನಾಗಿರುತ್ತೀಯೆ; [ಅಂತಹವನಾಗಿ] ಶೋಚಸ್ವ=ಬೆಳಗುತ್ತಿರು. ಮಿಯೇಧ್ಯ=ಯಜ್ಞಾರ್ಹನಾಗಿರುವವನೇ! ಪ್ರಶಸ್ತ =ಉತ್ಕೃಷ್ಟನಾದವನೇ! ಅರುಷಮ್=ಹಿಂಸೆಯನ್ನು ಉಂಟುಮಾಡದಿರುವ/ ಉಗ್ರವಲ್ಲದ; ದರ್ಶತಮ್=ನೋಡಲು ಸಾಧ್ಯವಾಗಿರುವ; ಧೂಮಮ್=ಹೊಗೆಯನ್ನು; ವಿ ಸೃಜ=ಹೆಚ್ಚಾಗಿ ಹೊರಗೆ ಬಿಡು/ಉಂಟುಮಾಡು.

---

ಮಾಡುವ ಯಜಮಾನನು ಬ್ರಾಹ್ಮಣನಾದರೆ ಆತನ ಚಯನದಲ್ಲಿ ಮೃತ್ಸಂಭರಣವನ್ನು ಮಾಡುವ ಮಂತ್ರಗಳು ಹೇಳಲ್ಪಟ್ಟಿವೆ.

ಅಗ್ನಿಯು ಹೋಮನಿಷ್ಪಾದಕನು. ಎಲ್ಲವನ್ನೂ ತಿಳಿದವನು. ಇಂತಹ ಅಗ್ನಿದೇವನು ತನ್ನ ಸ್ಥಾನವಾದ ಉತ್ತರವೇದಿಯಲ್ಲಿ ಪ್ರತಿಷ್ಠಿತನಾಗಲಿ.

ಜನಿಷ್ವಾ ಹಿ ಜೇನ್ಯೋ ಅಗ್ರೇ ಅಹ್ನಾಗ್ಂ ಹಿತೋ ಹಿತೇ

ಷ್ವರುಷೋ ವನೇಷು । ದಮೇದಮೇ ಸಪ್ತ ರತ್ನಾ ದಧಾನೋ

ಽಗ್ನಿರ್‌ಹೋತಾ ನಿಷಸಾದಾ ಯಜೀಯಾನ್ ॥ ೧೩-3 ॥

[ಸ್ಥ ಈಧೇ ಶೋಚಸ್ವ ಸಪ್ತವಿಗ್ಂಶತಿಶ್ಚ ॥]

---

ಜನಿಷ್ವ । ಹಿ । ಜೇನ್ಯಃ । ಅಗ್ರೇ । ಅಹ್ನಾಮ್ । ಹಿತಃ । ಹಿತೇಷು । ಅರುಷಃ । ವನೇಷು ॥

ದಮೇದಮ ಇತಿ ದಮೇ-ದಮೇ । ಸಪ್ತ । ರತ್ನಾ । ದಧಾನಃ । ಅಗ್ನಿಃ । ಹೋತಾ ।

ನೀತಿ । ಸಸಾದ । ಯಜೀಯಾನ್ ॥ (೧೩) ॥

---

| ಮಂತ್ರ | ವಿನಿಯೋಗ |
|---|---|
| ಜನಿಷ್ವಾ...ಯಜೀಯಾನ್ ॥ | ತ್ರಿಷ್ಟುಪ್ ಛಂದಸ್ಸಿನ ನಾಲ್ಕನೆಯ ಮಂತ್ರ. |

---

✦[ಅಗ್ನಿಯೇ!] **ಅಹ್ನಾಮ್ ಅಗ್ರೇ**=ಪ್ರಭಾತಕಾಲದಲ್ಲಿ; **ಜೇನ್ಯಃ**=ಜಯಶೀಲನಾಗಿ; **ಜನಿಷ್ವ ಹಿ**=ಹುಟ್ಟುವವನಾಗು; **ಹಿತೇಷು**=[ನಿನಗೆ] ಹಿತರಾಗಿರುವ ದೇವತೆಗಳಲ್ಲಿಯೂ /ಋತ್ವಿಜರಲ್ಲಿಯೂ; **ಹಿತಃ**=ಹಿತವನ್ನು ಮಾಡುವವನಾಗು. **ವನೇಷು**=[ಫಲ-ಪುಷ್ಪ ಭರಿತವಾದ] ವನಗಳಲ್ಲಿ; **ಅರುಷಃ**=[ದಾವಾಗ್ನಿರೂಪದಿಂದ] ಹಿಂಸೆಯನ್ನು ಮಾಡದಿರುವವನಾಗು. [ಅಗ್ನಿಯು] **ದಮೇದಮೇ**=ಯಜಮಾನರ ಪ್ರತಿಗೃಹಗಳಲ್ಲಿಯೂ; **ಸಪ್ತ ರತ್ನಾ**=ರತ್ನದಂತೆ ಶ್ರೇಷ್ಠವಾಗಿರುವ ಏಳು ಜ್ವಾಲೆಗಳನ್ನು; **ದಧಾನಃ**=ಹೊಂದಿದವನಾಗಿ [ಜ್ವಲಿಸುತ್ತಿರಲಿ;] **ಹೋತಾ**=ದೇವತೆಗಳನ್ನು ಆಹ್ವಾನಿಸುವ; **ಯಜೀಯಾನ್**=ಅತಿಶಯವಾಗಿ ಯಜ್ಞನಿರ್ವಾಹಕನಾದ; **ಅಗ್ನಿಃ**=ಅಗ್ನಿಯು; **ನಿಷಸಾದ**=[ತನ್ನ ಉತ್ತರವೇದಿಯ ಸ್ಥಾನದಲ್ಲಿ] ಆಸೀನನಾಗಿರಲಿ.

---

**ಯಜ್ಞವನ್ನು ಪುಣ್ಯಕರ್ಮಗಳಿಗೆ ಉಚಿತವಾದ ಸ್ಥಾನದಲ್ಲಿ ಸ್ಥಿರಗೊಳಿಸಲಿ. ಅಗ್ನಿಯು**

ದೇವರಕ್ಷಕನು. ದೇವಪ್ರಿಯನು. ಆತನು ಹವ್ಯಗಳಿಂದ ದೇವತೆಗಳನ್ನು ಪೂಜಿಸಲಿ. ಯಜಮಾನನಿಗೆ ದೇವತಾನುಗ್ರಹದಿಂದ ದೀರ್ಘಾಯುಸ್ಸು ಉಂಟಾಗುವಂತೆ ಮಾಡಲಿ.

ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುವವನು. ಆತನು ತೇಜಸ್ವಿಯು. ದೇವತೆಗಳಿಗೆ ಹವಿಸ್ಸನ್ನು ನೀಡುವವನು. ಹಿಂಸಿತವಲ್ಲದ ಪ್ರಶಂಸಾಯೋಗ್ಯವಾದ ಕರ್ಮಗಳನ್ನು ಅರಿತ ಪ್ರಶಸ್ತಮತಿಯುಳ್ಳವನಾಗಿದ್ದಾನೆ. ಹವಿಸ್ಸಿನ ಸಮೂಹವನ್ನು ಅವನು ಒಯ್ಯುವವನು. ಅವನು ಹೋಮನಿಷ್ಪಾದನೆಗೆ ಯೋಗ್ಯವಾದ ಉತ್ತರ ವೇದಿಯ ಸ್ಥಾನದಲ್ಲಿ ಕುಳಿತುಕೊಳ್ಳಲಿ.

ಅಗ್ನಿದೇವನನ್ನು ಬಗೆಬಗೆಯಾಗಿ ಇಲ್ಲಿ ಸ್ತುತಿಸಲಾಗಿದೆ.

ಹೇ! ಅಗ್ನಿದೇವನೇ! ನೀನು ಪುಷ್ಕರಪರ್ಣದಲ್ಲಿ ಚೆನ್ನಾಗಿ ಕುಳಿತುಕೋ. ನೀನು ಮಹಾಂತನು. ಇದು ನಿನ್ನ ಸ್ಥಾನವು. ನೀನು ದೇವತೆಗಳಿಗೆ ಅತ್ಯಂತ ಪ್ರಿಯನು. ನೀನು ಪ್ರಜ್ವಲಿಸು. ನೀನು ಯಜ್ಞಸಾಧಕನು, ಶ್ರೇಷ್ಠನು. ಹಿಂಸೆಯನ್ನು ಉಂಟುಮಾಡದೆ ನೋಡಲು ಸಾಧ್ಯವಾಗಿರುವ ಹೊಗೆಯನ್ನು ಹೊರಬಿಡು.

ಹೇ! ಅಗ್ನಿಯೇ! ನೀನು ಪ್ರಭಾತಕಾಲದಲ್ಲಿ ಜಯಶೀಲನಾಗಿ ಜನಿಸು. ನಿನಗೆ ಹಿತವನ್ನುಂಟುಮಾಡುವ ದೇವತೆಗಳಿಗೂ, ಋತ್ವಿಜರಿಗೂ ಹಿತವನ್ನುಂಟುಮಾಡುವವನಾಗು. ಕಾಡಿನಲ್ಲಿ ಕಾಡ್ಗಿಚ್ಚಿನಿಂದ ಹಿಂಸಿಸಬೇಡ. ಯಾಗವನ್ನು ಅನುಷ್ಠಿಸುವ ಪ್ರತಿಯೊಬ್ಬ ಯಜಮಾನರ ಮನೆಗಳಲ್ಲಿಯೂ ರತ್ನದಂತಿರುವ *ಏಳು ಜ್ವಾಲೆಗಳಿಂದ ಕೂಡಿದವನಾಗಿ ಪ್ರಜ್ವಲಿಸು. ದೇವತೆಗಳನ್ನು ಯಾಗಕ್ಕಾಗಿ ಆಮಂತ್ರಿಸಿ, ಯಜ್ಞವನ್ನು ನಿರ್ವಹಿಸುವ ನೀನು ನಿನ್ನದಾದ ಉತ್ತರವೇದಿಯ ಸ್ಥಾನದಲ್ಲಿ ಕುಳಿತುಕೋ.

---

## ವಿನಿಯೋಗಸಂಗ್ರಹ

1-2 ದೇವ ದ್ವಾಭ್ಯಾಂ ಖನೇಚ್ಛಾಪಾಂ 3ಪದ್ಮಪತ್ರಂ ಸಮಾಹರೇತ್ ।
4-5ಶರ್ಮ ದ್ವಾಭ್ಯಾಂ ಚರ್ಮಪತ್ರೇ ಸ್ತೃಣಾತ್ಯಥ 6-9 ಪುರೀಷ್ಯತಃ ॥
ಚತುಷ್ಟಯ್ಯಾ ಸಂಭರತಿ ವಿಪ್ರಸ್ಯ ಕ್ಷತ್ರಿಯಸ್ಯ ತು ।
10-13ಸೀದೇತ್ಯಾದಿ ಚತುಷ್ಕೇಣ ಮಂತ್ರಾ ದ್ವಾದಶ ವರ್ಣಿತಾಃ ॥

### ಅನುವಾಕದಲ್ಲಿರುವ ಮಂತ್ರಸಂಖ್ಯೆ–13

---

* ಅಗ್ನಿಯ ಸಪ್ತಜಿಹ್ವೆಗಳು ಹೀಗೆ ಹೇಳಲ್ಪಟ್ಟಿವೆ.

1ಕಾಲೀ 2ಕರಾಲೀ ಚ 3ಮನೋಜವಾ ಚ 4ಸುಲೋಹಿತಾಯಾ ಚ 5ಸುಧೂಮ್ರವರ್ಣಾ ।
6ಸ್ಫುಲಿಂಗಿನೀ 7ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥

## ॥ ಚತುರ್ಥೋಽನುವಾಕಃ ॥

ಸಂ ತೇ ವಾಯುರ್ಮಾತರಿಶ್ವಾ ದಧಾತೂತ್ತಾನಾಯ್ಯೈ

ಹೃದಯಂ ಯದ್ವಿಲಿಷ್ಟಮ್ ।

---

ಸಮಿತಿ । ತೇ । ವಾಯುಃ । ಮಾತರಿಶ್ವಾ । ದಧಾತು । ಉತ್ತಾನಾಯಾ ಇತ್ಯುತ್–ತಾನಾಯ್ಯೈ ।

ಹೃದಯಮ್ । ಯತ್ । ವಿಲಿಷ್ಟಮಿತಿ ವಿ–ಲಿಷ್ಟಮ್ ॥

---

ಮೂರನೆಯ ಅನುವಾಕದಲ್ಲಿ ಮೃತ್ಖನನವು ಹೇಳಲ್ಪಟ್ಟಿತು. ಈ ನಾಲ್ಕನೆಯ ಅನುವಾಕದಲ್ಲಿ ಮೃದಾಹರಣವು ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
|---|---|
| ಸಂ ತೇ...ತುಭ್ಯಮ್ ॥ | ಅಗೆದಿರುವ ಪ್ರದೇಶದಲ್ಲಿ ತೃಣಸಹಿತವಾದ ನೀರನ್ನು ಹಾಕಲು |

---

+[ಎಲೈ! ಪೃಥಿವಿಯೇ!] **ಉತ್ತಾನಾಯ್ಯೈ**=ಊರ್ಧ್ವಮುಖಿಯಾಗಿರುವ; **ತೇ**=ನಿನ್ನ; **ಯತ್ ಹೃದಯಮ್**=ಯಾವ ಹೃದಯದಂತಿರುವ [ಖನನಪ್ರದೇಶವು]; **ವಿಲಿಷ್ಟಮ್**=ಅಲ್ಪವಾಗಿ ಮಾಡಲ್ಪಟ್ಟಿದೆಯೋ; **ತತ್**=ಅದನ್ನು; **ಮಾತರಿಶ್ವಾ**=ಅಂತರಿಕ್ಷದಲ್ಲಿ ಸಂಚರಿಸುವ; **ವಾಯುಃ**=ವಾಯುವು; **ಸಂ ದಧಾತು**=ಸೇರಿಸಲಿ/ ಪೂರ್ಣ ಮಾಡಲಿ.

---

ಎಲೈ! ಪೃಥಿವಿಯೇ! ನಿನ್ನ ಹೃದಯದಂತೆ ಇರುವ ಈ ಖನನಪ್ರದೇಶವು ಅಗೆಯುವುದರಿಂದ ಅಲ್ಪವಾಗಿ ಮಾಡಲ್ಪಟ್ಟಿದೆ. ವಾಯುವು ಧೂಳಿನಿಂದ ಅದನ್ನು ತುಂಬಲಿ. ಈ ಕಾರ್ಯವನ್ನು ಮಾಡುವ, ಲೋಕಗಳ ಪ್ರಾಣಸ್ವರೂಪನಾದ ವಾಯುವಿಗೂ

ದೇವಾನಾಂ ಯಶ್ಚರತಿ ಪ್ರಾಣಥೇನ ತಸ್ಮೈ ಚ ದೇವಿ ವಷಡಸ್ತು ತುಭ್ಯಮ್ ॥ ಸುಜಾತೋ ಜ್ಯೋತಿಷಾ ಸಹ ಶರ್ಮ ವರೂಥಮಾಸದಸ್ಸುವಃ । ವಾಸೋ ಅಗ್ನೇ ವಿಶ್ವರೂಪಗ್ಂ ಸಂವ್ಯಯಸ್ವ ವಿಭಾವಸೋ ॥

---

ದೇವಾನಾಮ್ । ಯಃ । ಚರತಿ । ಪ್ರಾಣಥೇನೇತಿ ಪ್ರ-ಅನಥೇನ । ತಸ್ಮೈ । ಚ । ದೇವಿ । ವಷಟ್ । ಅಸ್ತು । ತುಭ್ಯಮ್ ॥ ಸುಜಾತ ಇತಿ ಸು-ಜಾತಃ । ಜ್ಯೋತಿಷಾ । ಸಹ । ಶರ್ಮ । ವರೂಥಮ್ । ಏತಿ । ಅಸದಃ । ಸುವಃ ॥ ವಾಸಃ । ಅಗ್ನೇ । ವಿಶ್ವರೂಪಮಿತಿ ವಿಶ್ವ-ರೂಪಮ್ । ಸಮಿತಿ । ವ್ಯಯಸ್ವ । ವಿಭಾವಸೋ ಇತಿ ವಿಭಾ-ವಸೋ ॥

---

| ಮಂತ್ರ | ವಿನಿಯೋಗ |
|---|---|
| ಸುಜಾತೋ...ವಸೋ ॥ | ಉಖಾಸಾಧನವಾದ ಮಣ್ಣನ್ನು ಕೃಷ್ಣಾಜಿನದಲ್ಲಿ ಕಟ್ಟಲು |

---

ದೇವಿ=ಪೃಥಿವಿದೇವಿಯೇ! ಯಃ=ಯಾವ ವಾಯುವು; ದೇವಾನಾಮ್=ದೇವತೆಗಳ; ಪ್ರಾಣಥೇನ=ಪ್ರಾಣಭಾವದಿಂದ; ಚರತಿ=ಸಂಚರಿಸುತ್ತಾನೆಯೋ; ತಸ್ಮೈ ಚ=ಆ ವಾಯುವಿಗೂ; ತುಭ್ಯಮ್=ನಿನಗೂ; ವಷಟ್ ಅಸ್ತು=ಈ ಜಲಸಹಿತವಾದ ತೃಣವು ಹುತವಾಗಲಿ. ✦ ಅಗ್ನೇ=ಅಗ್ನಿಯೇ! ಸುಜಾತಃ=ಚೆನ್ನಾಗಿ ಹುಟ್ಟಿರುವ ನೀನು; ಜ್ಯೋತಿಷಾ ಸಹ=ಪ್ರಕಾಶದೊಡನೆ; ಶರ್ಮ=ಸುಖವಾಗಿ; ಸುವಃ=ಸ್ವರ್ಗದಂತಿರುವ; ವರೂಥಮ್=[ಕೃಷ್ಣಾಜಿನರೂಪವಾದ]ಆಶ್ರಯಸ್ಥಾನವನ್ನು; ಆ ಅಸದಃ=ಹೊಂದಿರುವೆ; ವಿಭಾವಸೋ=ಪ್ರಕಾಶವೇ ಧನವಾಗಿರುವ ಅಗ್ನಿದೇವನೇ! ವಿಶ್ವರೂಪಮ್=ಬಹುರೂಪವಾದ; ವಾಸಃ=ಕೃಷ್ಣಾಜಿನರೂಪವಾದ ವಸ್ತ್ರವನ್ನು; ಸಂ ವ್ಯಯಸ್ವ=ಚೆನ್ನಾಗಿ ಧರಿಸು.

ಉದು ತಿಷ್ಠ ಸ್ವಧ್ವರಾವಾನೋ ದೇವ್ಯಾ ಕೃಪಾ । ದೃಶೇ ಚ ಭಾಸಾ ಬೃಹತಾ ಸುಶುಕ್ವನಿರಾಽಗ್ನೇ ಯಾಹಿ ಸುಶಸ್ತಿಭಿಃ ॥[೧೪]॥

---

ಉದಿತಿ । ಉ । ತಿಷ್ಠ । ಸ್ವಧ್ವರೇತಿ ಸು-ಅಧ್ವರ । ಅವ । ನಃ । ದೇವ್ಯಾ । ಕೃಪಾ ॥ ದೃಶೇ । ಚ । ಭಾಸಾ । ಬೃಹತಾ । ಸುಶುಕ್ವನಿರಿತಿ ಸು-ಶುಕ್ವನಿಃ । ಏತಿ । ಅಗ್ನೇ । ಯಾಹಿ । ಸುಶಸ್ತಿಭಿರಿತಿ ಸುಶಸ್ತಿ-ಭಿಃ ॥ [೧೪] ॥

---

| ಮಂತ್ರ | ವಿನಿಯೋಗ |
|---|---|
| ಉದು ತಿಷ್ಠ...ಸುಶಸ್ತಿಭಿಃ ॥ | ಮಣ್ಣನ್ನು ಎತ್ತಿಕೊಂಡು ಏಳಲು ವಿಹಿತವಾದ ಎರಡು ಸಾವಿತ್ರಮಂತ್ರಗಳಲ್ಲಿ ಪ್ರಥಮಮಂತ್ರ. |

---

+ಸ್ವಧ್ವರ ಅಗ್ನೇ=ಒಳ್ಳೆಯ ಯಾಗನಿಷ್ಪಾದಕನಾದ ಅಗ್ನಿಯೇ! ಉತ್ ಉ ತಿಷ್ಠ= ಮೇಲೇಳು; ನಃ=ನಮ್ಮನ್ನು; ದೇವ್ಯಾ ಕೃಪಾ=ದೇವತೆಗಳಿಗೆ ಸಂಬಂಧಿಸಿದ ಕ್ರೀಡಾಪರ ವಾದ ದಯೆಯಿಂದ; ಅವ=ರಕ್ಷಿಸು. ಚ=ಮತ್ತು; ದೃಶೇ=ನೋಡಲು; ಬೃಹತಾ= ಪ್ರೌಢವಾದ; ಭಾಸಾ=ತೇಜಸ್ಸಿನಿಂದ; ಸುಶುಕ್ವನಿಃ=ಶೋಭನವಾದ ಕಿರಣಗಳನ್ನು ಹೊಂದಿದವನಾಗಿ; ಸುಶಸ್ತಿಭಿಃ=ಒಳ್ಳೆಯ ಕೀರ್ತಿಗಳಿಂದ ಕೂಡಿ; ಆ ಯಾಹಿ=ಬಾ.

---

ಮತ್ತು ನಿನಗೂ ಈ ತೃಣಸಹಿತವಾದ ಜಲವನ್ನು ಅರ್ಪಿಸುತ್ತೇನೆ. ಇದು ಹುತ ವಾಗಲಿ.

ಈ ಮಂತ್ರದಲ್ಲಿ ಉಖಾಸಾಧನವಾದ ಮಣ್ಣಿಗೂ, ಅಗ್ನಿಗೂ ಅಭೇದವನ್ನು ಕಲ್ಪಿಸಿ ವರ್ಣಿಸಲಾಗಿದೆ.

ಅಗೆದು ಚೆನ್ನಾಗಿ ಉತ್ಪನ್ನವಾಗಿರುವ ಅಗ್ನಿಯೇ! ಈ ಕೃಷ್ಣಾಜಿನವು ಸುಖವಾದ ಸ್ವರ್ಗದಂತೆ ಇದೆ. ಇದನ್ನು ಚೆನ್ನಾಗಿ ಧರಿಸಿರುವೆ. ಇದು ಹಲವು ರೂಪಗಳುಳ್ಳದ್ದಾಗಿದೆ.

ಊರ್ಧ್ವ ಊ ಷು ಣ ಊತಯೇ ತಿಷ್ಠಾ ದೇವೋ ನ ಸವಿತಾ । ಊರ್ಧ್ವೋ ವಾಜಸ್ಯ ಸನಿತಾ ಯದಞ್ಜಿಭಿ-ರ್ವಾಘದ್ಭಿರ್ವಿಹ್ವಯಾಮಹೇ ॥

ಊರ್ಧ್ವಃ । ಉ । ಸ್ವಿತಿ । ನಃ । ಊತಯೇ । ತಿಷ್ಠ । ದೇವಃ । ನ । ಸವಿತಾ ॥ ಊರ್ಧ್ವಃ । ವಾಜಸ್ಯ । ಸನಿತಾ । ಯತ್ । ಅಞ್ಜಿಭಿರಿತ್ಯಞ್ಜಿ-ಭಿಃ । ವಾಘದ್ಭಿರಿತಿ ವಾಘತ್-ಭಿಃ । ವಿಹ್ವಯಾಮಹ ಇತಿ ವಿ-ಹ್ವಯಾಮಹೇ ॥

| ಮಂತ್ರ | ವಿನಿಯೋಗ |
|---|---|
| ಊರ್ಧ್ವಃ...ವಿಹ್ವಯಾಮಹೇ ॥ | ಎರಡನೆಯ ಸಾವಿತ್ರಮಂತ್ರ. |

+[ಅಗ್ನಿಯೇ!]ನಃ ಊತಯೇ=ನಮ್ಮ ರಕ್ಷಣೆಗಾಗಿ; ಸವಿತಾ ದೇವಃ ನ=ಸವಿತೃ ದೇವನಂತೆ; ಊರ್ಧ್ವಃ ಉ=ಮೇಲಿರುವವನಾಗಿಯೇ; ಸು=ದೃಢನಾಗಿ; ತಿಷ್ಠ= ನಿಲ್ಲು; ಯತ್=ಯಾವ ಕಾರಣದಿಂದ; ಅಞ್ಜಿಭಿಃ=ಯಜ್ಞಮಂತ್ರಾಭಿವ್ಯಂಜಕವಾದ; ವಾಘದ್ಭಿಃ=ಹವಿರ್ಹವನ ಮಾಡುವ ಋತ್ವಿಜರಿಂದ [ಕೂಡಿದ ನಾವು]; ವಿಹ್ವಯಾಮಹೇ=ಬಗೆ ಬಗೆಯಾಗಿ ಆಹ್ವಾನಿಸುತ್ತೇವೆಯೋ [ಅದರಿಂದ]; ವಾಜಸ್ಯ ಸನಿತಾ=ಅನ್ನವನ್ನು ಕೊಡುವವನಾಗಿ; ಊರ್ಧ್ವಃ=ಮೇಲೆಯೇ ಇರುವವನಾಗಿ ಭವ=ಆಗು.

ಪ್ರಕಾಶಧನನಾದ ನೀನು ಈ ಕೃಷ್ಣಾಜಿನರೂಪವಾದ ವಸ್ತ್ರವನ್ನು ಚೆನ್ನಾಗಿ ಧರಿಸು.

ಅಗ್ನಿಯೇ! ನೀನು ಒಳ್ಳೆಯ ಯಜ್ಞನಿರ್ವಾಹಕನು. ನೀನು ದೇವತೆಗಳನ್ನು ಹವಿಸ್ಸುಗಳಿಂದ ಸಂತೋಷಗೊಳಿಸು. ಅವರ ಕೃಪೆಯಿಂದ ನಮ್ಮನ್ನು ರಕ್ಷಿಸು. ನೀನು ಪ್ರೌಢವಾದ ಪ್ರಕಾಶವುಳ್ಳವನು. ಒಳ್ಳೆಯ ಕೀರ್ತಿಮಂತನು. ನೀನು ಯಾಗನಿರ್ವಹಣೆಗಾಗಿ ಬಾ.

ಈ ಮಂತ್ರದಲ್ಲಿಯೂ ಅಗ್ನಿಗೂ ಮೃತ್ತಿಕೆಗೂ ಅಭೇದಕಲ್ಪನೆಯಿದೆ.

**ಸ ಜಾತೋ ಗರ್ಭೋ ಅಸಿ ರೋದಸ್ಯೋರಗ್ನೇ ಚಾರುರ್ವಿಭೃತ ಓಷಧೀಷು । ಚಿತ್ರಶ್ಶಿಶುಃ ಪರಿ ತಮಾಗ್ಂಸ್ಯಕ್ತಃ ಪ್ರ ಮಾತೃಭ್ಯೋ ಅಧಿ ಕನಿಕ್ರದದ್ಗಾಃ ॥**

ಸಃ । ಜಾತಃ । ಗರ್ಭಃ । ಅಸಿ । ರೋದಸ್ಯೋಃ । ಅಗ್ನೇ । ಚಾರುಃ । ವಿಭೃತ ಇತಿ ವಿ-ಭೃತಃ । ಓಷಧೀಷು ॥ ಚಿತ್ರಃ । ಶಿಶುಃ । ಪರೀತಿ । ತಮಾಗ್ಂಸಿ । ಅಕ್ತಃ । ಪ್ರೇತಿ । ಮಾತೃಭ್ಯ ಇತಿ ಮಾತೃ-ಭ್ಯಃ । ಅಧೀತಿ । ಕನಿಕ್ರದತ್ । ಗಾಃ ॥

| ಮಂತ್ರ | ವಿನಿಯೋಗ |
|---|---|
| **ಸಃ ಜಾತಃ...ಗಾಃ ॥** | ಮೃತ್ತಿಕೆಯನ್ನು ತೆಗೆದುಕೊಂಡು ಹೋಗಲು |

**ಅಗ್ನೇ**=ಅಗ್ನಿದೇವನೇ! [ನೀನು] **ರೋದಸ್ಯೋಃ**=ದ್ಯಾವಾಪೃಥಿವಿಗಳ; **ಗರ್ಭಃ**=ಗರ್ಭವಾಗಿ; **ಜಾತಃ ಅಸಿ**=ಹುಟ್ಟಿದವನಾಗಿದ್ದೀಯೆ; **ಚಾರುಃ**=ಪೂಜನೀಯನು/ಮನೋಹರನು; **ಸಃ**=ಅಂತಹ ನೀನು; **ಓಷಧೀಷು ವಿಭೃತಃ**=ಓಷಧಿಗಳಲ್ಲಿ [ಜಾಠರಾಗ್ನಿರೂಪನಾಗಿ ಇದ್ದುಕೊಂಡು] ಪೋಷಿತನಾಗಿದ್ದೀಯೆ. **ಚಿತ್ರಃ**=ವಿಚಿತ್ರಜ್ವಾಲೆಗಳುಳ್ಳವನು [ನೀನು] **ಶಿಶುಃ**=ಈಗ ಹುಟ್ಟಿದ ಮಗುವಿನಂತೆ; [ಇರುವೆ] **ತಮಾಗ್ಂಸಿ**=ಕತ್ತಲೆಗಳನ್ನು **ಪರಿ ಅಕ್ತಃ**=ಹೋಗಲಾಡಿಸಲು ಅಭಿವ್ಯಕ್ತನಾಗಿದ್ದೀಯೆ. **ಮಾತೃಭ್ಯಃ**=ಮಾತೃ ರೂಪರಾದ ಓಷಧಿಗಳಿಗಾಗಿ; **ಅಧಿ ಕನಿಕ್ರದತ್**=ಕ್ರಂದನ ಮಾಡುತ್ತಾ; **ಪ್ರ ಗಾಃ**=ಹೋಗು.

ಅಗ್ನಿಯೇ! ಮೇಲಿದ್ದುಕೊಂಡು ನಮ್ಮನ್ನು ರಕ್ಷಿಸುವ ನೀನು ನಮ್ಮ ರಕ್ಷಣೆಗಾಗಿ ಮೇಲೇ ಇರು. ಯಜ್ಞಮಂತ್ರಪಾಠಕರಾದ ಮತ್ತು ಹವಿರ್ಭಾಗಗಳನ್ನು ಕೊಡುವವರಾದ ಋತ್ವಿಜರಿಂದ ಕೂಡಿದ ನಾವು ಬಗೆಬಗೆಯಾಗಿ ಆಹ್ವಾನಿಸುತ್ತೇವೆ. ನೀನು ನಮಗೆ ಅನ್ನವನ್ನು ಕೊಡುವವನಾಗಿ ಊರ್ಧ್ವನಾಗಿಯೇ ಇರು.

ಸ್ಥಿರೋ ಭವ ವೀಡ್ವಂಗ ಆಶುರ್ಭವ ವಾಜ್ಯರ್ವನ್ ।
ಪೃಥುರ್ಭವ ಸುಷದಸ್ತ್ವಮಗ್ನೇಃ ಪುರೀಷವಾಹನಃ ॥ ಶಿವೋ
ಭವ[(೧೫)] ಪ್ರಜಾಭ್ಯೋ ಮಾನುಷೀಭ್ಯಸ್ತ್ವಮಂಗಿರಃ ।

---

ಸ್ಥಿರಃ । ಭವ । ವೀಡ್ವಂಗ ಇತಿ ವೀಡು–ಅಂಗಃ । ಆಶುಃ । ಭವ । ವಾಜೀ । ಅರ್ವನ್ ॥
ಪೃಥುಃ । ಭವ । ಸುಷದ ಇತಿ ಸು–ಸದಃ । ತ್ವಮ್ । ಅಗ್ನೇಃ । ಪುರೀಷವಾಹನ ಇತಿ
ಪುರೀಷ–ವಾಹನಃ । ಶಿವಃ । ಭವ ।(೧೫)। ಪ್ರಜಾಭ್ಯ ಇತಿ ಪ್ರ–ಜಾಭ್ಯಃ ।
ಮಾನುಷೀಭ್ಯಃ । ತ್ವಮ್ । ಅಂಗಿರಃ ॥

---

| ಮಂತ್ರ | ವಿನಿಯೋಗ |
|---|---|
| ಸ್ಥಿರೋ ಭವ...ಪುರೀಷವಾಹನಃ ॥ | ಕೃಷ್ಣಾಜಿನದಲ್ಲಿ ಕಟ್ಟಿದ ಮೂಟೆಯನ್ನು ಕತ್ತೆಯ ಮೇಲೆ ಹಾಕಲು |
| ಶಿವೋ ಭವ...ವನಸ್ಪತೀನ್ ॥ | ಕತ್ತೆಯ ಮೇಲೆ ಹಾಕಿದ ಮಣ್ಣಿನ ಅಭಿಮಂತ್ರಣಕ್ಕಾಗಿ |

---

✦ಅರ್ವನ್=ಚೆನ್ನಾಗಿ ಹೋಗಲು ತಿಳಿದಿರುವ ಗರ್ದಭವೇ! ತ್ವಮ್=ನೀನು; ಅಗ್ನೇಃ =ಅಗ್ನಿಗೆ/ಉಖೆಗೆ ಬೇಕಾಗಿರುವ; ಪುರೀಷವಾಹನಃ=ಮೃತ್ತಿಕೆಯನ್ನು ಹೊರತಕ್ಕವನು; ಸ್ಥಿರಃ ಭವ=[ಮಾರ್ಗದಿಂದ ಅತ್ತಿತ್ತ ಹೋಗದೆ] ಸ್ಥಿರನಾಗಿರು; ವೀಡ್ವಂಗಃ=ದೃಢಾಂಗನಾಗು; ಆಶುಃ ಭವ=ಶೀಘ್ರಗಾಮಿಯಾಗು; ವಾಜೀ=ಅನ್ನಪ್ರದನೂ ಆಗು; ಪೃಥುಃ ಭವ=[ಮಣ್ಣನ್ನು ಹಾಕಲು ತಕ್ಕಂತೆ] ವಿಶಾಲವಾದ ಬೆನ್ನುಳ್ಳವನಾಗು; [ಮಣ್ಣಿಗೆ] ಸುಷದಃ=ಸುಖಸ್ಥಾನನಾಗು; ✦ ಅಂಗಿರಃ=ಮೊದಲು ಅಂಗಿರೋಮುನಿಗಳಿಂದ ಸಂಗೃಹೀತವಾದ ಅಗ್ನಿಯೇ! ತ್ವಮ್=ನೀನು; ಪ್ರಜಾಭ್ಯಃ ಮಾನುಷೀಭ್ಯಃ= ಮಾನವರೇ ಮೊದಲಾದ ಚರಜಂತುಗಳಿಗೆ; ಶಿವಃ ಭವ=ಸುಖಕರನಾಗು;

ಮಾ ದ್ಯಾವಾಪೃಥಿವೀ ಅಭಿಶೂಶುಚೋ ಮಾಽಂತರಿಕ್ಷಂ ಮಾ ವನಸ್ಪತೀನ್ ॥ ಪ್ರೈತು ವಾಜೀ ಕನಿಕ್ರದನ್ನಾನದ ದ್ರಾಸಭಃ ಪತ್ವಾ । ಭರನ್ನಗ್ನಿಂ ಪುರೀಷ್ಯಂ ಮಾ ಪಾದ್ಯಾಯುಷಃ ಪುರಾ ॥

---

ಮಾ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಅಭೀತಿ । ಶೂಶುಚಃ । ಮಾ । ಅಂತರಿಕ್ಷಮ್ । ಮಾ । ವನಸ್ಪತೀನ್ ॥ ಪ್ರೇತಿ । ಏತು । ವಾಜೀ । ಕನಿಕ್ರದತ್ । ನಾನದತ್ । ರಾಸಭಃ । ಪತ್ವಾ ॥ ಭರನ್ । ಅಗ್ನಿಮ್ । ಪುರೀಷ್ಯಮ್ । ಮಾ । ಪಾದಿ । ಆಯುಷಃ । ಪುರಾ ॥

---

| ಮಂತ್ರ | ವಿನಿಯೋಗ |
|---|---|
| ಪ್ರೈತು...ಪುರಾ ॥ | ಉಖೆಯ ಮಣ್ಣನ್ನು ತೆಗೆದುಕೊಂಡು ಹಿಂದಿರುಗಲು. |

---

ದ್ಯಾವಾಪೃಥಿವೀ=ಭೂಮಿ-ಸ್ವರ್ಗಗಳನ್ನು; ಮಾ ಅಭಿಶೂಶುಚಃ =ಸಂತಾಪಗೊಳಿಸ ಬೇಡ; ಅಂತರಿಕ್ಷಮ್ ಮಾ ಅಭಿ ಶೂಶುಚಃ=ಅಂತರಿಕ್ಷದ ವಿಷಯದಲ್ಲಿಯೂ ಶಾಂತನಾಗಿರು; ವನಸ್ಪತೀನ್ ಮಾ ಅಭಿಶೂಶುಚಃ=ವನಸ್ಪತಿಗಳನ್ನು ತಾಪಗೊಳಿಸಬೇಡ. ✦ವಾಜೀ=ಕುದುರೆಯು; ಕನಿಕ್ರದತ್=ಸಂತೋಷದಿಂದ ಹೇಷಾರವ ಮಾಡುತ್ತಾ; ಪ್ರ ಏತು=ಮುಂದೆ ಹೋಗಲಿ; ರಾಸಭಃ=ಕತ್ತೆಯು; ನಾನದತ್=ಹರ್ಷಧ್ವನಿಯನ್ನು ಮಾಡುತ್ತಾ; ಪತ್ವಾ=ಗಮನಶೀಲವಾಗಿ; ಪುರೀಷ್ಯಮ್=ಉಖಾಸಾಧನವಾದ; ಅಗ್ನಿಮ್=ಮಣ್ಣನ್ನು; ಭರನ್=ಹೊರುತ್ತಾ[ಹೋಗಲಿ]. [ಅದು] ಆಯುಷಃ ಪುರಾ=ಪೂರ್ಣಾಯುಸ್ಸಿಗೆ ಮೊದಲೇ; ಮಾ ಪಾದಿ=[ಅಗ್ನಿತಾಪದಿಂದ] ಸಾಯದಿರಲಿ;

# ರಾಸಭೋ ವಾಂ ಕನಿಕ್ರದತ್ಸುಯುಕ್ತೋ ವೃಷಣಾ ರಥೇ ।
# ಸ ವಾಮಗ್ನಿಂ ಪುರೀಷ್ಯಮಾಶುರ್ದೂತೋ ವಹಾದಿತಃ ॥

ರಾಸಭಃ । ವಾಮ್ । ಕನಿಕ್ರದತ್ । ಸುಯುಕ್ತ ಇತಿ ಸು-ಯುಕ್ತಃ । ವೃಷಣಾ । ರಥೇ ॥

ಸಃ । ವಾಮ್ । ಅಗ್ನಿಮ್ । ಪುರೀಷ್ಯಮ್ । ಆಶುಃ । ದೂತಃ । ವಹಾತ್ । ಇತಃ ॥

| ಮಂತ್ರ | ವಿನಿಯೋಗ |
|---|---|
| ರಾಸಭೋ ವಾಂ...ಇತಃ ॥ | ಹಿಂದಿರುಗಲು ಎರಡನೆಯ ಮಂತ್ರ. |

✦ವೃಷಣಾ=ಫಲವರ್ಷಣಸಮರ್ಥರಾದ; [ಅಶ್ವಗರ್ಭಗಳೇ!] ವಾಮ್=ನಿಮ್ಮಿಬ್ಬರಲ್ಲಿ; ರಾಸಭಃ=ಕತ್ತೆಯು; ಕನಿಕ್ರದತ್=ಸಂತೋಷದಿಂದ ಧ್ವನಿಮಾಡುತ್ತಾ; [ಹೋಗಲಿ] ವಾಮ್=ನಿಮ್ಮಿಬ್ಬರಲ್ಲಿ; ಸಃ=ಆ ರಾಸಭವು ಆಶುಃ ದೂತಃ=ಬೇಗನೆ ಹೋಗುವ ರಾಜದೂತನಂತೆ; ರಥೇ ಸುಯುಕ್ತಃ=ರಥದಂತಿರುವ ಮೃದ್ಭಾರದಲ್ಲಿ ಚೆನ್ನಾಗಿ ಕಟ್ಟಲ್ಪಟ್ಟು; ಅಗ್ನಿಮ್ ಪುರೀಷ್ಯಮ್=ಮೃದ್ರೂಪವಾದ ಅಗ್ನಿಯನ್ನು; ಇತಃ=ಈ ಪ್ರದೇಶದಿಂದ; ವಹಾತ್= ಯಾಗಶಾಲೆಗೆ ಒಯ್ಯಲಿ.

ಅಗ್ನಿಯೇ! ನೀನು ದ್ಯಾವಾಪೃಥಿವಿಗಳ ಗರ್ಭವಾಗಿ ಈಗ ತಾನೇ ಹುಟ್ಟಿದ ಮಗುವಿನಂತೆ ಇರುವೆ. ನೀನು ಪೂಜನೀಯನು. ಓಷಧಿಗಳಲ್ಲಿ ಜಠರಾಗ್ನಿರೂಪದಿಂದ ಪೋಷಿತನಾದವನು. ಕಳೆಯಲು ಜನಿಸಿದವನು. ಮಾತೃರೂಪವಾದ ಓಷಧಿಗಳಿಗಾಗಿ ತನ್ನ ಇಷ್ಟಕ್ಕಾಗಿ ಅಳುವ ಮಗುವಿನಂತೆ ಕ್ರಂದನ ಮಾಡುತ್ತಾ ಹೋಗು.

ಚೆನ್ನಾಗಿ ಹೋಗಲು ತಿಳಿದಿರುವ ಗರ್ದಭವೇ! ನೀನು ಮಣ್ಣನ್ನು ಹೊರುವವನು. ನೀನು ಸ್ಥಿರನೂ ಶೀಘ್ರಗಾಮಿಯೂ ಆಗು. ವಿಶಾಲವಾದ ಬೆನ್ನುಳ್ಳವನಾಗು. ಈ ಮಂತ್ರದಲ್ಲಿ ಗರ್ದಭವನ್ನು ಪ್ರಶಂಸಿಸಲಾಗಿದೆ.

ಉಖೆಯ ಮಣ್ಣನ್ನು ತೆಗೆದುಕೊಂಡು ಋತ್ವಿಗ್ಯಜಮಾನರು ಕುದುರೆಯನ್ನು ಮುಂದಿಟ್ಟುಕೊಂಡು ಹಿಂದಿರುಗುತ್ತಾರೆ.

ವೃಷಾಽಗ್ನಿಂ ವೃಷಣಂ ಭರನ್ನಪಾಂ ಗರ್ಭಗ್ಂ ಸಮುದ್ರಿಯಮ್ ।

ಅಗ್ನ ಆ ಯಾಹಿ [(೧೬)] ವೀತಯ ಋತಗ್ಂ ಸತ್ಯಮ್ ॥

---

ವೃಷಾ । ಅಗ್ನಿಮ್ । ವೃಷಣಮ್ । ಭರನ್ನ್ । ಅಪಾಮ್ । ಗರ್ಭಮ್ । ಸಮುದ್ರಿಯಮ್ ॥

ಅಗ್ನೇ । ಏತಿ । ಯಾಹಿ । (೧೬) । ವೀತಯೇ । ಋತಮ್ । ಸತ್ಯಮ್ ॥

---

| ಮಂತ್ರ | ವಿನಿಯೋಗ |
| --- | --- |
| ವೃಷಾಗ್ನಿಂ...ಸತ್ಯಮ್ ॥ | ಹಿಂದಿರುಗಲು ಮೂರನೆಯ ಮಂತ್ರ. |

---

✦ವೃಷಾ=ವರ್ಷಣಸಮರ್ಥವಾದ ಈ ರಾಸಭವು; ವೃಷಣಮ್=ಫಲವರ್ಷಣ ಸಮರ್ಥವಾದ; **ಅಪಾಮ್ ಗರ್ಭಮ್**=ಮೋಡಗಳಲ್ಲಿ ವಿದ್ಯುದ್ರೂಪವಾಗಿರುವ; **ಸಮುದ್ರಿಯಮ್**=ಸಮುದ್ರದಲ್ಲಿ ಬಡಬಾಗ್ನಿರೂಪವಾಗಿರುವ; **ಅಗ್ನಿಮ್**=ಪುರೀಷ್ಯಾಗ್ನಿಯನ್ನು; **ಭರನ್**=ಹೊತ್ತುಕೊಂಡು [ಹೋಗಲಿ]; **ಅಗ್ನೇ**=ಅಂತಹ ಸಾಮರ್ಥ್ಯವುಳ್ಳ ಅಗ್ನಿಯೇ! **ವೀತಯೇ**=ಪ್ರಜೋತ್ಪತ್ತಿಗಾಗಿ; **ಋತಮ್**=ಕೃಷ್ಯಾದಿಸಾಧನವಾದ ಭೂಮಿಯನ್ನು[ಕುರಿತು]**ಸತ್ಯಮ್**=ಯಾಗಫಲಲಭ್ಯವಾದ ಸ್ವರ್ಗವನ್ನೂ[ಕುರಿತು] **ಆ ಯಾಹಿ**=ಬಾ.

---

ಕುದುರೆಯು ಹರ್ಷಧ್ವನಿಗೈಯುತ್ತಾ ಚಲಿಸಲಿ. ಗರ್ದಭವೂ ಹಾಗೆಯೇ ಮುಂದುವರೆಯಲಿ. ಅದು ಪೂರ್ಣಾಯುಸ್ಸಿಗೆ ಮೊದಲೇ ಅಗ್ನಿತಾಪದಿಂದ ಸಾಯದಿರಲಿ. ಈ ಮಂತ್ರದಲ್ಲಿಯೂ ಮೃತ್ತಿಕೆ-ಅಗ್ನಿಗಳ ಅಭೇದವಿದೆ.

ಹೇ! ಫಲಪ್ರದಾತೃಗಳಾದ ಅಶ್ವ-ಗರ್ದಭಗಳೇ! ನಿಮ್ಮಿಬ್ಬರಲ್ಲಿ ರಾಸಭವು ಧ್ವನಿ ಮಾಡುತ್ತಾ ಈ ಮೃತ್ತಿಕಾರೂಪವಾದ ಅಗ್ನಿಯನ್ನು ಯಾಗಶಾಲೆಗೆ ಒಯ್ಯಲಿ.

ಅಗ್ನಿಯು ವಿದ್ಯುದ್ರೂಪದಿಂದ ಮೋಡಗಳ ನೀರಿನಲ್ಲಿ ಇರುತ್ತಾನೆ. ಬಡಬಾಗ್ನಿರೂಪದಿಂದ ಸಮುದ್ರದಲ್ಲಿ ಇರುತ್ತಾನೆ. ಇಂತಹ ಪ್ರಭಾವವುಳ್ಳ ಅಗ್ನಿಯು ಪ್ರಜೋತ್ಪತ್ತಿಗಾಗಿ ಭೂಮಿ-ಸ್ವರ್ಗಗಳನ್ನು ಕುರಿತು ಬರಲಿ.

ಓಷಧಯಃ ಪ್ರತಿಗೃಹ್ಣೀತಾಗ್ನಿಮೇತಗ್ಂ ಶಿವಮಾಯಂತ

ಮಭ್ಯತ್ರ ಯುಷ್ಮಾನ್ । ವ್ಯಸ್ಯನ್ವಿಶ್ವಾ ಅಮತೀರರಾತೀ

ರ್ನಿಷೀದನ್ನೋ ಅಪ ದುರ್ಮತಿಗ್ಂ ಹನತ್ ॥

---

ಓಷಧಯಃ । ಪ್ರತೀತಿ । ಗೃಹ್ಣೀತ । ಅಗ್ನಿಮ್ । ಏತಮ್ । ಶಿವಮ್ । ಆಯಂತಮಿತ್ಯಾ–ಯಂತಮ್ । ಅಭೀತಿ । ಅತ್ರ । ಯುಷ್ಮಾನ್ ॥ ವ್ಯಸ್ಯನ್ನಿತಿ ವಿ–ಅಸ್ಯನ್ । ವಿಶ್ವಾಃ । ಅಮತೀಃ । ಅರಾತೀಃ । ನಿಷೀದನ್ನಿತಿ ನಿ–ಸೀದನ್ । ನಃ । ಅಪೇತಿ । ದುರ್ಮತಿಮಿತಿ ದುಃ–ಮತಿಮ್ । ಹನತ್ ॥

---

| ಮಂತ್ರ | ವಿನಿಯೋಗ |
|---|---|
| ಓಷಧಯಃ...ಹನತ್ ॥ | ಯಾಗವಿಹಾರದೇಶದಲ್ಲಿ ಮೃತ್ತಿಕೆಯನ್ನು ಹಾಕಲು ಮೊದಲನೆಯ ಮಂತ್ರ. |

---

✦ಓಷಧಯಃ=ಓಷಧಿಗಳೇ! ಶಿವಮ್=ಮಂಗಳಕರನಾದ; ಅತ್ರ=ಇಲ್ಲಿ; ಯುಷ್ಮಾನ್=ನಿಮ್ಮನ್ನು; ಅಭಿ ಆಯಂತಮ್=ಎದುರಾಗಿ ಬರುತ್ತಿರುವ; ಏತಮ್ ಅಗ್ನಿಮ್=ಈ ಅಗ್ನಿಯನ್ನು [ಮೃತ್ತಿಕೆಯನ್ನು]; ಪ್ರತಿಗೃಹ್ಣೀತ=ಸ್ವೀಕರಿಸಿರಿ; ವಿಶ್ವಾಃ= ಎಲ್ಲಾ; ಅಮತೀಃ ಅರಾತೀಃ=ರೋಗಜನ್ಯವಾದ ಬಾಧೆಗಳನ್ನು; ವ್ಯಸ್ಯನ್= ಹೋಗಲಾಡಿಸುತ್ತಾ; ನಿಷೀದನ್=ನಿಮ್ಮಲ್ಲಿ ಇರುವವನಾಗಿ; ನಃ=ನಮ್ಮ; ದುರ್ಮತಿಮ್= [ಪ್ರಮಾದಾಲಸ್ಯಾದಿಗಳಿಂದ ಕೂಡಿದ] ಕೆಟ್ಟ ಬುದ್ಧಿಯನ್ನು; ಅಪ ಹನತ್= ಹೋಗಲಾಡಿಸಲಿ.

---

ಯಾಗವಿಹಾರದೇಶದಲ್ಲಿ ಆಚ್ಛಾದನೆಯುಳ್ಳ ಪ್ರದೇಶದಲ್ಲಿ ಮೃತ್ತಿಕೆಯನ್ನು ಹಾಕಬೇಕು.

ಓಷಧಯಃ ಪ್ರತಿ ಮೋದಧ್ವಮೇನಂ ಪುಷ್ಪಾವತೀಃ

ಸುಪಿಪ್ಪಲಾಃ । ಅಯಂ ವೋ ಗರ್ಭ ಋತ್ವಿಯಃ ಪ್ರತ್ನಗ್ಂ

ಸಧಸ್ಥಮಾಸದತ್ ॥ ೧೭-4 ॥

[ಸುಶಸ್ತಿಭಿಸ್ತಿವೋ ಭವ ಯಾಹಿ ಷಟ್ತ್ರಿಗ್ಂಶಚ್ಚ ॥]

---

ಓಷಧಯಃ । ಪ್ರತೀತಿ । ಮೋದಧ್ವಮ್ । ಏನಮ್ । ಪುಷ್ಪಾವತೀರಿತಿ ಪುಷ್ಪ-ವತೀಃ ।

ಸುಪಿಪ್ಪಲಾ ಇತಿ ಸು-ಪಿಪ್ಪಲಾಃ ॥ ಅಯಮ್ । ವಃ । ಗರ್ಭಃ । ಋತ್ವಿಯಃ । ಪ್ರತ್ನಮ್ ।

ಸಧಸ್ಥಮಿತಿ ಸಧ-ಸ್ಥಮ್ । ಏತಿ । ಆಸದತ್ ॥ ೧೭ ॥

---

| ಮಂತ್ರ | ವಿನಿಯೋಗ |
| --- | --- |
| ಓಷಧಯಃ...ಆಸದತ್ ॥ | ಮೃತ್ತಿಕೆಯನ್ನು ಹಾಕಲು ಎರಡನೆಯ ಮತ್ತು ಕೊನೆಯ ಮಂತ್ರ. |

---

✦ಪುಷ್ಪಾವತೀಃ=ಒಳ್ಳೆಯ ಹೂಗಳುಳ್ಳ; ಸುಪಿಪ್ಪಲಾಃ=ಒಳ್ಳೆಯ ಫಲವುಳ್ಳ; ಓಷಧಯಃ=ಓಷಧಿಗಳೇ! ಏನಮ್ ಪ್ರತಿ=ಈ ಅಗ್ನಿಯನ್ನು ಕುರಿತು; ಮೋದಧ್ವಮ್ =ಸಂತೋಷಿಸಿರಿ; ಅಯಮ್=ಈ ಅಗ್ನಿಯು; ಋತ್ವಿಯಃ=ಆಯಾ ಋತುಗಳಲ್ಲಿ ಉಂಟಾಗುವ; ವಃ ಗರ್ಭಃ=ನಿಮ್ಮ ಗರ್ಭರೂಪವಾಗಿ; ಪ್ರತ್ನಮ್=ಪುರಾತನವಾದ; ಸಧಸ್ಥಮ್=ಸ್ಥಾನವನ್ನು; ಆ ಆಸದತ್=ಹೊಂದಿದನು/ಹೊಂದಲಿ.

---

ಓಷಧಿಗಳೇ! ಶಾಂತನಾಗಿ ನಿಮ್ಮ ಬಳಿಗೆ ಬಂದಿರುವ ಈ ಅಗ್ನಿಯನ್ನು ಸ್ವೀಕರಿಸಿ. ಈ ಅಗ್ನಿಯು ನಮಗೆ ರೋಗಾದಿಗಳಿಂದ ಬಂದಿರುವ ಬಾಧೆಯನ್ನು ಪರಿಹರಿಸಲಿ. ಪ್ರಮಾದ, ಆಲಸ್ಯ ಮುಂತಾದವುಗಳಿಂದ ಕೂಡಿದ ಕೆಟ್ಟ ಬುದ್ಧಿಯನ್ನು ಹೋಗಲಾಡಿಸಲಿ.

ಒಳ್ಳೆಯ ಫಲ–ಪುಷ್ಪಗಳಿಂದ ಕೂಡಿದ ಓಷಧಿಗಳೇ! ನೀವು ಈ ಅಗ್ನಿಯನ್ನು ಕುರಿತು ಹರ್ಷಿಸಿರಿ. ಅಗ್ನಿಯು ಋತುಗಳಲ್ಲಿ ಉಂಟಾಗುವ ಗರ್ಭರೂಪನಾಗಿ ಓಷಧಿಗಳಲ್ಲಿ ಪುಷ್ಪ–ಫಲಕಾರಣನು. ಅವನು ಆ ಪುರಾತನಸ್ಥಾನವನ್ನು ಹೊಂದಲಿ.

---

## ವಿನಿಯೋಗಸಂಗ್ರಹ

1 ಸಂ ಮೃತ್ಸ್ನೇಽಪೋ ನಿನಯೇತ್ 2 ಸುಜಾ ಸಂಭೃತಬಂಧನಮ್ ।
3-4 ಉದು ದ್ವಾಭ್ಯಾಂ ಸಮುತ್ಥಾಯ 5 ಸ ಜಾತಸ್ತ್ವಾವಹರೇನ್ಮೃದಮ್ ॥
6 ಸ್ಥಿರೋ ಗರ್ದಭ ಆಧಾಯ 7 ಶಿವ ಆಹಿತಮಂತ್ರಣಮ್ ।
8-9 ಪ್ರೈತು ತ್ರಿಭಿಃ ಶನೈರ್ಯಾತಿ 10-11 ಹ್ಯೋಷ ದ್ವಾಭ್ಯಾಮಿಮಾಂ ಮೃದಮ್ ॥
ಉಪಾಹರೇದೋಷಧೀಷು ಮಂತ್ರಾ ದ್ವಾದಶ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–12

## ॥ ಪಂಚಮೋಽನುವಾಕಃ ॥

ವಿ ಪಾಜಸಾ ಪೃಥುನಾ ಶೋಶುಚಾನೋ ಬಾಧಸ್ವ ದ್ವಿಷೋ ರಕ್ಷಸೋ ಅಮೀವಾಃ । ಸುಶರ್ಮಣೋ ಬೃಹತಶ್ಶರ್ಮಣಿ ಸ್ಯಾಮಗ್ನೇರಹಗ್ಂ ಸುಹವಸ್ಯ ಪ್ರಣೀತೌ ॥

---

ವೀತಿ । ಪಾಜಸಾ । ಪೃಥುನಾ । ಶೋಶುಚಾನಃ । ಬಾಧಸ್ವ । ದ್ವಿಷಃ । ರಕ್ಷಸಃ । ಅಮೀವಾಃ ॥ ಸುಶರ್ಮಣ ಇತಿ ಸು-ಶರ್ಮಣಃ । ಬೃಹತಃ । ಶರ್ಮಣಿ । ಸ್ಯಾಮ್ । ಅಗ್ನೇಃ । ಅಹಮ್ । ಸುಹವಸ್ಯೇತಿ ಸು-ಹವಸ್ಯ । ಪ್ರಣೀತಾವಿತಿ ಪ್ರ-ನೀತೌ ॥

---

ನಾಲ್ಕನೆಯ ಅನುವಾಕದಲ್ಲಿ ಮೃದಾಹರಣವು ಹೇಳಲ್ಪಟ್ಟಿದೆ. ಈ ಐದನೆಯ ಅನುವಾಕದಲ್ಲಿ ಉಖಾನಿರ್ಮಾಣವು ಉಕ್ತವಾಗಿದೆ.

---

| ಮಂತ್ರ | ವಿನಿಯೋಗ |
|---|---|
| ವಿಪಾಜಸಾ...ಪ್ರಣೀತೌ ॥ | ಮಣ್ಣಿನ ಮೂಟೆಯನ್ನು ಬಿಚ್ಚಲು |

---

✦[ಅಗ್ನಿಯೇ! ನೀನು] ಪೃಥುನಾ=ವಿಸ್ತೃತವಾದ/ಹೆಚ್ಚಾದ; ಪಾಜಸಾ=ಬಲದಿಂದ; ಶೋಶುಚಾನಃ=ಪ್ರಕಾಶಮಾನನಾಗಿರುವೆ; [ನೀನು] ದ್ವಿಷಃ=ಶತ್ರುಗಳನ್ನೂ; ರಕ್ಷಸಃ=ರಾಕ್ಷಸರನ್ನೂ; ಅಮೀವಾಃ=ರೋಗಗಳನ್ನೂ; ವಿ ಬಾಧಸ್ವ=ವಿಶೇಷವಾಗಿ ಹೋಗಲಾಡಿಸು; ಅಹಮ್=ನಾನು; ಸುಶರ್ಮಣಃ=ಒಳ್ಳೆಯ ಸುಖವುಳ್ಳ/ಸುಖಪ್ರದನಾದ; ಬೃಹತಃ=ಮಹಾಂತನಾದ; ಸುಹವಸ್ಯ=ಸುಖವಾಗಿ ಆಹ್ವಾನಿಸಲು ಶಕ್ಯನಾಗಿರುವ; ಅಗ್ನೇಃ=ಅಗ್ನಿಯ; ಪ್ರಣೀತೌ=ಪರಿಚರ್ಯೆಯಲ್ಲಿ; ಶರ್ಮಣಿ=ಉಂಟಾಗುವ ಸುಖದಲ್ಲಿ; ಸ್ಯಾಮ್=ಇರುವೆನು.

**ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ಯೋವಶ್ಶಿವತಮೋ ರಸಸ್ತಸ್ಯ ಭಾಜಯತೇಹ ನಃ । ಉಶತೀರಿವ ಮಾತರಃ ॥**

---

ಆಪಃ । ಹಿ । ಸ್ಥ । ಮಯೋಭುವ ಇತಿ ಮಯಃ-ಭುವಃ । ತಾಃ । ನಃ । ಊರ್ಜೇ । ದಧಾತನ ॥ ಮಹೇ । ರಣಾಯ । ಚಕ್ಷಸೇ ॥ ಯಃ । ವಃ । ಶಿವತಮ ಇತಿ ಶಿವ-ತಮಃ । ರಸಃ । ತಸ್ಯ । ಭಾಜಯತ । ಇಹ । ನಃ । ಉಶತೀಃ । ಇವ । ಮಾತರಃ ॥

---

| ಮಂತ್ರ | ವಿನಿಯೋಗ |
|---|---|
| **ಆಪೋ ಹಿ...ಚಕ್ಷಸೇ ॥**<br>**ಯೋ ವಃ...ಮಾತರಃ ॥** | ಮಣ್ಣಿನಲ್ಲಿ ನೀರನ್ನು ಹಾಕಲು ವಿಹಿತವಾದ ಮೂರು ಮಂತ್ರಗಳಲ್ಲಿ ಮೊದಲ ಎರಡು ಮಂತ್ರಗಳು. |

---

✦**ಆಪಃ ಹಿ**=ಎಲೈ! ನೀರುಗಳೇ! [ನೀವೇ]; **ಮಯೋಭುವಃ ಸ್ಥ**=ಸುಖವನ್ನು ಉಂಟುಮಾಡುವವರಾಗಿದ್ದೀರಿ; **ತಾಃ**=ಅಂತಹ [ನೀವು] **ನಃ**=ನಮ್ಮನ್ನು; **ಊರ್ಜೇ** =ನಿಮ್ಮ ರಸವನ್ನು [ಅನುಭವಿಸುವುದಕ್ಕೆ] [ಮತ್ತು] **ರಣಾಯ**=ರಮಣೀಯವಾದ; **ಮಹೇ ಚಕ್ಷಸೇ**=ಮಹತ್ತಾದ ದರ್ಶನಕ್ಕಾಗಿ/ಪರತತ್ತ್ವಸಾಕ್ಷಾತ್ಕಾರಕ್ಕಾಗಿ; **ದಧಾತನ** =ನೆಲೆಗೊಳಿಸಿರಿ; ✦ [ಎಲೈ! ನೀರುಗಳೇ!] **ಉಶತೀಃ ಮಾತರಃ ಇವ**=ಕರುಗಳಲ್ಲಿ ಪ್ರೀತಿ ಇರುವ ತಾಯಿಗಳಂತೆ; **ಯಃ ವಃ**=ಯಾವ ನಿಮ್ಮ; **ಶಿವತಮಃ ರಸಃ**= ಅತ್ಯುತ್ತಮ ರಸವಾಗಿದೆಯೋ; **ತಸ್ಯ**=ಅದಕ್ಕೆ; **ಇಹ**=ಈ ಕರ್ಮದಲ್ಲಿ; **ನಃ**=ನಮ್ಮನ್ನು; **ಭಾಜಯತ**=ಭಾಗಿಗಳಾಗುವಂತೆ ಮಾಡಿರಿ;

---

ಹೇ! ಅಗ್ನಿಯೇ! ಹೆಚ್ಚಾದ ಬಲದಿಂದ ಕೂಡಿ ಪ್ರಕಾಶಿಸುತ್ತಾ, ಶತ್ರುಗಳನ್ನೂ, ರಾಕ್ಷಸರನ್ನೂ, ರೋಗಗಳನ್ನೂ ವಿಶೇಷವಾಗಿ ನಮ್ಮಿಂದ ದೂರ ಮಾಡು. ನೀನು ಸುಖವನ್ನು

ತಸ್ಮಾ ಅರಂ ಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ ।

ಆಪೋ ಜನಯಥಾ ಚ ನಃ ॥ ಮಿತ್ರ[ಮಿತ್ರಃ(೧೮)

ಸಗ್ಂಸೃಜ್ಯ] ಸ್ಸಗ್ಂಸೃಜ್ಯ ಪೃಥಿವೀಂ ಭೂಮಿಂ ಚ

ಜ್ಯೋತಿಷಾ ಸಹ ।

---

ತಸ್ಮೈ । ಅರಮ್ । ಗಮಾಮ । ವಃ । ಯಸ್ಯ । ಕ್ಷಯಾಯ । ಜಿನ್ವಥ ॥ ಆಪಃ । ಜನಯಥ । ಚ । ನಃ ॥ ಮಿತ್ರಃ । (೧೮) । ಸಗ್ಂಸೃಜ್ಯೇತಿ ಸಂ-ಸೃಜ್ಯ । ಪೃಥಿವೀಮ್ । ಭೂಮಿಮ್ । ಚ । ಜ್ಯೋತಿಷಾ । ಸಹ ॥

---

| ಮಂತ್ರ | ವಿನಿಯೋಗ |
|---|---|
| ತಸ್ಮಾ...ಚ ನಃ ॥ | ನೀರನ್ನು ಹಾಕಲು ಮೂರನೆಯ ಮಂತ್ರ. |
| ಮಿತ್ರಃ...ವಿಭುಮ್ ॥ | ಮಣ್ಣಿನೊಡನೆ ಅರ್ಮಕಪಾಲ ಮುಂತಾದವನ್ನು ಸೇರಿಸಲು ಪ್ರಥಮಮಂತ್ರ. |

---

✦[ಎಲೈ! ನೀರುಗಳೇ!] ಯಸ್ಯ=ಯಾವ ರಸದ; ಕ್ಷಯಾಯ=ವಾಸದಿಂದ; ಜಿನ್ವಥ=ನೀವು ತೃಪ್ತಿ ಹೊಂದುತ್ತೀರೋ; ತಸ್ಮೈ=ಆ ರಸಕ್ಕಾಗಿ; ವಃ=ನಿಮ್ಮನ್ನು ಅರಮ್ ಗಮಾಮ[ಅಲಮ್ ಗಮಾಮ]=ಹೆಚ್ಚಾಗಿ ಹೊಂದುತ್ತೇವೆ. ಚ=ಮತ್ತು; ಆಪಃ=ಎಲೈ! ನೀರುಗಳೇ! [ನೀವು]; ನಃ=ನಮ್ಮನ್ನು; ಜನಯಥ=ಪ್ರಜೋತ್ಪಾದನಸಮರ್ಥರನ್ನಾಗಿ ಮಾಡಿರಿ; ✦ಮಿತ್ರಃ=ಮಿತ್ರದೇವನು; ಪೃಥಿವೀಮ್=ವಿಸ್ತೃತವಾದ; ಭೂಮಿಮ್ ಚ=ಉಖಾಸಾಧನವಾದ ಮಣ್ಣನ್ನೂ ಮತ್ತು ನೀರನ್ನೂ; ಜ್ಯೋತಿಷಾ ಸಹ=ಅರ್ಮಕಪಾಲಾದಿ ಜ್ಯೋತಿಗಳೊಡನೆ; ಸಂಸೃಜ್ಯ=ಚೆನ್ನಾಗಿ ಸೇರಿಸಿ;

**ಸುಜಾತಂ ಜಾತವೇದಸಮಗ್ನಿಂ ವೈಶ್ವಾನರಂ ವಿಭುಮ್ । ಅಯಕ್ಷ್ಮಾಯ ತ್ವಾ ಸಗ್ಂಸೃಜಾಮಿ ಪ್ರಜಾಭ್ಯಃ । ವಿಶ್ವೇ ತ್ವಾ ದೇವಾ ವೈಶ್ವಾನರಾಸ್ಸಗ್ಂಸೃಜಂತ್ವಾನುಷ್ಟುಭೇನ ಛಂದಸಾಽಂಗಿರಸ್ವತ್ ॥**

---

ಸುಜಾತಮಿತಿ ಸು-ಜಾತಮ್ । ಜಾತವೇದಸಮಿತಿ ಜಾತ-ವೇದಸಮ್ । ಅಗ್ನಿಮ್ । ವೈಶ್ವಾನರಮ್ । ವಿಭುಮಿತಿ ವಿ-ಭುಮ್ ॥ ಅಯಕ್ಷ್ಮಾಯ । ತ್ವಾ । ಸಮಿತಿ । ಸೃಜಾಮಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ ॥ ವಿಶ್ವೇ । ತ್ವಾ । ದೇವಾಃ । ವೈಶ್ವಾನರಾಃ । ಸಮಿತಿ । ಸೃಜಂತು । ಆನುಷ್ಟುಭೇನೇತ್ಯಾನು-ಸ್ತುಭೇನ । ಛಂದಸಾ । ಅಂಗಿರಸ್ವತ್ ॥

---

| ಮಂತ್ರ | ವಿನಿಯೋಗ |
|---|---|
| ಅಯಕ್ಷ್ಮಾಯ...ಅಂಗಿರಸ್ವತ್ ॥ | ವಸ್ತುಗಳನ್ನು ಸೇರಿಸಲು ಎರಡನೆಯ ಮಂತ್ರ. |

---

**ಜಾತವೇದಸಮ್**=ಹುಟ್ಟಿದ ಪ್ರಾಣಿಗಳ ವಿಷಯವೆಲ್ಲವನ್ನೂ ತಿಳಿದಿರುವ; **ವೈಶ್ವಾನರಮ್**=ಸರ್ವಪುರುಷರಿಗೂ ಉಪಕಾರಕನಾಗಿ ಹಿತನಾಗಿರುವ; **ವಿಭುಮ್**=ಎಲ್ಲಾ ಯಜಮಾನರ ಮನೆಗಳಲ್ಲಿಯೂ ಇರುವ; **ಅಗ್ನಿಮ್**=[ಉಖಾಶಬ್ದವಾಚ್ಯನಾದ] ಅಗ್ನಿಯನ್ನು; **ಸುಜಾತಮ್**=ಚೆನ್ನಾಗಿ ಹುಟ್ಟುವಂತೆ/ನಿರ್ಮಿತವಾಗುವಂತೆ [ಮಾಡಿದನು] +[ಎಲೈ! ಅಗ್ನಿಯೇ!] **ಪ್ರಜಾಭ್ಯಃ**=ಪ್ರಜೆಗಳ; **ಅಯಕ್ಷ್ಮಾಯ**= ರೋಗವಿಲ್ಲದಿರುವಿಕೆಗಾಗಿ; **ತ್ವಾ**=ನಿನ್ನನ್ನು; **ಸಂ ಸೃಜಾಮಿ**=[ಅರ್ಮಕಪಾಲಾದಿಗಳೊಡನೆ] ಸೇರಿಸುತ್ತೇನೆ; **ವೈಶ್ವಾನರಾಃ**=ಎಲ್ಲರಿಗೂ ಹಿತಕಾರಿಗಳಾದ; **ವಿಶ್ವೇ ದೇವಾಃ**=ಸರ್ವ ದೇವತೆಗಳೂ; **ಆನುಷ್ಟುಭೇನ ಛಂದಸಾ**=ಅನುಷ್ಟುಪ್ ಛಂದಸ್ಸಿನ ಬೆಂಬಲದಿಂದ; **ಅಂಗಿರಸ್ವತ್**=ಅಂಗಿರೋಮುನಿಗಳಂತೆ; **ತ್ವಾ**=ನಿನ್ನನ್ನು; **ಸಂ ಸೃಜಂತು**=ಸೇರಿಸಲಿ.

ರುದ್ರಾಸ್ಸಂಭೃತ್ಯ ಪೃಥಿವೀಂ ಬೃಹಜ್ಜ್ಯೋತಿಸ್ಸಮೀಧಿರೇ ।

ತೇಷಾಂ ಭಾನುರಜಸ್ರ ಇಚ್ಛುಕ್ರೋ ದೇವೇಷು ರೋಚತೇ ॥

---

ರುದ್ರಾಃ । ಸಂಭೃತ್ಯೇತಿ ಸಮ್-ಭೃತ್ಯ । ಪೃಥಿವೀಮ್ । ಬೃಹತ್ । ಜ್ಯೋತಿಃ । ಸಮಿತಿ ।

ಈಧಿರೇ ॥ ತೇಷಾಮ್ । ಭಾನುಃ । ಅಜಸ್ರಃ । ಇತ್ । ಶುಕ್ರಃ । ದೇವೇಷು । ರೋಚತೇ ॥

---

| ಮಂತ್ರ | ವಿನಿಯೋಗ |
|---|---|
| ರುದ್ರಾಃ...ರೋಚತೇ ॥ | ಮಣ್ಣನ್ನು ತೀಡಿ ಸಂಕ್ಷೇಪಿಸಲು |

---

✦ರುದ್ರಾಃ=ರುದ್ರದೇವತೆಗಳು; ಪೃಥಿವೀಮ್=ಮಣ್ಣನ್ನು; ಸಂಭೃತ್ಯ=ಮರ್ದಿಸಿ; ಬೃಹತ್=ಪ್ರೌಢವಾದ ಉಖಾರೂಪವಾದ; ಜ್ಯೋತಿಃ=ಪ್ರಕಾಶಮಾನವಾದ ಅಗ್ನಿಯನ್ನು; ಸಮೀಧಿರೇ=ಜ್ವಲಿಸುವಂತೆ ಮಾಡಿದರು; ತೇಷಾಮ್=ಆ ರುದ್ರರ; ಭಾನುಃ= ಪ್ರಕಾಶಮಾನವಾದ; ಅಜಸ್ರಃ ಇತ್=ನಿರಂತರವಾಗಿರುವ; ಶುಕ್ರಃ=ದೀಪ್ತಿಯುಕ್ತವಾದ ಅಗ್ನಿಯು; ದೇವೇಷು=ದೇವತೆಗಳಲ್ಲಿಯೂ; ರೋಚತೇ=ಬೆಳಗುತ್ತಿರುತ್ತದೆ.

---

ಕೊಡತಕ್ಕವನು. ದೊಡ್ಡವನು. ನಿನ್ನನ್ನು ಸುಲಭವಾಗಿ ಆಹ್ವಾನಿಸಬಹುದು. ಇಂತಹ ನಿನ್ನ ಸೇವೆಯ ಸುಖದಲ್ಲಿ ನಾನು ಯಾವಾಗಲೂ ಇರುವಂತಾಗಲಿ. ಹೀಗೆ ನೀನು ಅನುಗ್ರಹಿಸು.

ನೀರುಗಳು ಶ್ರಮವನ್ನು ಹೋಗಲಾಡಿಸಿ ಸುಖವನ್ನು ಕೊಡುತ್ತವೆ; ನಿಮ್ಮ ರಸವನ್ನು ಅನುಭವಿಸುವಂತೆ ನೀವು ನಮ್ಮನ್ನು ಅನುಗ್ರಹಿಸಿರಿ. ನಾವು ದಿವ್ಯದರ್ಶನವನ್ನು/ ಪರತತ್ತ್ವಜ್ಞಾನವನ್ನು ಪಡೆಯುವಂತೆಯೂ ಮಾಡಿರಿ.

ತಮ್ಮ ಕರುಗಳಲ್ಲಿ ಪ್ರೀತಿಯಿಂದ ಹಸುಗಳು/ಪ್ರಾಣಿಗಳು ಅವುಗಳಿಗೆ ತಮ್ಮ ಹಾಲನ್ನು ಉಣಿಸುತ್ತವೆ. ಹಾಗೆಯೇ ನೀವು/ನೀರುಗಳು ಮಕ್ಕಳಂತಿರುವ ನಮಗೆ ಅತ್ಯಂತ ಸುಖಕರವಾದ ನಿಮ್ಮ ರಸವನ್ನು ಕರುಣಿಸಿರಿ.

ಸಗ್ಂಸ್ಸೃಷ್ಟಾಂ ವಸುಭೀ ರುದ್ರೈರ್ಧೀರೈಃ ಕರ್ಮಣ್ಯಾಂ ಮೃದಮ್ । ಹಸ್ತಾಭ್ಯಾಂ ಮೃದ್ವೀಂ ಕೃತ್ವಾ ಸಿನೀವಾಲೀ ಕರೋತು [ಕರೋತು(೧೯)] ತಾಮ್ ।

---

ಸಗ್ಂಸ್ಸೃಷ್ಟಾಮಿತಿ ಸಮ್-ಸೃಷ್ಟಾಮ್ । ವಸುಭಿರಿತಿ ವಸು-ಭಿಃ । ರುದ್ರೈಃ । ಧೀರೈಃ । ಕರ್ಮಣ್ಯಾಮ್ । ಮೃದಮ್ ॥ ಹಸ್ತಾಭ್ಯಾಮ್ । ಮೃದ್ವೀಮ್ । ಕೃತ್ವಾ । ಸಿನೀವಾಲೀ । ಕರೋತು । (೧೯) । ತಾಮ್ ॥

---

| ಮಂತ್ರ | ವಿನಿಯೋಗ |
|---|---|
| ಸಗ್ಂಸ್ಸೃಷ್ಟಾಂ...ತಾಮ್ ॥ | ಉಖೆಯನ್ನು ಮಾಡುವವನಿಗೆ ಅಧ್ವರ್ಯುವು ಮಣ್ಣನ್ನು ಕೊಡಲು ಪ್ರಥಮಮಂತ್ರ. |

---

+ಧೀರೈಃ=ಬುದ್ಧಿವಂತರಾದ; ವಸುಭಿಃ=ವಸುಗಳಿಂದಲೂ; ರುದ್ರೈಃ=ರುದ್ರರಿಂದಲೂ; ಸಗ್ಂಸ್ಸೃಷ್ಟಾಮ್=ಚೆನ್ನಾಗಿ ಕೂಡಿಸಲ್ಪಟ್ಟಿರುವ; ಕರ್ಮಣ್ಯಾಮ್=ಉಖಾ ನಿರ್ಮಾಣಕ್ಕೆ ಯೋಗ್ಯವಾಗಿರುವ; ಮೃದಮ್=ಮಣ್ಣನ್ನು; ಸಿನೀವಾಲೀ=ಸಿನೀವಾಲೀ ದೇವತೆಯು; ಹಸ್ತಾಭ್ಯಾಮ್=ಕೈಗಳಿಂದ; ಮೃದ್ವೀಮ್=ಮತ್ತಷ್ಟು ಮೃದುವನ್ನಾಗಿ; ಕೃತ್ವಾ=ಮಾಡಿ; ತಾಮ್=ಆ ಉಖೆಯನ್ನು; ಕರೋತು=ನಿರ್ಮಿಸಲಿ.

---

ಎಲೈ! ಜಲಗಳೇ! ಯಾವ ರಸಗಳ ನಿವಾಸದಿಂದ ನೀವು ತೃಪ್ತರಾಗುತ್ತಿರೋ ಆ ರಸವನ್ನು ಹೊಂದಲು ನಾವು ಬೇಗನೇ ಬರುತ್ತೇವೆ. ನೀವು ಆ ರಸವನ್ನು ಅನುಗ್ರಹಿಸಿರಿ. ನಾವು ಪ್ರಜೋತ್ಪಾದನಶಕ್ತಿಯನ್ನು ಪಡೆಯುವಂತೆ ಮಾಡಿರಿ.

ಉಖೆಯನ್ನು ಮಾಡಲು ಕೆಲವು ವಸ್ತುಗಳೂ, ಅದನ್ನು ಗಟ್ಟಿ ಮಾಡುವುದಕ್ಕಾಗಿ ಕೆಲವು ವಸ್ತುಗಳೂ ಬೇಕು. ಅರ್ಮಕಪಾಲ ಎಂದರೆ ಒಡೆದು ಎಸೆದಿರುವ ಮಡಕೆಯ ಚೂರುಗಳು. ವೇಣುದಂಡ, ಪುಡಿ ಮಾಡಿದ ಕಲ್ಲು, ಆಡಿನ ಲೋಮ, ಕೃಷ್ಣಾಜಿನ-ಇವುಗಳಲ್ಲಿ ವೇಣುದಂಡ ಮತ್ತು ಅರ್ಮಕಪಾಲವು ಉಖೆಯನ್ನು ನಿರ್ಮಿಸಲೂ ಪುಡಿ

ಸಿನೀವಾಲೀ ಸುಕಪರ್ದಾ ಸುಕುರೀರಾ ಸ್ವೌಪಶಾ । ಸಾ

ತುಭ್ಯಮದಿತೇ ಮಹ ಓಖಾಂ ದಧಾತು ಹಸ್ತಯೋಃ ॥

---

ಸಿನೀವಾಲೀ । ಸುಕಪರ್ದೇತಿ ಸು-ಕಪರ್ದಾ । ಸುಕುರೀರೇತಿ ಸು-ಕುರೀರಾ ।

ಸ್ವೌಪಶೇತಿ ಸು-ಔಪಶಾ ॥ ಸಾ । ತುಭ್ಯಮ್ । ಅದಿತೇ । ಮಹೇ । ಆ । ಉಖಾಮ್ ।

ದಧಾತು । ಹಸ್ತಯೋಃ ॥

---

| ಮಂತ್ರ | ವಿನಿಯೋಗ |
|---|---|
| ಸಿನೀವಾಲೀ...ಹಸ್ತಯೋಃ ॥ | ಉಖೆಯನ್ನು ಮಾಡುವವನಿಗೆ ಮಣ್ಣನ್ನು ಕೊಡಲು ಎರಡನೆಯ ಮಂತ್ರ. |

---

✦ಮಹೇ ಅದಿತೇ=ಪ್ರೌಢೆಯಾದ ಪೃಥಿವೀದೇವಿಯೇ! ಯಾ ಸಿನೀವಾಲೀ=ಯಾವ ಸಿನೀವಾಲಿಯು; ಸುಕಪರ್ದಾ=ಒಳ್ಳೆಯ ಕೇಶಬಂಧವುಳ್ಳವಳೋ; ಸುಕುರೀರಾ= ತಲೆಯಲ್ಲಿ ಧರಿಸುವ ಒಳ್ಳೆಯ ಜಾಲಕವುಳ್ಳವಳೋ; ಸ್ವೌಪಶಾ=ಒಳ್ಳೆಯ ಮಲಗಲು ಯೋಗ್ಯವಾದ ಅವಯವವಿಶೇಷವುಳ್ಳವಳೋ; ಸಾ=ಆ ಸಿನೀವಾಲಿದೇವಿಯು; ತುಭ್ಯಮ್ ಹಸ್ತಯೋಃ=ನಿನಗೆ [ನಿನ್ನ ಕೈಗಳಲ್ಲಿ]; ಉಖಾಮ್=ಉಖೆಯನ್ನು; ಆ ದಧಾತು=ಇಡಲಿ.

---

ಮಾಡಿದ ಕಲ್ಲು ಮುಂತಾದವು ಉಖೆಯನ್ನು ಗಟ್ಟಿ ಮಾಡಲೂ ಬೇಕಾಗುತ್ತವೆ.

ಮಿತ್ರದೇವನು ಖನನದಿಂದ ಪಡೆದ ಮೃತ್ತಿಕೆಯನ್ನೂ, ಜಲವನ್ನೂ ಜ್ಯೋತೀರೂಪವಾದ ಅರ್ಮಕಪಾಲಾದಿಗಳನ್ನೂ ಸೇರಿಸಿ ಉಖೆಯನ್ನು ನಿರ್ಮಿಸಿದನು.

ಈ ಉಖಾರೂಪನಾದ ಅಗ್ನಿಯು ಜಂತುಗಳೆಲ್ಲದರ ವಿಷಯವನ್ನೂ ತಿಳಿದಿರುವವನು. ಸರ್ವಮಾನವಹಿತನು. ಎಲ್ಲ ಯಜಮಾನರ ಮನೆಗಳಲ್ಲಿಯೂ ಅಗ್ನಿರೂಪದಿಂದ ಇರುವವನು. ಹೀಗೆ ಉಖೆಯೊಡನೆ ಅಭಿನ್ನನಾಗಿರುವ/ಉಖೆಯೇ ಆಗಿರುವ ಅಗ್ನಿಯನ್ನು ಚೆನ್ನಾಗಿ ನಿರ್ಮಿಸಿದನು.

ಪ್ರಜೆಗಳು ರೋಗವಿಲ್ಲದವರಾಗುವಂತೆ ಅಗ್ನಿಯಾದ ನಿನ್ನನ್ನು ಅರ್ಮಕಪಾಲಾದಿಗಳೊಡನೆ ಸೇರಿಸುತ್ತೇನೆ.

ಉಖಾಂ ಕರೋತು ಶಕ್ತ್ಯಾ ಬಾಹುಭ್ಯಾಮದಿತಿರ್ಧಿಯಾ ।

ಮಾತಾ ಪುತ್ರಂ ಯಥೋಪಸ್ಥೇ ಸಾಽಗ್ನಿಂ ಬಿಭರ್ತು

ಗರ್ಭ ಆ ॥ ಮಖಸ್ಯ ಶಿರೋಽಸಿ ಯಜ್ಞಸ್ಯ ಪದೇ ಸ್ಥಃ ॥

---

ಉಖಾಮ್ । ಕರೋತು । ಶಕ್ತ್ಯಾ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಅದಿತಿಃ । ಧಿಯಾ ॥ ಮಾತಾ । ಪುತ್ರಮ್ । ಯಥಾ । ಉಪಸ್ಥ ಇತ್ಯುಪ-ಸ್ಥೇ । ಸಾ । ಅಗ್ನಿಮ್ । ಬಿಭರ್ತು । ಗರ್ಭೇ । ಆ ॥ ಮಖಸ್ಯ । ಶಿರಃ । ಅಸಿ । ಯಜ್ಞಸ್ಯ । ಪದೇ ಇತಿ । ಸ್ಥಃ ॥

---

| ಮಂತ್ರ | ವಿನಿಯೋಗ |
|---|---|
| ಉಖಾಂ...ಗರ್ಭ ಆ ॥ | ಮಣ್ಣನ್ನು ಕೊಡಲು ಮೂರನೆಯ ಹಾಗೂ ಅಂತಿಮಮಂತ್ರ |
| ಮಖಸ್ಯ ಶಿರೋಽಸಿ ॥ | ಮಣ್ಣಿನ ಮುದ್ದೆಯನ್ನು ನಿರ್ಮಿಸಲು |
| ಯಜ್ಞಸ್ಯ...ಸ್ಥಃ ॥ | ಕೃಷ್ಣಾಜಿನವನ್ನೂ, ಪುಷ್ಕರಪರ್ಣವನ್ನೂ ಸ್ಪರ್ಶಿಸಲು |

---

✦**ಅದಿತಿಃ**=ಅದಿತಿದೇವಿಯು; **ಧಿಯಾ**=ಬುದ್ಧಿಕೌಶಲ್ಯದಿಂದಲೂ; **ಬಾಹುಭ್ಯಾಮ್**=ಹಸ್ತಸಾಮರ್ಥ್ಯದಿಂದಲೂ; **ಶಕ್ತ್ಯಾ**=ದೇಹಸಾಮರ್ಥ್ಯದಿಂದಲೂ; **ಉಖಾಮ್**=ಉಖೆಯನ್ನು; **ಕರೋತು**=ನಿರ್ಮಿಸಲಿ; **ಮಾತಾ**=ತಾಯಿಯು; **ಪುತ್ರಮ್**=ಮಗುವನ್ನು; **ಯಥಾ**=ಯಾವ ರೀತಿ; **ಉಪಸ್ಥೇ**=ತೊಡೆಯ ಮೇಲೆ [ಇಟ್ಟುಕೊಳ್ಳುವಳೋ ಹಾಗೆ;] **ಸಾ**=ಆ ಅದಿತಿಯು; **ಗರ್ಭೇ**=ತೊಡೆಯಲ್ಲಿ; **ಅಗ್ನಿಮ್**=ಅಗ್ನಿಯನ್ನು; **ಆ**=ಕರ್ಮಸಮಾಪ್ತಿಯಾಗುವವರೆಗೂ; **ಬಿಭರ್ತು**=ಧರಿಸಿರಲಿ; ✦ **ಮಖಸ್ಯ**=[ಎಲೈ! ಮೃತ್ಪಿಂಡವೇ! ನೀನು]; ಯಜ್ಞದ; **ಶಿರಃ ಅಸಿ**=ತಲೆಯಂತೆ ಇರುವೆ. [ನಿನ್ನನ್ನು ಮಾಡುವೆನು]✦ [ಎಲೈ! ಕೃಷ್ಣಾಜಿನ-ಪುಷ್ಕರಪರ್ಣಗಳೇ!] **ಯಜ್ಞಸ್ಯ**=[ನೀವಿಬ್ಬರು] ಯಜ್ಞದ; **ಪದೇ ಸ್ಥಃ**=ಪಾದರೂಪವಾಗಿರುತ್ತೀರಿ.

## ವಸವಸ್ತ್ವಾ ಕೃಣ್ವಂತು ಗಾಯತ್ರೇಣ ಛಂದಸಾಂಗಿರಸ್ವ ತ್ಪೃಥಿವ್ಯಸಿ

---

ವಸವಃ । ತ್ವಾ । ಕೃಣ್ವಂತು । ಗಾಯತ್ರೇಣ । ಛಂದಸಾ । ಅಂಗಿರಸ್ವತ್ । ಪೃಥಿವೀ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ವಸವಸ್ತ್ವಾ...ಪೃಥಿವ್ಯಸಿ... ಅಂತರಿಕ್ಷಮಸಿ...ದ್ಯೌರಸಿ... ದಿಶೋಽಸಿ ಧ್ರುವಾಸಿ... ಯಜಮಾನಾಯ ॥ | ಈ ನಾಲ್ಕು ಮಂತ್ರಗಳು ಉಖಾನುಮಂತ್ರಣವನ್ನು ಮಾಡಲು<br>ಧ್ರುವಾಸಿ...ಯಜಮಾನಾಯ ಎಂಬ ಅನುಷಂಗವು ನಾಲ್ಕು ಮಂತ್ರಗಳಲ್ಲಿಯೂ ಇದೆ. |

---

✦ವಸವಃ=ವಸುದೇವತೆಗಳು; ತ್ವಾ=ಉಖೆಯಾದ ನಿನ್ನನ್ನು; ಗಾಯತ್ರೇಣ ಛಂದಸಾ =ಗಾಯತ್ರೀಛಂದಸ್ಸಿನಿಂದ; ಅಂಗಿರಸ್ವತ್=ಅಂಗಿರಸಮುನಿಗಳಂತೆ; ಕೃಣ್ವಂತು= ನಿರ್ಮಿಸಲಿ; ಪೃಥಿವೀ ಅಸಿ=[ನೀನು] ಭೂಸ್ವರೂಪಳಾಗಿದ್ದೀಯೆ;

---

ಸರ್ವಹಿತರಾದ ದೇವತೆಗಳೆಲ್ಲರೂ ಅಂಗಿರೋಮುನಿಗಳಂತೆ ಅನುಷ್ಟುಪ್ಛಂದಸ್ಸಿನಿಂದ ಕೂಡಿ ನಿನ್ನನ್ನು ಸೇರಿಸಲಿ.

ಮಣ್ಣಿನಿಂದ ವಸ್ತುಗಳನ್ನು ಮಾಡುವಾಗ ಮಣ್ಣನ್ನು ಮೊದಲು ಕೈಗಳಿಂದ ತೀಡಬೇಕು.

ರುದ್ರದೇವತೆಗಳು ಮಣ್ಣನ್ನು ಮರ್ದಿಸಿ, ಪ್ರಕಾಶಮಾನವಾದ ಉಖಾರೂಪವಾದ ಅಗ್ನಿಯನ್ನು ಚೆನ್ನಾಗಿ ಜ್ವಲಿಸುವಂತೆ ಮಾಡಿದರು. ಆ ರುದ್ರರ ಪ್ರಕಾಶಮಾನವಾದ ನಿರಂತರವಾದ ದೀಪ್ತಿಯುಕ್ತವಾದ ಅಗ್ನಿಯು ದೇವತೆಗಳಲ್ಲಿಯೂ ಬೆಳಗುತ್ತಿರುತ್ತದೆ.

ಇಲ್ಲಿಯೂ ಅಗ್ನಿ-ಉಖೆಗಳಿಗೆ ಅಭೇದವನ್ನು ಕಲ್ಪಿಸಲಾಗಿದೆ.

ಈ ಮಂತ್ರದಲ್ಲಿ 'ರುದ್ರೈಃ' ಎಂಬುದು ವಸುಗಳಿಗೂ ಉಪಲಕ್ಷಣವಾಗಿದೆ. ಬುದ್ಧಿವಂತರಾದ ವಸುಗಳೂ ಮತ್ತು ರುದ್ರರೂ ಉಖಾನಿರ್ಮಾಣಕ್ಕೆ ಯೋಗ್ಯವಾದ ಮಣ್ಣನ್ನು

ರುದ್ರಾಸ್ತ್ವಾ ಕೃಣ್ವಂತು ತ್ರೈಷ್ಟುಭೇನ ಛಂದಸಾಂಗಿರಸ್ವ

ದಂತರಿಕ್ಷಮಸ್ಯಾ[..ಅಸಿ(೨೦)ಆದಿತ್ಯಾ..]ದಿತ್ಯಾಸ್ತ್ವಾ

ಕೃಣ್ವಂತು ಜಾಗತೇನ ಛಂದಸಾಂಗಿರಸ್ವದ್ದ್ಯೌರಸಿ

---

ರುದ್ರಾಃ । ತ್ವಾ । ಕೃಣ್ವಂತು । ತ್ರೈಷ್ಟುಭೇನ । ಛಂದಸಾ । ಅಂಗಿರಸ್ವತ್ ।

ಅಂತರಿಕ್ಷಮ್ । ಅಸಿ ।(೨೦)। ಆದಿತ್ಯಾಃ । ತ್ವಾ । ಕೃಣ್ವಂತು । ಜಾಗತೇನ । ಛಂದಸಾ ।

ಅಂಗಿರಸ್ವತ್ । ದ್ಯೌಃ । ಅಸಿ ।

---

+ರುದ್ರಾಃ=ರುದ್ರದೇವತೆಗಳು; ತ್ವಾ=ನಿನ್ನನ್ನು; ತ್ರೈಷ್ಟುಭೇನ ಛಂದಸಾ=ತ್ರಿಷ್ಟುಪ್ ಛಂದಸ್ಸಿನಿಂದ; ಅಂಗಿರಸ್ವತ್=ಅಂಗಿರಸರಂತೆ; ಕೃಣ್ವಂತು=ಮಾಡಲಿ; ಅಂತರಿಕ್ಷಮ್ ಅಸಿ=ನೀನು ಅಂತರಿಕ್ಷಸ್ವರೂಪಳಾಗಿದ್ದೀಯೆ;+ಆದಿತ್ಯಾಃ=ಆದಿತ್ಯದೇವತೆಗಳು; ತ್ವಾ= ನಿನ್ನನ್ನು; ಜಾಗತೇನ ಛಂದಸಾ=ಜಗತೀಛಂದಸ್ಸಿನಿಂದ; ಅಂಗಿರಸ್ವತ್= ಅಂಗಿರೋ ಮುನಿಗಳಂತೆ; ಕೃಣ್ವಂತು=ನಿರ್ಮಿಸಲಿ. ದ್ಯೌಃ ಅಸಿ=ನೀನು ದ್ಯುಲೋಕ ಸ್ವರೂಪಳಾಗಿರುವೆ.

---

ಚೆನ್ನಾಗಿ ಕೂಡಿಸಿರುತ್ತಾರೆ. ಅಂತಹ ಮಣ್ಣನ್ನು ಸಿನೀವಾಲಿದೇವತೆಯು ತನ್ನ ಕೈಗಳಿಂದ ಮತ್ತಷ್ಟು ಮೃದುವನ್ನಾಗಿ ಮಾಡಿ ಆ ಉಖೆಯನ್ನು ನಿರ್ಮಿಸಲಿ.

ಹೇ! ಪೃಥಿವೀದೇವಿಯೇ! ನೀನು ಪ್ರೌಢಳು. ನಿನ್ನ ಕೈಯಲ್ಲಿ ಸಿನೀವಾಲಿಯು ಉಖೆಯನ್ನು ಇಡಲಿ. ಆ ಸಿನೀವಾಲಿಯು ಉತ್ತಮವಾದ ಕೇಶಬಂಧವುಳ್ಳವಳು. ತಲೆಯಲ್ಲಿ ಜಾಲಕವನ್ನು ಧರಿಸಿದವಳು. ಪ್ರಶಸ್ತ ಅವಯವವುಳ್ಳವಳು. ಅವಳು ಉಖೆಯನ್ನು ನಿನಗೆ ನೀಡಲಿ.

ಅದಿತಿದೇವಿಯು ಬುದ್ಧಿಕೌಶಲ್ಯದಿಂದಲೂ ಸಾಮರ್ಥ್ಯದಿಂದಲೂ ಉಖೆಯನ್ನು ನಿರ್ಮಿಸಲಿ. ತಾಯಿಯು ಮಗುವನ್ನು ತೊಡೆಯಲ್ಲಿ ಧರಿಸುವಂತೆ ಅದನ್ನು ಕರ್ಮವು ಮುಗಿಯುವವರೆಗೂ ಧರಿಸಿರಲಿ. ಇಲ್ಲಿ ಅಗ್ನಿಯನ್ನು ಧರಿಸಲಿ ಎಂಬುದಾಗಿ ಅಗ್ನಿ-ಉಖೆಗಳ ಅಭೇದೋಪಚಾರವು ಮುಂದುವರೆದಿದೆ.

ವಿಶ್ವೇ ತ್ವಾ ದೇವಾ ವೈಶ್ವಾನರಾಃ ಕೃಣ್ವಂತ್ವಾ ನುಷ್ಟುಭೇನ ಛಂದಸಾಽಂಗಿರಸ್ವದ್ದಿಶೋಽಸಿ ಧ್ರುವಾಽಸಿ ಧಾರಯಾ ಮಯಿ ಪ್ರಜಾಗ್ಂ ರಾಯಸ್ಪೋಷಂ ಗೌಪತ್ಯಗ್ಂ ಸುವೀರ್ಯಗ್ಂ ಸಜಾತಾನ್, ಯಜಮಾನಾಯಾ-

---

ವಿಶ್ವೇ । ತ್ವಾ । ದೇವಾಃ । ವೈಶ್ವಾನರಾಃ । ಕೃಣ್ವಂತು । ಆನುಷ್ಟುಭೇನೇತ್ಯಾನು-ಸ್ತುಭೇನ । ಛಂದಸಾ । ಅಂಗಿರಸ್ವತ್ । ದಿಶಃ । ಅಸಿ । ಧ್ರುವಾ । ಅಸಿ । ಧಾರಯ । ಮಯಿ । ಪ್ರಜಾಮಿತಿ ಪ್ರ-ಜಾಮ್ । ರಾಯಃ । ಪೋಷಮ್ । ಗೌಪತ್ಯಮ್ । ಸುವೀರ್ಯಮಿತಿ ಸು-ವೀರ್ಯಮ್ । ಸಜಾತಾನಿತಿ ಸ-ಜಾತಾನ್ । ಯಜಮಾನಾಯ ।

---

✦ವೈಶ್ವಾನರಾಃ=ವಿಶ್ವಕ್ಕೇ ಹಿತಕಾರಿಗಳಾದ; ವಿಶ್ವೇ ದೇವಾಃ=ಸರ್ವದೇವತೆಗಳೂ; ತ್ವಾ=ನಿನ್ನನ್ನು; ಆನುಷ್ಟುಭೇನ ಛಂದಸಾ=ಅನುಷ್ಟುಪ್ಛಂದಸ್ಸಿನಿಂದ; ಅಂಗಿರಸ್ವತ್= ಅಂಗಿರಸಮುನಿಗಳಂತೆ; ಕೃಣ್ವಂತು=ನಿರ್ಮಿಸಲಿ; ದಿಶಃ ಅಸಿ=ನೀನು ದಿಕ್ಸ್ವರೂಪಳಾ ಗಿದ್ದೀಯೆ; ಧ್ರುವಾ ಅಸಿ=ದೃಢಳಾಗಿದ್ದೀಯೆ; ಮಯಿ=ಉಖಾಕರ್ತೃವಾದ ನನ್ನಲ್ಲಿ; ಪ್ರಜಾಮ್=ಪ್ರಜೆಯನ್ನು; ಧಾರಯ=ನೆಲೆಗೊಳಿಸು; ರಾಯಃ ಪೋಷಮ್=ಧನ ಸಮೃದ್ಧಿಯನ್ನೂ; ಗೌಪತ್ಯಮ್=ಪಶುಗಳ ಒಡೆತನವನ್ನೂ; ಸುವೀರ್ಯಮ್= ಒಳ್ಳೆಯ ಸಾಮರ್ಥ್ಯವನ್ನೂ; ಸಜಾತಾನ್=ಅನುಕೂಲರಾದ ಜ್ಞಾತಿಗಳನ್ನೂ; ಯಜಮಾನಾಯ=ಯಜಮಾನನಿಗೂ [ನನಗೂ] ಧಾರಯ=ಸ್ಥಿರಗೊಳಿಸು.

---

ಹೇ! ಮೃತ್ಪಿಂಡವೇ! ಯಜ್ಞದ ತಲೆಯಂತಿರುವ ನಿನ್ನನ್ನು ನಿರ್ಮಿಸುತ್ತೇನೆ.
ಎಲೈ! ಕೃಷ್ಣಾಜಿನ-ಪುಷ್ಕರಪರ್ಣಗಳೇ! ನೀವುಗಳು ಯಜ್ಞದ ಪಾದರೂಪರಾಗಿದ್ದೀರಿ.

## -ದಿತ್ಯೈ ರಾಸ್ನಾಽಸ್ಯದಿತಿಸ್ತೇ ಬಿಲಂ ಗೃಹ್ಣಾತು ಪಾಙ್ಕ್ತೇನ ಛಂದಸಾಽಂಗಿರಸ್ವತ್ ॥

---

ಅದಿತ್ಯೈ । ರಾಸ್ನಾ । ಅಸಿ । ಅದಿತಿಃ । ತೇ । ಬಿಲಮ್ । ಗೃಹ್ಣಾತು । ಪಾಙ್ಕ್ತೇನ । ಛಂದಸಾ । ಅಂಗಿರಸ್ವತ್ ॥

---

| ಮಂತ್ರ | ವಿನಿಯೋಗ |
|---|---|
| ಅದಿತ್ಯೈ ರಾಸ್ನಾಸಿ ॥ | ಹಗ್ಗದಂತೆ ರೇಖೆಯನ್ನು ಮಾಡಲು |
| ಅದಿತಿಸ್ತೇ...ಅಂಗಿರಸ್ವತ್ ॥ | ಉಖೆಯ ಒಳಭಾಗದಲ್ಲಿ ರಂಧ್ರವನ್ನು ಮಾಡಲು |

---

✦ [ಎಲೈ! ರೇಖೆಯೇ!] **ಅದಿತ್ಯೈ**=ಭೂರೂಪವಾದ ಉಖೆಯ; **ರಾಸ್ನಾ ಅಸಿ**= ಸೊಂಟದ ಪಟ್ಟಿ [ಡಾಬು] ಆಗಿರುವೆ. ✦ [ಎಲೈ! ಉಖೆಯೇ!]**ಅದಿತಿಃ**=ಪೃಥಿವೀ ದೇವಿಯು; **ತೇ**=ನಿನ್ನ; **ಬಿಲಮ್**=ರಂಧ್ರವನ್ನು; **ಅಂಗಿರಸ್ವತ್**=ಅಂಗಿರಸಮುನಿಗಳಂತೆ; **ಪಾಙ್ಕ್ತೇನ ಛಂದಸಾ**=ಪಂಕ್ತಿಛಂದಸ್ಸಿನಿಂದ; **ಗೃಹ್ಣಾತು**= ಮಾಡಲಿ.

---

ನಿಮ್ಮಿಂದ ಯಜ್ಞವು ಸ್ಥಿರವಾಗಿ ನಿಲ್ಲುತ್ತದೆ.

ಈ ಮಂತ್ರವು ಉಖೆಯ ಅನುಮಂತ್ರಣಕ್ಕಾಗಿ ಇದೆ. ಯಜಮಾನನ ಪತ್ನೀ, ಅಧ್ವರ್ಯು ಮುಂತಾದವರು ಉಖಾನಿರ್ಮಾತೃಗಳು.

ವಸುದೇವತೆಗಳು ಗಾಯತ್ರೀಛಂದಸ್ಸಿನ ನೆರವಿನಿಂದ ಪೃಥಿವೀರೂಪವಾದ ಉಖೆಯನ್ನು ನಿರ್ಮಿಸಲಿ. ರುದ್ರದೇವತೆಗಳು ತ್ರಿಷ್ಟುಪ್ ಛಂದಸ್ಸಿನ ನೆರವಿನಿಂದಲೂ ಆದಿತ್ಯದೇವತೆಗಳು ಜಗತೀ ಛಂದಸ್ಸಿನ ಸಹಾಯದಿಂದಲೂ ವಿಶ್ವಹಿತಕಾರಿಗಳಾದ ಸರ್ವದೇವತೆಗಳೂ ಅನುಷ್ಟುಪ್ಛಂದಸ್ಸಿನ ನೆರವಿನಿಂದ ಅಂಗಿರೋಮುನಿಗಳು ನಿರ್ಮಿಸಿ ದಂತೆ ನಿರ್ಮಿಸಲಿ.

ನೀನು ಅಂತರಿಕ್ಷ-ದ್ಯುಲೋಕ-ದಿಕ್ಕುಗಳ ಸ್ವರೂಪಳಾಗಿರುವೆ. ನೀನು ದೃಢಳಾಗಿರುವೆ. ನೀನು ಉಖಾಕರ್ತೃವಿಗೂ, ಯಜಮಾನನಿಗೂ, ಪ್ರಜೆ, ಧನ, ಪಶು, ಸಾಮರ್ಥ್ಯ, ಒಳ್ಳೆಯ ಅನುಯಾಯಿಗಳು-ಇವೆಲ್ಲವೂ ನೆಲೆಸಿರುವಂತೆ ಮಾಡು.

ಕೃತ್ವಾಯ ಸಾ ಮಹೀಮುಖಾಂ ಮೃನ್ಮಯೀಂ ಯೋನಿಮಗ್ನಯೇ । ತಾಂ ಪುತ್ರೇಭ್ಯಸ್ಸಂ ಪ್ರಾಯಚ್ಛದದಿತಿ ಶ್ರಪಯಾನಿತಿ ॥ ೨೧-5 ॥

[ಮಿತ್ರಃ ಕರೋತ್ತ್ವಂತರಿಕ್ಷಮಸಿ ಪ್ರ ಚತ್ವಾರಿ ಚ ॥]

---

ಕೃತ್ವಾಯ । ಸಾ । ಮಹೀಮ್ । ಉಖಾಮ್ । ಮೃನ್ಮಯೀಮಿತಿ ಮೃತ್-ಮಯೀಮ್ । ಯೋನಿಮ್ । ಅಗ್ನಯೇ ॥ ತಾಮ್ । ಪುತ್ರೇಭ್ಯಃ । ಸಮ್ । ಪ್ರೇತಿ । ಅಯಚ್ಛತ್ । ಅದಿತಿಃ । ಶ್ರಪಯಾನ್ । ಇತಿ ॥ ೨೧ ॥

---

| ಮಂತ್ರ | ವಿನಿಯೋಗ |
|---|---|
| ಕೃತ್ವಾಯ...ಶ್ರಪಯಾನಿತಿ ॥ | ಮಡಕೆಯಂತೆ ಉಖೆಯನ್ನು ಬೇಯಿಸುವುದಕ್ಕಾಗಿ ಆ ಕಾರ್ಯವನ್ನು ಮಾಡುವವರಿಗೆ ಕೊಡಲು |

---

+ಸಾ ಅದಿತಿಃ=ಆ ಅದಿತಿಯು; ಮೃನ್ಮಯೀಮ್=ಮೃತ್ಕಾರ್ಯವಾದ; ಅಗ್ನಯೇ ಯೋನಿಮ್=ಅಗ್ನಿಗೆ ಕಾರಣವಾದ; ಮಹೀಮ್ ಉಖಾಮ್=ದೊಡ್ಡದಾದ ಉಖೆಯನ್ನು; ಕೃತ್ವಾಯ=ಮಾಡಿ; ತಾಮ್=ಆ ಉಖೆಯನ್ನು; ಪುತ್ರೇಭ್ಯಃ=ಮಕ್ಕಳಂತೆ ಇರುವ; [ಉಖೆಯನ್ನು ಬೇಯಿಸುವವರಿಗೆ]; ಶ್ರಪಯಾನ್ ಇತಿ=ಇದನ್ನು ಬೇಯಿಸಿರಿ [ಎಂದು ಹೇಳಿ]; ಸಂ ಪ್ರ ಅಯಚ್ಛತ್=ಕೊಟ್ಟಳು.

---

ಎಲೈ! ರೇಖೆಯೇ! ನೀನು ಭೂಮಿರೂಪವಾದ ಉಖೆಯ ಡಾಬಿನಂತೆ ಇರುವೆ.

ಎಲೈ! ಉಖೆಯೇ! ಪೃಥಿವೀದೇವಿಯು ನಿನ್ನ ರಂಧ್ರವನ್ನು ಅಂಗಿರೋಮುನಿಗಳಂತೆ ಪಂಕ್ತಿಛಂದಸ್ಸಿನಿಂದ ಮಾಡಲಿ.

ಅದಿತಿದೇವಿಯು ಅಗ್ನಿಗೆ ಕಾರಣವಾದ ದೊಡ್ಡ ಉಖೆಯನ್ನು ಮಾಡಿ ಅದನ್ನು ಪುತ್ರರಂತೆ

ಇರುವ ಉಖೆಯನ್ನು ಬೇಯಿಸುವವರಿಗೆ ಬೇಯಿಸಿರಿ ಎಂದು ಹೇಳಿ ನೀಡಿದಳು.

ಬೇಯಿಸದಿದ್ದರೆ ಉಖೆಯು ಗಟ್ಟಿಯಾಗಿ ಇರುವುದಿಲ್ಲ. ಆದಕ್ಕಾಗಿ ಈ ಮಂತ್ರದಿಂದ ಬೇಯಿಸುವವರಿಗೆ ಕೊಡಬೇಕು. ಅದನ್ನು ಮರಳಿನಲ್ಲಿ ಇಡಬೇಕು.

---

## ವಿನಿಯೋಗಸಂಗ್ರಹ

1 ವಿಪಾ ವಿಸ್ರಂಸಯೇದಾಪ 2-4ಸ್ತ್ರಿಭಿರ್ಮೃದಿ ಜಲಂ ಕ್ಷಿಪೇತ್ ।
5-6 ಮಿತ್ರೋ ದ್ವಾಭ್ಯಾಂ ಶರ್ಕರಾದಿಯೋಗೋ 7ರುದ್ರೇತಿ ಸಂಕ್ಷಿಪೇತ್ ॥
8-10ಸಂಸ್ಯ ತ್ರಿಭಿರ್ಮೃತ್ತಿಕಾಂ ತಾಮುಖಾಕರ್ತ್ರೇ ಪ್ರಯಚ್ಛತಿ ।
11 ಮಖ ಪಿಂಡಕೃತಿರ್ಯಜ್ಞ 12 ಚರ್ಮಪರ್ಣಾಭಿಮರ್ಶನಮ್ ॥
ಕುರ್ಯಾದ್ವಸ 13-16 ಚತುರ್ಭಿಸ್ತಾಂ ಧ್ರುವಾಸೀತ್ಯನುಷಜ್ಯತೇ ।
17 ಅದಿ ರಾಸ್ನಾಮದಿ18 ಬಿಲಂ ಕುರ್ಯಾತ್ಕೃತ್ವಾಯ 19ತಾಮುಖಾಮ್ ॥
ಸಿಕತಾಸು ಸ್ಥಾಪಯೀತ ಮಂತ್ರಾ ಏಕೋನವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–19

ಖ❁ಞಖ❁ಞ

## ॥ ಷಷ್ಠೋऽನುವಾಕಃ ॥

ವಸವಸ್ತ್ವಾ ಧೂಪಯಂತು ಗಾಯತ್ರೇಣ ಛಂದಸಾऽಂಗಿರಸ್ವ-

---

ವಸವಃ । ತ್ವಾ । ಧೂಪಯಂತು । ಗಾಯತ್ರೇಣ । ಛಂದಸಾ । ಅಂಗಿರಸ್ವತ್ ।

---

ಐದನೆಯ ಅನುವಾಕದಲ್ಲಿ ಉಖೆಯ ನಿರ್ಮಾಣವು ಹೇಳಲ್ಪಟ್ಟಿತು. ಈ ಆರನೆಯ ಅನುವಾಕದಲ್ಲಿ ಉಖಾಸಂಸ್ಕಾರವು ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
| --- | --- |
| ೧)ವಸವಸ್ತ್ವಾ...ಅಂಗಿರಸ್ವತ್ ॥ | |
| ೨)ರುದ್ರಾಸ್ತ್ವಾ...ಅಂಗಿರಸ್ವತ್ ॥ | |
| ೩)ಆದಿತ್ಯಾಸ್ತ್ವಾ...ಅಂಗಿರಸ್ವತ್ ॥ | ಈ ಏಳು ಮಂತ್ರಗಳಿಂದ ಉಖೆಗೆ ಕುದುರೆಯ ಲದ್ದಿಯ ಹೊಗೆಯನ್ನು ಹಾಯಿಸುವುದಕ್ಕಾಗಿ |
| ೪)ವಿಶ್ವೇ ತ್ವಾ...ಅಂಗಿರಸ್ವತ್ ॥ | |
| ೫)ಇಂದ್ರಸ್ತ್ವಾ...ಅಂಗಿರಸ್ವತ್ ॥ | |
| ೬)ವಿಷ್ಣುಸ್ತ್ವಾ...ಅಂಗಿರಸ್ವತ್ ॥ | |
| ೭)ವರುಣಸ್ತ್ವಾ...ಅಂಗಿರಸ್ವತ್ ॥ | |

---

✦ [ಉಖೆಯೇ!]ವಸವಃ=ವಸುದೇವತೆಗಳು; ತ್ವಾ=ಉಖೆಯಾದ ನಿನ್ನನ್ನು; ಗಾಯತ್ರೇಣ ಛಂದಸಾ=ಗಾಯತ್ರೀಛಂದಸ್ಸಿನಿಂದ; ಅಂಗಿರಸ್ವತ್=ಅಂಗಿರಸರಂತೆ; ಧೂಪಯಂತು=ಹೊಗೆಯಿಂದ ಸಂಸ್ಕರಿಸಲಿ;

ದ್ರುದ್ರಾಸ್ತ್ವಾ ಧೂಪಯಂತು ತ್ರೈಷ್ಟುಭೇನ ಛಂದಸಾಽಂಗಿರ
ಸ್ವದಾದಿತ್ಯಾಸ್ತ್ವಾ ಧೂಪಯಂತು ಜಾಗತೇನ ಛಂದಸಾಽಂಗಿ
ರಸ್ವದ್ವಿಶ್ವೇ ತ್ವಾ ದೇವಾ ವೈಶ್ವಾನರಾ ಧೂಪಯಂತ್ವಾನುಷ್ಟು
ಭೇನ ಛಂದಸಾಽಂಗಿರಸ್ವದಿಂದ್ರಸ್ತ್ವಾ ಧೂಪಯತ್ವಂಗಿರಸ್ವ-

---

ರುದ್ರಾಃ । ತ್ವಾ । ಧೂಪಯಂತು । ತ್ರೈಷ್ಟುಭೇನ । ಛಂದಸಾ । ಅಂಗಿರಸ್ವತ್ । ಆದಿತ್ಯಾಃ । ತ್ವಾ । ಧೂಪಯಂತು । ಜಾಗತೇನ । ಛಂದಸಾ । ಅಂಗಿರಸ್ವತ್ । ವಿಶ್ವೇ । ತ್ವಾ । ದೇವಾಃ । ವೈಶ್ವಾನರಾಃ । ಧೂಪಯಂತು । ಆನುಷ್ಟುಭೇನೇತ್ಯಾನು-ಸ್ತುಭೇನ । ಛಂದಸಾ । ಅಂಗಿರಸ್ವತ್ । ಇಂದ್ರಃ । ತ್ವಾ । ಧೂಪಯತು । ಅಂಗಿರಸ್ವತ್ ।

---

✦[ಉಖೆಯೇ!] **ರುದ್ರಾಃ**=ರುದ್ರದೇವತೆಗಳು; **ತ್ವಾ**=ನಿನ್ನನ್ನು; **ತ್ರೈಷ್ಟುಭೇನ ಛಂದಸಾ**=ತ್ರಿಷ್ಟುಪ್ ಛಂದಸ್ಸಿನಿಂದ; **ಅಂಗಿರಸ್ವತ್**=ಅಂಗಿರಸಮುನಿಗಳಂತೆ; **ಧೂಪಯಂತು**=ಧೂಮದಿಂದ ಸಂಸ್ಕರಿಸಲಿ. ✦[ಉಖೆಯೇ!] **ಆದಿತ್ಯಾಃ**=ಆದಿತ್ಯದೇವತೆಗಳು; **ಜಾಗತೇನ ಛಂದಸಾ**=ಜಗತೀಛಂದಸ್ಸಿನಿಂದ; **ತ್ವಾ**=ನಿನ್ನನ್ನು; **ಅಂಗಿರಸ್ವತ್**=ಅಂಗಿರಸ ಮುನಿಗಳಂತೆ; **ಧೂಪಯಂತು**=ಹೊಗೆಯನ್ನು ಹಾಕಿ ಸಂಸ್ಕರಿಸಲಿ; ✦[ಉಖೆಯೇ!] **ವೈಶ್ವಾನರಾಃ**=ವಿಶ್ವಕ್ಕೇ ಹಿತರಾಗಿರುವ; **ವಿಶ್ವೇ ದೇವಾಃ**=ಸಮಸ್ತ ದೇವತೆಗಳೂ; **ತ್ವಾ**=ನಿನ್ನನ್ನು; **ಆನುಷ್ಟುಭೇನ ಛಂದಸಾ**=ಅನುಷ್ಟುಪ್ಛಂದಸ್ಸಿನ ಸಹಕಾರದಿಂದ; **ಅಂಗಿರಸ್ವತ್**=ಅಂಗಿರಸರಂತೆ; **ಧೂಪಯಂತು**=ಹೊಗೆಯಿಂದ ಸಂಸ್ಕರಿಸಲಿ; ✦[ಉಖೆಯೇ!] **ಇಂದ್ರಃ ಅಂಗಿರಸ್ವತ್ ತ್ವಾ ಧೂಪಯತು**=ಇಂದ್ರ ದೇವನು ಅಂಗಿರಸರಂತೆ ನಿನ್ನನ್ನು ಹೊಗೆ ಹಾಕಿ ಸಂಸ್ಕರಿಸಲಿ;

ದ್ವಿಷ್ಣುಸ್ತ್ವಾ ಧೂಪಯತ್ವಂಗಿರಸ್ವದ್ವರುಣಸ್ತ್ವಾ

ಧೂಪಯತ್ವಂಗಿರಸ್ವದದಿತಿಸ್ತ್ವಾ ದೇವೀ ವಿಶ್ವದೇವ್ಯಾವತೀ

ಪೃಥಿವ್ಯಾಸ್ಸಧಸ್ಥೇಽಂಗಿರಸ್ವತ್ಖನತ್ವವಟ

---

ವಿಷ್ಣುಃ । ತ್ವಾ । ಧೂಪಯತು । ಅಂಗಿರಸ್ವತ್ । ವರುಣಃ । ತ್ವಾ । ಧೂಪಯತು ।

ಅಂಗಿರಸ್ವತ್ । ಅದಿತಿಃ । ತ್ವಾ । ದೇವೀ । ವಿಶ್ವದೇವ್ಯಾವತೀತಿ ವಿಶ್ವದೇವ್ಯ-ವತೀ ।

ಪೃಥಿವ್ಯಾಃ । ಸಧಸ್ಥ ಇತಿ ಸಧ-ಸ್ಥೇ । ಅಂಗಿರಸ್ವತ್ । ಖನತು । ಅವಟ ।

---

| ಮಂತ್ರ | ವಿನಿಯೋಗ |
|---|---|
| **ಅದಿತಿಸ್ತ್ವಾ...ಅವಟ ॥** | ಗಾರ್ಹಪತ್ಯದ ಮುಂಭಾಗದಲ್ಲಿ ಹಳ್ಳವನ್ನು ತೋಡುವುದಕ್ಕಾಗಿ |

---

✦[ಉಖೆಯೇ!]**ವಿಷ್ಣುಃ ಅಂಗಿರಸ್ವತ್ ತ್ವಾ ಧೂಪಯತು**=ವ್ಯಾಪಕನಾದ ವಿಷ್ಣುದೇವನು ನಿನ್ನನ್ನು ಅಂಗಿರಸರಂತೆ ಧೂಮದಿಂದ ಸಂಸ್ಕರಿಸಲಿ; ✦[ಉಖೆಯೇ!] **ವರುಣಃ ಅಂಗಿರಸ್ವತ್ ತ್ವಾ ಧೂಪಯತು**=ವರುಣದೇವನು ಅಂಗಿರಸರಂತೆ ನಿನ್ನನ್ನು ಹೊಗೆಯಿಂದ ಸಂಸ್ಕರಿಸಲಿ. ✦**ಅವಟ**=ಎಲೈ! ಹಳ್ಳವೇ! **ವಿಶ್ವದೇವ್ಯಾವತೀ**=ಎಲ್ಲ ದೇವತೆಗಳ ಉಪಚಾರವನ್ನೂ ಹೊಂದುವ; **ಅದಿತಿಃ ದೇವೀ**=ಅದಿತಿದೇವಿಯು; **ಪೃಥಿವ್ಯಾಃ ಸಧಸ್ಥೇ**=ಭೂಮಿಯ ಮೇಲ್ಭಾಗದಲ್ಲಿ; **ಅಂಗಿರಸ್ವತ್**=ಅಂಗಿರಸರಂತೆ; **ತ್ವಾ**=ನಿನ್ನನ್ನು; **ಖನತು**=ತೋಡಲಿ.

---

ಈ ಅನುವಾಕದಲ್ಲಿ ಉಖಾಸಂಸ್ಕಾರಕ್ಕಾಗಿ ಕುದುರೆಲದ್ದಿಯ [ಅಶ್ವಶಕ] ಹೊಗೆಯಿಂದ ಉಖೆಯನ್ನು ಸಂಸ್ಕರಿಸುವುದು ಹೇಳಲ್ಪಡುತ್ತದೆ.

ವಸು-ರುದ್ರ-ಆದಿತ್ಯ-ವಿಶ್ವೇದೇವರೂ-ಇಂದ್ರ-ವಿಷ್ಣು-ವರುಣರೂ ಅಶ್ವಶಕೃತ್ತಿನ ಹೊಗೆಯಿಂದ ಉಖೆಯನ್ನು ಸಂಸ್ಕರಿಸಲಿ.

## ದೇವಾನಾಂ ತ್ವಾ ಪತ್ನೀ[ಪತ್ನೀಃ(೨೨)ದೇವೀರ್ವಿ] ರ್ದೇವೀರ್ವಿಶ್ವದೇವ್ಯಾವತೀಃ ಪೃಥಿವ್ಯಾಸ್ಸಧಸ್ಥೇಽಂಗಿರಸ್ವ ದ್ದಧತೂಖೇ

---

ದೇವಾನಾಮ್ । ತ್ವಾ । ಪತ್ನೀಃ ।(೨೨)। ದೇವೀಃ । ವಿಶ್ವದೇವ್ಯಾವತೀರಿತಿ ವಿಶ್ವದೇವ್ಯ-ವತೀಃ । ಪೃಥಿವ್ಯಾಃ । ಸಧಸ್ಥ ಇತಿ ಸಧ-ಸ್ಥೇ । ಅಂಗಿರಸ್ವತ್ । ದಧತು । ಉಖೇ ।

---

| ಮಂತ್ರ | ವಿನಿಯೋಗ |
|---|---|
| ದೇವಾನಾಂ ತ್ವಾ...ದಧತೂಖೇ ॥ | ಉಖೆಯನ್ನು ಕೆಂಪಾಗಿ ಕಾಯಿಸಲು ಬೇಕಾದ ಉಪಕರಣಗಳನ್ನು ಹಳ್ಳದಲ್ಲಿ ಹಾಕಿ, ಅಲ್ಲಿ ಉಖೆಯನ್ನು ಇಡಲು. |

---

+ಉಖೇ=ಉಖೆಯೇ! ವಿಶ್ವದೇವ್ಯಾವತೀಃ=ಎಲ್ಲ ದೇವತೆಗಳ ಉಪಚಾರಕ್ಕೆ ತಕ್ಕವರಾದ; ದೇವಾನಾಮ್ ಪತ್ನೀಃ=ದೇವಪತ್ನಿಯರಾದ; ದೇವೀಃ=ದೇವಿಯರು; ಅಂಗಿರಸ್ವತ್=ಅಂಗಿರಸರಂತೆ; ಪೃಥಿವ್ಯಾಃ ಸಧಸ್ಥೇ=ಭೂಮಿಯ ಮೇಲೆ; ತ್ವಾ=ನಿನ್ನನ್ನು; ದಧತು=ಇಡಲಿ.

---

ಅದಿತಿಯು [ಭೂಮಿಯು] ಎಲ್ಲ ದೇವತೆಗಳ ಉಪಚಾರವನ್ನೂ ಪಡೆಯತಕ್ಕವಳು. ಆ ದೇವಿಯು ಗಾರ್ಹಪತ್ಯದ ಮುಂಭಾಗದಲ್ಲಿ ಹಳ್ಳವನ್ನು ತೋಡಲಿ. ಈ ಮಂತ್ರದಿಂದ ಅದಿತಿಯೇ ಅದಿತಿಯಲ್ಲಿ ಹಳ್ಳವನ್ನು ತೋಡಿದಂತಾಯಿತು. ಅದರಿಂದ ನಾವು ಭೂಮಿಯ ವಿಷಯದಲ್ಲಿ ಕ್ರೂರವಾಗಿ ನಡೆದುಕೊಂಡಂತೆ ಆಗಲಿಲ್ಲ.

ದೇವಪತ್ನಿಯರು ಪುರಾತನರಾದ ಉಖಾಕರ್ತೃಗಳು. ಅವರೇ ಈಗ ಉಖೆಯನ್ನು ಭೂಮಿಯ ಮೇಲೆ ಇಡಲಿ.

**ಧಿಷಣಾಸ್ತ್ವಾ ದೇವೀರ್ವಿಶ್ವದೇವ್ಯಾವತೀಃ ಪೃಥಿವ್ಯಾಸ್ಸಧಸ್ಥೇಽಂಗಿರಸ್ವದಭೀಂಧತಾಮುಖೇ ಗ್ನಾಸ್ತ್ವಾ ದೇವೀರ್ವಿಶ್ವದೇವ್ಯಾವತೀಃ ಪೃಥಿವ್ಯಾಸ್ಸಧಸ್ಥೇಽಂಗಿರಸ್ವಚ್ಛ್ರಪಯಂತೂಖೇ**

---

ಧಿಷಣಾಃ । ತ್ವಾ । ದೇವೀಃ । ವಿಶ್ವದೇವ್ಯಾವತೀರಿತಿ ವಿಶ್ವದೇವ್ಯ-ವತೀಃ । ಪೃಥಿವ್ಯಾಃ । ಸಧಸ್ಥ ಇತಿ ಸಧ-ಸ್ಥೇ । ಅಂಗಿರಸ್ವತ್ । ಅಭೀತಿ । ಇಂಧತಾಮ್ । ಉಖೇ । ಗ್ನಾಃ । ತ್ವಾ । ದೇವೀಃ । ವಿಶ್ವದೇವ್ಯಾವತೀರಿತಿ ವಿಶ್ವದೇವ್ಯ-ವತೀಃ । ಪೃಥಿವ್ಯಾಃ । ಸಧಸ್ಥ ಇತಿ ಸಧ-ಸ್ಥೇ । ಅಂಗಿರಸ್ವತ್ । ಶ್ರಪಯಂತು । ಉಖೇ ।

---

| ಮಂತ್ರ | ವಿನಿಯೋಗ |
|---|---|
| ಧಿಷಣಾಸ್ತ್ವಾ...ಅಭೀಂಧತಾಮುಖೇ ॥<br>ಗ್ನಾಸ್ತ್ವಾ...ಶ್ರಪಂತೂಖೇ ॥ | ಕೆಂಪಾಗಿ ಕಾಯಿಸಲು ಬೇಕಾದ ಉಪಕರಣಗಳಿಂದ ಉಖೆಯನ್ನು ಮುಚ್ಚಿ ಕಾಯಿಸಲು, ಮೊದಲ ಎರಡು ಮಂತ್ರಗಳು. |

---

+ಉಖೇ=ಉಖೆಯೇ! ವಿಶ್ವದೇವ್ಯಾವತೀಃ=ಎಲ್ಲ ದೇವತೆಗಳ ಉಪಚಾರಕ್ಕೆ ಯೋಗ್ಯರಾದ; *ಧಿಷಣಾಃ ದೇವೀಃ=ವಿದ್ಯಾಭಿಮಾನಿದೇವತೆಯರು; ಪೃಥಿವ್ಯಾಃ ಸಧಸ್ಥೇ=ಭೂಮಿಯ ಮೇಲ್ಭಾಗದಲ್ಲಿ; ಅಂಗಿರಸ್ವತ್=ಅಂಗಿರಸರಂತೆ; ತ್ವಾ=ನಿನ್ನನ್ನು; ಅಭಿ ಇಂಧತಾಮ್=ಸುತ್ತಲೂ ಕಾಯಿಸಲಿ; +ಉಖೇ=ಉಖೆಯೇ! ವಿಶ್ವದೇವ್ಯಾವತೀಃ=ದೇವತೆಗಳ ಉಪಚಾರಕ್ಕೆ ಯೋಗ್ಯರಾದ; ಗ್ನಾಃ ದೇವೀಃ=ಛಂದೋಭಿಮಾನಿದೇವತೆಯರು; ಪೃಥಿವ್ಯಾಃ ಸಧಸ್ಥೇ=ಪೃಥಿವಿಯ ಮೇಲೆ; ಅಂಗಿರಸ್ವತ್ ತ್ವಾ=ಅಂಗಿರೋಮುನಿಗಳಂತೆ ನಿನ್ನನ್ನು; ಶ್ರಪಯಂತು=ಬೇಯಿಸಲಿ;

---

*ಧಿಷಣಾಃ-ಗ್ನಾಃ-ವರೂತ್ರಯಃ-ಜನಯಃ-ಈ ಪದಗಳ ಅರ್ಥವು ಅವುಗಳ ವಿಧಿವಾಕ್ಯಗಳನ್ನು ಅನುಸರಿಸಿದೆ.

ವರೂತ್ರಯೋ ಜನಯಸ್ತ್ವಾ ದೇವೀರ್ವಿಶ್ವದೇವ್ಯಾವತೀಃ

ಪೃಥಿವ್ಯಾಸ್ಸಧಸ್ಥೇಽಂಗಿರಸ್ವತ್ಪಚಂತೂಖೇ ॥

ವರೂತ್ರಯಃ । ಜನಯಃ । ತ್ವಾ । ದೇವೀಃ । ವಿಶ್ವದೇವ್ಯಾವತೀರಿತಿ ವಿಶ್ವದೇವ್ಯ–ವತೀಃ ।

ಪೃಥಿವ್ಯಾಃ । ಸಧಸ್ಥ ಇತಿ ಸಧ–ಸ್ಥೇ । ಅಂಗಿರಸ್ವತ್ । ಪಚಂತು । ಉಖೇ ॥

| ಮಂತ್ರ | ವಿನಿಯೋಗ |
|---|---|
| ವರೂತ್ರಯೋ...ಪಚಂತೂಖೇ ॥<br>ಜನಯಸ್ತ್ವಾ...ಪಚಂತೂಖೇ ॥ | ಉಖೆಯನ್ನು ಕಾಯಿಸಲು ಕೊನೆಯ ಎರಡು ಮಂತ್ರಗಳು* |

✦ಉಖೇ=ಉಖೆಯೇ! ವಿಶ್ವದೇವ್ಯಾವತೀಃ=ಸರ್ವದೇವತೆಗಳ ಉಪಚಾರಕ್ಕೆ ಅರ್ಹರಾದ; ವರೂತ್ರಯಃ=ಹೋತ್ರ–ಪ್ರಶಾಸ್ತ್ರಾದಿ ಹೋತ್ರತಾಭಿಮಾನಿಗಳಾದ; ದೇವೀಃ=ದೇವಿಯರು; ಪೃಥಿವ್ಯಾಃ ಸಧಸ್ಥೇ=ಭೂಮಿಯ ಮೇಲೆ; ಅಂಗಿರಸ್ವತ್= ಅಂಗಿರಸರಂತೆ; ತ್ವಾ=ನಿನ್ನನ್ನು; ಪಚಂತು=ಪಕ್ವವನ್ನಾಗಿ ಮಾಡಲಿ. ✦ಉಖೇ!=ಹೇ! ಉಖೆಯೇ!; ವಿಶ್ವದೇವ್ಯಾವತೀಃ=ದೇವೋಪಚಾರಾರ್ಹರಾದ; ಜನಯಃ ದೇವೀಃ= 'ಸೇನೇಂದ್ರಸ್ಯ' ಮೊದಲಾಗಿ ಹೇಳಿರುವ ದೇವಪತ್ನಿಯರು; ಪೃಥಿವ್ಯಾಃ ಸಧಸ್ಥೇ= ಭೂಮಿಯ ಮೇಲೆ; ಅಂಗಿರಸ್ವತ್=ಅಂಗಿರಸರಂತೆ; ತ್ವಾ=ನಿನ್ನನ್ನು; ಪಚಂತು=ಚೆನ್ನಾಗಿ ಸುಟ್ಟಿದ್ದನ್ನಾಗಿ ಮಾಡಲಿ.

ಹೇ! ಉಖೆಯೇ! ವಿದ್ಯಾಭಿಮಾನಿದೇವತೆಯರು ನಿನ್ನನ್ನು ಭೂಮಿಯ ಮೇಲ್ಭಾಗ ದಲ್ಲಿ ಸುತ್ತಲೂ ಕಾಯಿಸಲಿ. ಛಂದೋಭಿಮಾನಿದೇವತೆಯರು ನಿನ್ನನ್ನು ಅಂಗಿರೋಮುನಿಗಳಂತೆ

*ಶ್ರುತಿಯಲ್ಲಿ 'ಷಡ್ಭಿಃ ಪಚತಿ' ಎಂದಿದೆ. ಗರ್ತವನ್ನು ನಿರ್ಮಿಸುವ ಮಂತ್ರವಾದ 'ಅದಿತಿಸ್ತ್ವಾ... ಖನತ್ವವಟ' ಎಂಬ ಮಂತ್ರವೂ, ಉಖೆಯನ್ನು ಹಳ್ಳದಲ್ಲಿ ಇಡುವ 'ದೇವಾನಾಂ ತ್ವಾ... ದಧತೂಖೇ' 'ಧಿಷಣಾಸ್ತ್ವಾ...ಇಂಧತಾಮುಖೇ' 'ಗ್ನಾಸ್ತ್ವಾ...ಶ್ರಪಯಂತೂಖೇ' ಎಂಬ ಮಂತ್ರಗಳೂ, ಎಂಬ ಮಂತ್ರವೂ, ಅನುಷಂಗದಿಂದ ಆಗಿರುವ ಬೇಯಿಸುವುದಕ್ಕಾಗಿ ಹೇಳುವ 'ವರೂತ್ರಯಃ...ಪಚಂತೂಖೇ' 'ಜನಯಸ್ತ್ವಾ...ಪಚಂತೂಖೇ' ಎಂಬ ಮಂತ್ರಗಳೂ ಸೇರಿ ಆರು ಮಂತ್ರಗಳಾಗುತ್ತವೆ.

ಮಿತ್ರೈತಾಮುಖಾಂ ಪಚ್ಯೈಷಾ ಮಾ ಭೇದಿ । ಏತಾಂ ತೇ ಪರಿದದಾಮ್ಯಭಿತ್ತ್ಯೈ । ಅಭೀಮಾ [ಮಾಮ್(೨೩)ಮಹಿನಾ] ಮ್ಮಹಿನಾ ದಿವಂ ಮಿತ್ರೋ ಬಭೂವ ಸಪ್ರಥಾಃ । ಉತ ಶ್ರವಸಾ ಪೃಥಿವೀಮ್ ।

---

ಮಿತ್ರ । ಏತಾಮ್ । ಉಖಾಮ್ । ಪಚ । ಏಷಾ । ಮಾ । ಭೇದಿ ॥ ಏತಾಮ್ । ತೇ । ಪರೀತಿ । ದದಾಮಿ । ಅಭಿತ್ತ್ಯೈ ॥ ಅಭೀತಿ । ಇಮಾಮ್ ।(೨೩)। ಮಹಿನಾ । ದಿವಮ್ । ಮಿತ್ರಃ । ಬಭೂವ । ಸಪ್ರಥಾ ಇತಿ ಸ-ಪ್ರಥಾಃ ॥ ಉತ । ಶ್ರವಸಾ । ಪೃಥಿವೀಮ್ ॥

---

| ಮಂತ್ರ | ವಿನಿಯೋಗ |
|---|---|
| ಮಿತ್ರೈತಾ...ಅಭಿತ್ತ್ಯೈ ॥<br>ಅಭೀಮಾಂ...ಪೃಥಿವೀಮ್ ॥ | ಅಗ್ನಿಯನ್ನು ಉರಿಯುವಂತೆ ಉಪಚರಿಸಲು ಮಿತ್ರದೇವತಾಕವಾದ ಮೂರು ಮಂತ್ರಗಳಲ್ಲಿ ಮೊದಲ ಎರಡು ಮಂತ್ರಗಳು. |

---

✦**ಮಿತ್ರ**=ಸರ್ವರಿಗೂ ಮಿತ್ರನಾದ ಮಿತ್ರದೇವನೇ! **ಏತಾಮ್ ಉಖಾಮ್**=ಈ ಉಖೆಯನ್ನು; **ಪಚ**=ಪಕ್ವವನ್ನಾಗಿ ಮಾಡು; **ಏಷಾ**=ಈ ಉಖೆಯು; **ಮಾ ಭೇದಿ**= ಒಡೆಯದಿರಲಿ; **ಏತಾಮ್**=ಈ ಉಖೆಯನ್ನು; **ಅಭಿತ್ತ್ಯೈ**=ಒಡೆಯದಂತೆ ಇರುವುದಕ್ಕಾಗಿ; **ತೇ**=ನಿನಗೆ; **ಪರಿದದಾಮಿ**=[ರಕ್ಷಣೆಗಾಗಿ] ಒಪ್ಪಿಸುತ್ತೇನೆ. ✦**ಸಪ್ರಥಾಃ**= ವಿಸ್ತಾರವಾದ ಕೀರ್ತಿಯುಳ್ಳ; **ಮಿತ್ರಃ**=ಮಿತ್ರದೇವನು; **ಮಹಿನಾ**=ಮಹಿಮೆಯಿಂದ; **ದಿವಮ್**=ದ್ಯುಲೋಕಸದೃಶವಾದ; **ಉತ**=ಮತ್ತು; **ಶ್ರವಸಾ**=ಕೀರ್ತಿಯಿಂದ; **ಪೃಥಿವೀಮ್**=ಭೂಮಿಸದೃಶವಾದ; **ಇಮಾಮ್**=ಈ ಉಖೆಯನ್ನು; **ಅಭಿ ಬಭೂವ** =ಸುತ್ತಲೂ ವ್ಯಾಪಿಸಿದನು/ವ್ಯಾಪಿಸಿ ರಕ್ಷಿಸಲಿ.

ಮಿತ್ರಸ್ಯ ಚರ್ಷಣೀಧೃತಶ್ರವೋ ದೇವಸ್ಯ ಸಾನಸಿಮ್ ।

ದ್ಯುಮ್ನಂ ಚಿತ್ರಶ್ರವಸ್ತಮಮ್ ॥

---

ಮಿತ್ರಸ್ಯ । ಚರ್ಷಣೀಧೃತ ಇತಿ ಚರ್ಷಣಿ–ಧೃತಃ । ಶ್ರವಃ । ದೇವಸ್ಯ । ಸಾನಸಿಮ್ ॥

ದ್ಯುಮ್ನಮ್ । ಚಿತ್ರಶ್ರವಸ್ತಮಮಿತಿ ಚಿತ್ರಶ್ರವಃ–ತಮಮ್ ॥

---

| ಮಂತ್ರ | ವಿನಿಯೋಗ |
|---|---|
| ಮಿತ್ರಸ್ಯ...ಶ್ರವಸ್ತಮಮ್ ॥ | ಮಿತ್ರದೇವತಾಕವಾದ ಮೂರನೆಯ ಮಂತ್ರ |

---

+ಚರ್ಷಣೀಧೃತಃ=ಮಾನವರನ್ನು ಧರಿಸಿರುವ; ಮಿತ್ರಸ್ಯ ದೇವಸ್ಯ=ಮಿತ್ರದೇವನ; ಶ್ರವಃ=ಕೇಳಬೇಕಾದ ಕೀರ್ತಿಯು [ಮಹತ್ ಅಸ್ತಿ=ದೊಡ್ಡದಿದೆ] [ಆ ದೇವನು] ಸಾನಸಿಮ್=ಫಲದಾನಶೀಲವಾದ; ದ್ಯುಮ್ನಮ್=ಧನಪ್ರದವಾದ; ಚಿತ್ರಶ್ರವಸ್ತಮಮ್ =ಬಗೆ ಬಗೆಯ ಕೀರ್ತಿಯುಳ್ಳ; [ಈ ಉಖಾರೂಪದ್ರವ್ಯವನ್ನು ಚೆನ್ನಾಗಿ ಪಕ್ವ ಮಾಡಲಿ. ಒಡೆಯದಂತೆ ಕಾಪಾಡಲಿ]

---

ಪೃಥಿವಿಯ ಮೇಲೆ ಬೇಯಿಸಲಿ.

ಹೋತ್ರ–ಪ್ರಶಾಸ್ತ್ರಾದಿ ಹೋತೃತಾಭಿಮಾನಿದೇವತೆಯರು ಪೃಥಿವಿಯ ಮೇಲೆ ನಿನ್ನನ್ನು ಕಾಯಿಸಲಿ. ದೇವೋಪಚಾರಾರ್ಹರಾದ ದೇವಪತ್ನಿಯರು ಅಂಗಿರಸರಂತೆ ಭೂಮಿಯ ಮೇಲೆ ನಿನ್ನನ್ನು ಚೆನ್ನಾಗಿ ಪಾಕವಾಗುವಂತೆ ಬೇಯಿಸಲಿ.

'ಮೈತ್ರಿಯೋಪೈತಿ ಶಾಂತ್ಯೈ' ಎಂಬ ಅರ್ಥವಾದವಾಕ್ಯದಂತೆ ಮಿತ್ರದೇವತಾಕ ವಾದ ಋಕ್ ಅನ್ನು ಹೇಳಬೇಕು.

ಮಿತ್ರದೇವನು ಸರ್ವಮಿತ್ರನು. ಉಖೆಯು ಚೆನ್ನಾಗಿ ಪಕ್ವವಾಗಲು, ಒಡೆಯದಿರಲು ರಕ್ಷಣೆಗಾಗಿ ಆ ಮಿತ್ರದೇವನಿಗೆ ಉಖೆಯನ್ನು ಒಪ್ಪಿಸುತ್ತೇನೆ.

ಕೀರ್ತಿವಂತನಾದ ಮಿತ್ರದೇವನು ತನ್ನ ಪ್ರಭಾವದಿಂದ ದ್ಯುಲೋಕ–ಭೂಲೋಕ ಸದೃಶವಾದ ಈ ಉಖೆಯನ್ನು ವ್ಯಾಪಿಸಿ ಕಾಪಾಡಲಿ.

ಉಖೆಯು ಯಜ್ಞಸಾಧನವಾದುದರಿಂದ ಯಜ್ಞಫಲಪ್ರದವೂ, ಧನಪ್ರದವೂ, ಕೀರ್ತಿ ಶಾಲಿಯೂ ಆಗಿದೆ. ಮಾನವರಕ್ಷಕನಾದ ಮಿತ್ರದೇವನು ಈ ಉಖೆಯನ್ನು ಚೆನ್ನಾಗಿ ಪಕ್ವ ಮಾಡಲಿ.

**ದೇವಸ್ತ್ವಾ ಸವಿತೋದ್ವಪತು ಸುಪಾಣಿಸ್ಸ್ವಂಗುರಿಃ। ಸುಬಾಹುರುತ ಶಕ್ತ್ಯಾ। ಅಪದ್ಯಮಾನಾ ಪೃಥಿವ್ಯಾಶಾ ದಿಶ ಆ ಪೃಣ। ಉತ್ತಿಷ್ಠ ಬೃಹತೀ ಭವೋರ್ಧ್ವಾ ತಿಷ್ಠ ಧ್ರುವಾ ತ್ವಮ್।**

---

ದೇವಃ। ತ್ವಾ। ಸವಿತಾ। ಉದಿತಿ। ವಪತು। ಸುಪಾಣಿರಿತಿ ಸು-ಪಾಣಿಃ। ಸ್ವಂಗುರಿರಿತಿ ಸು-ಅಂಗುರಿಃ॥ ಸುಬಾಹುರಿತಿ ಸು-ಬಾಹುಃ। ಉತ। ಶಕ್ತ್ಯಾ॥ ಅಪದ್ಯಮಾನಾ। ಪೃಥಿವಿ। ಆಶಾಃ। ದಿಶಃ। ಏತಿ। ಪೃಣ॥ ಉದಿತಿ। ತಿಷ್ಠ। ಬೃಹತೀ। ಭವ। ಊರ್ಧ್ವಾ। ತಿಷ್ಠ। ಧ್ರುವಾ। ತ್ವಮ್॥

---

| ಮಂತ್ರ | ವಿನಿಯೋಗ |
|---|---|
| ದೇವಸ್ತ್ವಾ...ಶಕ್ತ್ಯಾ॥ | ಉಖೆಯನ್ನು ಹಳ್ಳದಿಂದ ಮೇಲಕ್ಕೆ ಎತ್ತಲು. |
| ಅಪದ್ಯಮಾನಾ...ತ್ವಮ್॥ | ಉಖೆಯನ್ನು ಉತ್ತರದಿಕ್ಕಿನಲ್ಲಿ ಮರಳಿನಲ್ಲಿ ಇಡಲು. |

---

✦**ಸುಪಾಣಿಃ**=ಒಳ್ಳೆಯ ಕೈಗಳುಳ್ಳ; **ಸ್ವಂಗುರಿಃ**=ಒಳ್ಳೆಯ ಬೆರಳುಗಳುಳ್ಳ; **ಉತ**=ಮತ್ತು; **ಸುಬಾಹುಃ**=ಒಳ್ಳೆಯ ತೋಳುಗಳುಳ್ಳ; **ದೇವಃ ಸವಿತಾ**=ಪ್ರೇರಕನಾದ ಸವಿತೃದೇವನು; **ಶಕ್ತ್ಯಾ**=ಶಕ್ತಿಯಿಂದ; **ತ್ವಾ**=ನಿನ್ನನ್ನು; [ಉಖೆಯನ್ನು]**ಉತ್ ವಪತು**=ಮೇಲಕ್ಕೆ ತೆಗೆಯಲಿ. ✦**ಪೃಥಿವಿ**=ಭೂರೂಪಳಾದ ಉಖೆಯೇ! **ತ್ವಮ್**=ನೀನು, **ಅಪದ್ಯಮಾನಾ**=ಒಡೆಯದವಳಾಗಿ; **ಆಶಾಃ**=ಪೂರ್ವಾದಿ ದಿಕ್ಕುಗಳನ್ನೂ; **ದಿಶಃ**=ಆಗ್ನೇಯಾದಿ ದಿಕ್ಕುಗಳನ್ನೂ; **ಆ ಪೃಣ**=ವ್ಯಾಪಿಸು/ತೇಜಸ್ಸಿನಿಂದ ತುಂಬು; **ಉತ್ ತಿಷ್ಠ**=ಹಳ್ಳದಿಂದ ಮೇಲೇಳು; **ಬೃಹತೀ ಭವ**=ದೊಡ್ಡವಳಾಗು; **ಊರ್ಧ್ವಾ**=ಮೇಲ್ಮುಖವಾಗಿ; **ಧ್ರುವಾ**=ಸ್ಥಿರಳಾಗಿ; **ತಿಷ್ಠ**=ನಿಲ್ಲು;

---

ಸವಿತೃದೇವನು ಒಳ್ಳೆಯ ಕೈಗಳೂ, ಬೆರಳುಗಳೂ, ತೋಳುಗಳೂ-ಇವುಗಳಿಂದ

ವಸವಸ್ತ್ವಾಽಽಚ್ಛೃಂದಂತು ಗಾಯತ್ರೇಣ ಛಂದಸಾಽಂಗಿರಸ್ವ

ದ್ರುದ್ರಾಸ್ತ್ವಾಽಽಚ್ಛೃಂದಂತು ತ್ರೈಷ್ಟುಭೇನ ಛಂದಸಾಽಂಗಿರಸ್ವ

---

ವಸವಃ । ತ್ವಾ । ಐತಿ । ಛೃಂದಂತು । ಗಾಯತ್ರೇಣ । ಛಂದಸಾ । ಅಂಗಿರಸ್ವತ್ ।

ರುದ್ರಾಃ । ತ್ವಾ । ಐತಿ । ಛೃಂದಂತು । ತ್ರೈಷ್ಟುಭೇನ । ಛಂದಸಾ । ಅಂಗಿರಸ್ವತ್ ।

---

| ಮಂತ್ರ | ವಿನಿಯೋಗ |
|---|---|
| ವಸವಸ್ತ್ವಾಚ್ಛೃಂದಂತು...ಅಂಗಿರಸ್ವತ್ ॥<br>ರುದ್ರಾಸ್ತ್ವಾಚ್ಛೃಂದಂತು...ಅಂಗಿರಸ್ವತ್॥<br>ಆದಿತ್ಯಾಸ್ತ್ವಾಚ್ಛೃಂದಂತು...ಅಂಗಿರಸ್ವತ್ ॥<br>ವಿಶ್ವೇ ತ್ವಾ ದೇವಾಃ...ಅಂಗಿರಸ್ವತ್ ॥ | ಈ ನಾಲ್ಕು ಮಂತ್ರಗಳು ಅಜಾಕ್ಷೀರದಿಂದ ಉಖೆಯನ್ನು ಸೇಚನ ಮಾಡಲು. |

---

✦[ಉಖೆಯೇ!] ವಸವಃ=ವಸುದೇವತೆಗಳು; ಗಾಯತ್ರೇಣ ಛಂದಸಾ=ಗಾಯತ್ರೀ ಛಂದಸ್ಸಿನಿಂದ; ತ್ವಾ=ನಿನ್ನನ್ನು; ಅಂಗಿರಸ್ವತ್=ಅಂಗಿರಸರಂತೆ; ಆ ಛೃಂದಂತು=[ಅಜಾಕ್ಷೀರದಿಂದ] ಸೇಚಿಸಲಿ. ✦[ಉಖೆಯೇ!] ರುದ್ರಾಃ=ರುದ್ರರು; ತ್ರೈಷ್ಟುಭೇನ ಛಂದಸಾ=ತ್ರಿಷ್ಟುಪ್ ಛಂದಸ್ಸಿನಿಂದ; ಅಂಗಿರಸ್ವತ್=ಅಂಗಿರಸರಂತೆ; ತ್ವಾ=ನಿನ್ನನ್ನು; ಆ ಛೃಂದಂತು=[ಮೇಕೆಯ ಹಾಲಿನಿಂದ] ತೋಯಿಸಲಿ.

---

ಕೂಡಿರುವವನು. ಆತನು ಶಕ್ತಿಯಿಂದ ಉಖೆಯು ಒಡೆಯದಂತೆ ಹಳ್ಳದಿಂದ ಮೇಲಕ್ಕೆ ತೆಗೆಯಲಿ.

ಹೇ! ಉಖೆಯೇ! ನೀನು ಒಡೆಯದಂತೆ ಇದ್ದು ನಿನ್ನ ಕಾಂತಿಯಿಂದ ದಿಕ್ಕುಗಳು ಮತ್ತು ವಿದಿಕ್ಕುಗಳನ್ನು ತೇಜಸ್ಸಿನಿಂದ ತುಂಬು. ನೀನು ಹಳ್ಳದಿಂದ ಮೇಲಕ್ಕೆದ್ದು ಸ್ಥಿರವಾಗಿ ನಿಲ್ಲು.

ದಾದಿತ್ಯಾಸ್ತ್ವಾಽಽಚ್ಛೃಂದಂತು ಜಾಗತೇನ ಛಂದಸಾ-

ಽಂಗಿರಸ್ವದ್ವಿಶ್ವೇ ತ್ವಾ ದೇವಾ ವೈಶ್ವಾನರಾ ಆಚ್ಛೃಂದಂತ್ವಾ

ನುಷ್ಟುಭೇನ ಛಂದಸಾಽಂಗಿರಸ್ವತ್ ॥೨೪-6 ॥

[ಪತ್ನೀರಿಮಾಗ್ಂ ರುದ್ರಾಸ್ತ್ವಾಽಽಚ್ಛೃಂದಂತ್ವೇಕಾನ್ನ ವಿಗ್ಂಶತಿಶ್ಚ ॥]

---

ಆದಿತ್ಯಾಃ । ತ್ವಾ । ಏತಿ । ಛೃಂದಂತು । ಜಾಗತೇನ । ಛಂದಸಾ । ಅಂಗಿರಸ್ವತ್ ।

ವಿಶ್ವೇ । ತ್ವಾ । ದೇವಾಃ । ವೈಶ್ವಾನರಾಃ । ಏತಿ । ಛೃಂದಂತು ।

ಆನುಷ್ಟುಭೇನೇತ್ಯಾನು-ಸ್ತುಭೇನ । ಛಂದಸಾ । ಅಂಗಿರಸ್ವತ್ ॥

---

✦[ಉಖೆಯೇ!] ಆದಿತ್ಯಾಃ=ಆದಿತ್ಯರು; ಜಾಗತೇನ ಛಂದಸಾ=ಜಗತೀಛಂದಸ್ಸಿನಿಂದ; ಅಂಗಿರಸ್ವತ್=ಅಂಗಿರಸರಂತೆ; ತ್ವಾ=ನಿನ್ನನ್ನು; ಆ ಛೃಂದಂತು=ಸೇಚಿಸಲಿ;
✦[ಉಖೆಯೇ!] ವೈಶ್ವಾನರಾಃ=ಮಾನವರೆಲ್ಲರಿಗೂ ಹಿತರಾದ; ವಿಶ್ವೇ ದೇವಾಃ=ಎಲ್ಲ ದೇವತೆಗಳೂ; ಆನುಷ್ಟುಭೇನ ಛಂದಸಾ=ಅನುಷ್ಟುಪ್ ಛಂದಸ್ಸಿನಿಂದ; ಅಂಗಿರಸ್ವತ್=ಅಂಗಿರಸ ಮುನಿಗಳಂತೆ; ತ್ವಾ=ನಿನ್ನನ್ನು; ಆ ಛೃಂದಂತು=ಸೇಚಿಸಲಿ.

---

ಹೇ! ಉಖೆಯೇ! ವಸ್ವಾದಿ ದೇವತೆಗಳು ಗಾಯತ್ರ್ಯಾದಿ ಛಂದಸ್ಸಿನಿಂದ ಅಂಗಿರಸ ಮುನಿಗಳಂತೆ ನಿನ್ನನ್ನು ಅಜಾಕ್ಷೀರದಿಂದ ತೋಯಿಸಲಿ.
ಈ ಮಂತ್ರದಿಂದ ಸೇಚನೆ ಮಾಡುವುದರಿಂದ ಛಂದಸ್ಸುಗಳಿಂದಲೇ ಛಂದಸ್ಸುಗಳನ್ನು ಅಜಾಕ್ಷೀರದಿಂದ ಸೇಚನ ಮಾಡಿದಂತಾಗುತ್ತದೆ.

---

## ವಿನಿಯೋಗಸಂಗ್ರಹ

1-7ವಸವಃ ಸಪ್ತಭಿರ್ಧೂಪಃ 8ಅದಿತಿರಿತ್ಯವಟಂ ಖನೇತ್ ।
9 ದೇವೋಽಷಾಂ ತತ್ರ ಸಂಸ್ಥಾಪ್ಯ 10-11ಧಿಷಣೇತಿ ಚತುಷ್ಟಯಾತ್ ॥
ಅಗ್ನಿಂ ಕ್ಷಿಪೇನ್ಮಂತ್ರಭೇದೋ 12ವರೂ 13ಜನ ಪದದ್ವಯಾತ್ ।
14-16ಮಿತ್ರತ್ರಯೇಣೋಪಚಾರಃ 17ದೇವ ಉದ್ವಾಸಯೇದುಖಾಮ್ ॥
18ಅಪೇತಿ ಸಿಕತಾಸ್ವೇತಾಂ ನಿಧಾಯ 19-22ವಸವೇತ್ಯತಃ ।
ಚತುಷ್ಟಯಾದಜಾಕ್ಷೀರಂ ಸಿಂಚೇದ್ದ್ವಾವಿಂಶತಿರ್ಮತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–22

ಖ❀ಐಖ❀ಐ

## ॥ ಸಪ್ತಮೋಽನುವಾಕಃ ॥

ಸಮಾಸ್ತ್ವಾಗ್ನ ಋತವೋ ವರ್ಧಯಂತು ಸಂವತ್ಸರಾ

ಋಷಯೋ ಯಾನಿ ಸತ್ಯಾ ।

---

ಸಮಾಃ । ತ್ವಾ । ಅಗ್ನೇ । ಋತವಃ । ವರ್ಧಯಂತು । ಸಂವತ್ಸರಾ ಇತಿ ಸಂ-ವತ್ಸರಾಃ ।

ಋಷಯಃ । ಯಾನಿ । ಸತ್ಯಾ ॥

---

ಆರನೆಯ ಅನುವಾಕದಲ್ಲಿ ಉಷಾಸಂಸ್ಕಾರಗಳು ಉಕ್ತವಾಗಿವೆ. ಈ ಏಳನೆಯ ಅನುವಾಕದಲ್ಲಿ ಪಂಚಪಶುಯಾಗಾಂಗವಾದ, ಅಗ್ನಿದೇವತಾಕವಾದ ಸಾಮಿಧೇನಿಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಸಮಾಸ್ತ್ವ...ಪೃಥಿವ್ಯಾಃ ॥ | ಪ್ರಕೃತಿಯಾಗದಿಂದ ಪ್ರಾಪ್ತವಾಗುವ ಸಾಮಿಧೇನಿಗಳೊಡನೆ ಇಲ್ಲಿ ವಿಹಿತವಾಗಿರುವ ಹತ್ತು ಸಾಮಿಧೇನಿಗಳಲ್ಲಿ ಮೊದಲನೆಯ ಸಾಮಿಧೇನೀಮಂತ್ರ. |

---

✦ಅಗ್ನೇ=ಅಗ್ನಿದೇವನೇ! ಸಮಾಃ=ಸಂವತ್ಸರಗಳೂ, ಸಂವತ್ಸರಾಃ=ಸಂವತ್ಸರದ ಅವಯವಗಳಾದ ಮಾಸ-ಅರ್ಧಮಾಸಗಳೂ; ಋತವಃ=ಋತುಗಳೂ; ಋಷಯಃ =ಮಂತ್ರದ್ರಷ್ಟಾರರಾದ ಋಷಿಗಳೂ; ಯಾನಿ ಸತ್ಯಾ=ಯಾವ ಸತ್ಯವಾಕ್ಯಗಳು/ಮಂತ್ರಗಳು ಇವೆಯೋ; ಅವುಗಳೂ; ತ್ವಾ=ನಿನ್ನನ್ನು; ವರ್ಧಯಂತು=ವೃದ್ಧಿಗೊಳಿಸಲಿ; [ಹೀಗೆ ಪ್ರವೃದ್ಧನಾದ ನೀನು]

ಸಂ ದಿವ್ಯೇನ ದೀದಿಹಿ ರೋಚನೇನ ವಿಶ್ವಾ ಆ ಭಾಹಿ ಪ್ರದಿಶಃ ಪೃಥಿವ್ಯಾಃ ॥ ಸಂ ಚೇಧ್ಯಸ್ವಾಗ್ನೇ ಪ್ರ ಚ ಬೋಧಯೈನಮುಚ್ಚ ತಿಷ್ಠ ಮಹತೇ ಸೌಭಗಾಯ ।

---

ಸಮಿತಿ । ದಿವ್ಯೇನ । ದೀದಿಹಿ । ರೋಚನೇನ । ವಿಶ್ವಾಃ । ಏತಿ । ಭಾಹಿ । ಪ್ರದಿಶ ಇತಿ ಪ್ರ–ದಿಶಃ । ಪೃಥಿವ್ಯಾಃ ॥ ಸಮಿತಿ । ಚ । ಇಧ್ಯಸ್ವ । ಅಗ್ನೇ । ಪ್ರೇತಿ । ಚ । ಬೋಧಯ । ಏನಮ್ । ಉದಿತಿ । ಚ । ತಿಷ್ಠ । ಮಹತೇ । ಸೌಭಗಾಯ ॥

---

| ಮಂತ್ರ | ವಿನಿಯೋಗ |
|---|---|
| ಸಂ ಚೇಧ್ಯಸ್ವ...ಅಗ್ನೇ ॥ | ಎರಡನೆಯ ಸಾಮಿಧೇನೀಮಂತ್ರ |

---

ದಿವ್ಯೇನ=ದೇವಲೋಕಾರ್ಹವಾದ; ರೋಚನೇನ=ತೇಜಸ್ಸಿನಿಂದ; ಸಮ್ ದೀದಿಹಿ= ಚೆನ್ನಾಗಿ ಪ್ರಜ್ವಲಿಸು. [ನಿನ್ನ ಬೆಳಕಿನಿಂದ] ಪೃಥಿವ್ಯಾಃ=ಭೂಮಿಯ; ವಿಶ್ವಾಃ ಪ್ರದಿಶಃ= ಎಲ್ಲ ದಿಕ್ಕು–ವಿದಿಕ್ಕುಗಳನ್ನೂ; ಆ ಭಾಹಿ=ಬೆಳಗಿಸು; +ಅಗ್ನೇ=ಅಗ್ನಿದೇವನೇ! ಸಮ್ ಚ ಇಧ್ಯಸ್ವ=ಚೆನ್ನಾಗಿ ಪ್ರಜ್ವಲಿಸುವವನಾಗು; ಏನಮ್=ಈ ಯಜಮಾನನನ್ನು; ಪ್ರ ಚ ಬೋಧಯ=ತನ್ನ ಕಾರ್ಯಗಳಲ್ಲಿ ಜಾಗರೂಕನಾಗಿರುವಂತೆ ಮಾಡು; ಮಹತೇ ಸೌಭಗಾಯ=ಈ ಯಜಮಾನನ ಮಹಾಸೌಭಾಗ್ಯಕ್ಕೆ; ಉತ್ ಚ ತಿಷ್ಠ=ಉದ್ಯುಕ್ತನೂ ಆಗು.

---

ಹೇ! ಅಗ್ನಿದೇವನೇ! ನಿನ್ನನ್ನು ಸಂವತ್ಸರಾದಿಗಳೂ, ಋತ್ವಿಜರೂ, ಮಂತ್ರಗಳೂ ಚೆನ್ನಾಗಿ ಪ್ರಜ್ವಲಿಸುವಂತೆ ಮಾಡಲಿ.

ನೀನು ದಿವ್ಯತೇಜಸ್ಸಿನಿಂದ ಕಂಗೊಳಿಸು. ಭೂಮಿಯ ಎಲ್ಲ ದಿಕ್ಕು ವಿದಿಕ್ಕುಗಳನ್ನೂ ನಿನ್ನ ಪ್ರಕಾಶದಿಂದ ಬೆಳಗಿಸು.

# ಮಾ ಚ ರಿಷದುಪಸತ್ತಾ ತೇ ಅಗ್ನೇ ಬ್ರಹ್ಮಾಣಸ್ತೇ ಯಶಸಸ್ಸಂತು ಮಾನ್ಯೇ ॥ ತ್ವಾಮಗ್ನೇ ವೃಣತೇ ಬ್ರಾಹ್ಮಣಾ ಇಮೇ ಶಿವೋ ಅಗ್ನೇ[(೨೫)] ಸಂವರಣೇ ಭವಾ ನಃ ।

ಮಾ । ಚ । ರಿಷತ್ । ಉಪಸತ್ತೇತ್ಯುಪ-ಸತ್ತಾ । ತೇ । ಅಗ್ನೇ । ಬ್ರಹ್ಮಾಣಃ । ತೇ । ಯಶಸಃ । ಸಂತು । ಮಾ । ಅನ್ಯೇ ॥ ತ್ವಾಮ್ । ಅಗ್ನೇ । ವೃಣತೇ । ಬ್ರಾಹ್ಮಣಾಃ । ಇಮೇ । ಶಿವಃ । ಅಗ್ನೇ ।(೨೫)। ಸಂವರಣ ಇತಿ ಸಂ-ವರಣೇ । ಭವ । ನಃ ॥

| ಮಂತ್ರ | ವಿನಿಯೋಗ |
|---|---|
| ತ್ವಾಮಗ್ನೇ...ಅಪ್ರಯುಚ್ಛನ್॥ | ಮೂರನೆಯ ಸಾಮಿಧೇನೀಮಂತ್ರ. |

ಅಗ್ನೇ=ಹೇ! ಅಗ್ನಿಯೇ! ತೇ ಉಪಸತ್ತಾ=ನಿನ್ನನ್ನು ಉಪಚರಿಸುವ ಯಾವನೂ/ಋತ್ವಿಗ್ಯಜಮಾನಾದಿಗಳು; ಮಾ ಚ ರಿಷತ್=ಹಿಂಸೆಗೆ ಒಳಗಾಗದಿರಲಿ; ತೇ ಬ್ರಹ್ಮಾಣಃ =ನಿನ್ನವರಾದ ಬ್ರಾಹ್ಮಣರು/ಋತ್ವಿಗ್ಯಜಮಾನರು; ಯಶಸಃ ಸಂತು=ಯಶಸ್ಸುಳ್ಳವ ರಾಗಲಿ; ಅನ್ಯೇ=ನಿನ್ನನ್ನು ಉಪಚರಿಸದೆ ಇರುವವರು/ವಿರೋಧಿಗಳು; ಮಾ ಯಶಸಃ ಸಂತು=ಯಶಸ್ವಿಗಳಾಗದಿರಲಿ. ✦ಅಗ್ನೇ=ಅಗ್ನಿದೇವನೇ! ಇಮೇ=ಈ; ಬ್ರಾಹ್ಮಣಾಃ= ಬ್ರಾಹ್ಮಣರಾದ ಋತ್ವಿಗ್ಯಜಮಾನರು; ತ್ವಾಮ್=ನಿನ್ನನ್ನು; ವೃಣತೇ=ಆರಿಸಿಕೊಂಡು ಆರಾಧಿಸುತ್ತಾರೆ. ನಃ=ನಮ್ಮನ್ನು; ಸಂವರಣೇ=ಮುಚ್ಚಿಕೊಳ್ಳುವುದರಲ್ಲಿ/ನಮ್ಮ ಅಪರಾಧಗಳನ್ನು ಕ್ಷಮಿಸುವುದರಲ್ಲಿ; ಶಿವಃ ಭವ=ಶಾಂತನಾಗಿರು; ಅಗ್ನೇ=ಹೇ! ಅಗ್ನಿದೇವನೇ [ನೀನು] ನಃ=ನಮ್ಮ;

ಅಗ್ನಿಯೇ! ಚೆನ್ನಾಗಿ ಪ್ರಜ್ವಲಿಸು. ಯಜಮಾನನನ್ನೂ ಎಚ್ಚರಗೊಳಿಸು. ಯಜಮಾನನು ಮಹಾಭಾಗ್ಯಶಾಲಿಯಾಗುವಂತೆ ಮಾಡು. ನಿನ್ನನ್ನು ಸೇವಿಸುವವರು ಹಿಂಸೆಗೆ ಒಳಗಾಗದಿರಲಿ. ಋತ್ವಿಗ್ಯಜಮಾನರು ನಿನ್ನ ಅನುಗ್ರಹದಿಂದ ಯಶಸ್ವಿಗಳಾಗಲಿ. ನಿನ್ನನ್ನು ಆರಾಧಿಸದೆ ಇರುವವರು ಯಶಸ್ವಿಗಳಾಗದಿರಲಿ.

ಸಪತ್ನಹಾ ನೋ ಅಭಿಮಾತಿಜಿಚ್ಚ ಸ್ವೇ ಗಯೇ ಜಾಗೃಹ್ಯ

ಪ್ರಯುಚ್ಛನ್ ॥ ಇಹೈವಾಗ್ನೇ ಅಧಿ ಧಾರಯಾ ರಯಿಂ

ಮಾ ತ್ವಾ ನಿಕ್ರನ್ಪೂರ್ವಚಿತೋ ನಿಕಾರಿಣಃ ।

---

ಸಪತ್ನಹೇತಿ ಸಪತ್ನ-ಹಾ । ನಃ । ಅಭಿಮಾತಿಜಿದಿತ್ಯಭಿಮಾತಿ-ಜಿತ್ । ಚ । ಸ್ವೇ ।

ಗಯೇ । ಜಾಗೃಹಿ । ಅಪ್ರಯುಚ್ಛನ್ನಿತ್ಯಪ್ರ-ಯುಚ್ಛನ್ ॥ ಇಹ । ಏವ । ಅಗ್ನೇ । ಅಧೀತಿ ।

ಧಾರಯ । ರಯಿಮ್ । ಮಾ । ತ್ವಾ । ನೀತಿ । ಕ್ರನ್ । ಪೂರ್ವಚಿತ ಇತಿ ಪೂರ್ವ-ಚಿತಃ ।

ನಿಕಾರಿಣ ಇತಿ ನಿ-ಕಾರಿಣಃ ।

---

| ಮಂತ್ರ | ವಿನಿಯೋಗ |
| --- | --- |
| ಇಹೈವ...ಅನಿಷ್ಟೃತಃ ॥ | ನಾಲ್ಕನೆಯ ಸಾಮಿಧೇನೀಮಂತ್ರ. |

---

ಸಪತ್ನಹಾ=ಶತ್ರುಗಳನ್ನು ನಾಶಪಡಿಸುವವನೂ; ಚ=ಮತ್ತು; ಅಭಿಮಾತಿಜಿತ್=ಪಾಪಗಳನ್ನು ಹೋಗಲಾಡಿಸುವವನೂ ಆಗಿ; ಅಪ್ರಯುಚ್ಛನ್=ಎಚ್ಚರ ತಪ್ಪದವನಾಗಿ; ಸ್ವೇ ಗಯೇ=ತನ್ನ ಮನೆಯಲ್ಲಿ; ಜಾಗೃಹಿ=ಪ್ರಮಾದವಿಲ್ಲದನಾಗಿ ಎಚ್ಚರವಾಗಿರು; [ನಮ್ಮ ಯೋಗಕ್ಷೇಮಗಳನ್ನು ಗಮನಿಸು.] ✦ ಅಗ್ನೇ=ಅಗ್ನಿದೇವನೇ! ಇಹ ಏವ=ಈ ಮನೆಯಲ್ಲಿಯೇ; ರಯಿಮ್=ಧನವನ್ನು; ಅಧಿ ಧಾರಯ=ನೆಲೆಗೊಳಿಸು; ಪೂರ್ವಚಿತಃ=ಮೊದಲು ಅಗ್ನಿಚಯನ ಮಾಡಿದವರು; ನಿಕಾರಿಣಃ=ನಮ್ಮ ನಿರಾಕರಣವನ್ನು ಮಾಡುವವರಾಗಿ; ತ್ವಾ=ನಿನ್ನನ್ನು; ಮಾ ನಿಕ್ರನ್=ನಿರಾಕರಣ ಮಾಡದಿರಲಿ/ಗೌರವಿಸಲಿ;

---

ಅಗ್ನಿಯೇ! ಋತ್ವಿಗ್ಯಜಮಾನರಾದ ನಾವು ನಿನ್ನನ್ನೇ ಆರಾಧಿಸುತ್ತೇವೆ. ನೀನು ನಮ್ಮ ಹಗೆಗಳನ್ನು ನಾಶಪಡಿಸು. ನಮ್ಮ ಪಾಪಗಳನ್ನು ಹೋಗಲಾಡಿಸು. ನಮ್ಮ ತಪ್ಪುಗಳನ್ನು ಕ್ಷಮಿಸಿ, ಅವುಗಳನ್ನು ಹೊರಗೆಡಹದಿರು.

ಕ್ಷತ್ರಮಗ್ನೇ ಸುಯಮಮಸ್ತು ತುಭ್ಯಮುಪಸತ್ತಾ ವರ್ಧತಾಂ ತೇ ಅನಿಷ್ಟೃತಃ । ಕ್ಷತ್ರೇಣಾಗ್ನೇ ಸ್ವಾಯುಸ್ಸಗ್ಂ ರಭಸ್ವ ಮಿತ್ರೇಣಾಗ್ನೇ ಮಿತ್ರಧೇಯೇ ಯತಸ್ವ । ಸಜಾತಾನಾಂ ಮಧ್ಯಮಸ್ಥಾ

---

ಕ್ಷತ್ರಮ್ । ಅಗ್ನೇ । ಸುಯಮಮಿತಿ ಸು-ಯಮಮ್ । ಅಸ್ತು । ತುಭ್ಯಮ್ । ಉಪಸತ್ತೇತ್ಯುಪ-ಸತ್ತಾ । ವರ್ಧತಾಮ್ । ತೇ । ಅನಿಷ್ಟೃತಃ ॥ ಕ್ಷತ್ರೇಣ । ಅಗ್ನೇ । ಸ್ವಾಯುರಿತಿ ಸು-ಆಯುಃ । ಸಮಿತಿ । ರಭಸ್ವ । ಮಿತ್ರೇಣ । ಅಗ್ನೇ । ಮಿತ್ರಧೇಯ ಇತಿ ಮಿತ್ರ-ಧೇಯೇ । ಯತಸ್ವ ॥ ಸಜಾತಾನಾಮಿತಿ ಸ-ಜಾತಾನಾಮ್ । ಮಧ್ಯಮಸ್ಥಾ ಇತಿ ಮಧ್ಯಮ-ಸ್ಥಾಃ ।

---

| ಮಂತ್ರ | ವಿನಿಯೋಗ |
|---|---|
| ಕ್ಷತ್ರೇಣಾಗ್ನೇ...ದಿದಿಹೀಹ ॥ | ಐದನೆಯ ಸಾಮಿಧೇನೀಮಂತ್ರ. |

---

ಅಗ್ನೇ=ಅಗ್ನಿಯೇ! ತುಭ್ಯಮ್=ನಿನ್ನ; ಕ್ಷತ್ರಮ್=ಬಲವು; ಸುಯಮಮ್ ಅಸ್ತು =ಸುಸ್ಥಿತವಾಗಿ ಇರಲಿ. ತೇ=ನಿನ್ನ; ಉಪಸತ್ತಾ=ಪರಿಚಾರಕನು/ಆರಾಧಕನು; ಅನಿಷ್ಟೃತಃ =ಯಾರಿಂದಲೂ ಹಿಂಸಿಸಲ್ಪಡದವನಾಗಿ; ವರ್ಧತಾಮ್=ವೃದ್ಧಿಹೊಂದಲಿ. +ಅಗ್ನೇ= ಅಗ್ನಿಯೇ! ಕ್ಷತ್ರೇಣ=ನಿನ್ನ ಬಲದಿಂದ; ಸ್ವಾಯುಃ=ಒಳ್ಳೆಯ ಆಯುಸ್ಸನ್ನು; ಸಂ ರಭಸ್ವ =ಚೆನ್ನಾಗಿ ರಕ್ಷಿಸು; ಅಗ್ನೇ=ಅಗ್ನಿಯೇ! ಮಿತ್ರಧೇಯೇ=ಮಿತ್ರರಾದ ನಮ್ಮ ಧಾರಣೆ ಯಲ್ಲಿ; ಮಿತ್ರೇಣ=ಅನುಗ್ರಹಯುಕ್ತವಾದ ಮನಸ್ಸಿನಿಂದ; ಯತಸ್ವ=ಪ್ರಯತ್ನಿಸು; ಸಜಾತಾನಾಮ್=ನಿನ್ನ ಜೊತೆಯಲ್ಲಿ ಹುಟ್ಟಿದ ಬ್ರಾಹ್ಮಣರ; ಮಧ್ಯಮಸ್ಥಾಃ=ಮಧ್ಯ ಪ್ರದೇಶದಲ್ಲಿರುವವನಾಗಿ/ಅವರಿಂದ ಆರಾಧಿಸಲ್ಪಡುವವನಾಗಿ;

ಏಧಿ ರಾಜ್ಞಾಮಗ್ನೇ ವಿಹವ್ಯೋ ದೀದಿಹೀಹ । ಅತಿ [ಅತಿ (೨೬)] ನಿಹೋ ಅತಿ ಸ್ರಿಧೋಽತ್ಯಚಿತ್ತಿಮತ್ಯರಾತಿಮಗ್ನೇ । ವಿಶ್ವಾ ಹ್ಯಗ್ನೇ ದುರಿತಾ ಸಹಸ್ವಾಥಾಸ್ಮಭ್ಯಗ್ಂ ಸಹ ವೀರಾಗ್ಂ ರಯಿಂ ದಾಃ ।

---

ಏಧಿ । ರಾಜ್ಞಾಮ್ । ಅಗ್ನೇ । ವಿಹವ್ಯ ಇತಿ ವಿ-ಹವ್ಯಃ । ದೀದಿಹಿ । ಇಹ ॥ ಅತೀತಿ ।(೨೬)। ನಿಹಃ । ಅತೀತಿ । ಸ್ರಿಧಃ । ಅತೀತಿ । ಅಚಿತ್ತಿಮ್ । ಅತೀತಿ । ಅರಾತಿಮ್ । ಅಗ್ನೇ ॥ ವಿಶ್ವಾ । ಹಿ । ಅಗ್ನೇ । ದುರಿತೇತಿ ದುಃ-ಇತಾ । ಸಹಸ್ವ । ಅಥ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಸಹವೀರಾಮಿತಿ ಸಹ-ವೀರಾಮ್ । ರಯಿಮ್ । ದಾಃ ॥

---

| ಮಂತ್ರ | ವಿನಿಯೋಗ |
|---|---|
| ಅತಿ ನಿಹೋ...ದಾಃ ॥ | ಆರನೆಯ ಸಾಮಿಧೇನೀಮಂತ್ರ. |

---

ಏಧಿ=ಆಗು. ಅಗ್ನೇ=ಅಗ್ನಿಯೇ! ರಾಜ್ಞಾಮ್=ರಾಜರಿಗೆ; ಇಹ=ಇಲ್ಲಿ; ವಿಹವ್ಯಃ= ಹಲವು ಯಾಗಗಳನ್ನು ಮಾಡುವುದರಲ್ಲಿ ಪ್ರವೃತ್ತರನ್ನಾಗಿ ಮಾಡಿ; ದೀದಿಹಿ=ಪ್ರಕಾಶಿಸು; +ಅಗ್ನೇ=ಅಗ್ನಿಯೇ! ನಿಹಃ=ಹೀನಜಾತಿಯಲ್ಲಿ ಹುಟ್ಟುವುದಕ್ಕೆ ಕಾರಣವಾದ ಪಾಪಗಳನ್ನು; ಅತಿ ಸಹಸ್ವ=ಅತಿಶಯವಾಗಿ ಹೋಗಲಾಡಿಸು; ಸ್ರಿಧಃ=ರೋಗಗಳನ್ನೂ; ಅತಿ ಸಹಸ್ವ=ಹೋಗಲಾಡಿಸು. ಅಚಿತ್ತಿಮ್=ಕರ್ಮಾನುಷ್ಠಾನವಿಷಯವಾದ ಅಜ್ಞಾನವನ್ನು; ಅತಿ ಸಹಸ್ವ=ಹೋಗಲಾಡಿಸು; ಅರಾತಿಮ್=ಯಜ್ಞವಿಘ್ನಕಾರಿಗಳಾದ ಶತ್ರುಗಳನ್ನೂ; ಅತಿ ಸಹಸ್ವ=ನಾಶಪಡಿಸು; ಅಗ್ನೇ=ಅಗ್ನಿಯೇ! ವಿಶ್ವಾ ಹಿ ದುರಿತಾ=ಸಕಲ ಪಾಪಗಳನ್ನೂ; ಸಹಸ್ವ=ನಾಶಪಡಿಸು; ಅಥ=ಅನಂತರ; ಅಸ್ಮಭ್ಯಮ್=ನಮಗೆ; ಸಹ ವೀರಾಮ್ ರಯಿಮ್=ಸತ್ಪುತ್ರಸಹಿತವಾದ ಸಂಪತ್ತನ್ನು; ದಾಃ=ಕೊಡು.

ಅನಾಧೃಷ್ಯೋ ಜಾತವೇದಾ ಅನಿಷ್ಟೃತೋ ವಿರಾಡಗ್ನೇ ಕ್ಷತ್ರಭೃದ್ದೀದಿಹೀಹ । ವಿಶ್ವಾ ಆಶಾಃ ಪ್ರಮುಂಚನ್ಮಾನುಷೀರ್ಭಿಯಶ್ಶಿವಾಭಿರದ್ಯ ಪರಿ ಪಾಹಿ ನೋ ವೃಧೇ ॥

---

ಅನಾಧೃಷ್ಯ ಇತ್ಯನಾ-ಧೃಷ್ಯಃ । ಜಾತವೇದಾ ಇತಿ ಜಾತ-ವೇದಾಃ । ಅನಿಷ್ಟೃತಃ । ವಿರಾಡಿತಿ ವಿ-ರಾಟ್ । ಅಗ್ನೇ । ಕ್ಷತ್ರಭೃದಿತಿ ಕ್ಷತ್ರ-ಭೃತ್ । ದೀದಿಹಿ । ಇಹ ॥ ವಿಶ್ವಾಃ । ಆಶಾಃ । ಪ್ರಮುಂಚನ್ನಿತಿ ಪ್ರ-ಮುಂಚನ್ । ಮಾನುಷೀಃ । ಭಿಯಃ । ಶಿವಾಭಿಃ । ಅದ್ಯ । ಪರೀತಿ । ಪಾಹಿ । ನಃ । ವೃಧೇ ॥

---

| ಮಂತ್ರ | ವಿನಿಯೋಗ |
|---|---|
| ಅನಾಧೃಷ್ಯೋ...ವೃಧೇ ॥ | ಏಳನೆಯ ಸಾಮಿಧೇನೀಮಂತ್ರ. |

---

✦**ಅಗ್ನೇ**=ಅಗ್ನಿಯೇ! [ನೀನು] **ಅನಾಧೃಷ್ಯಃ**=ಯಾರಿಂದಲೂ ತಿರಸ್ಕರಿಸಲ್ಪಡದವನಾಗು; **ಜಾತವೇದಾಃ**=[ನೀನು] ಹುಟ್ಟಿದುದೆಲ್ಲವನ್ನೂ ತಿಳಿದವನು; **ಅನಿಷ್ಟೃತಃ**=[ನೀನು] ಹಿಂದೆಯೂ ಯಾರಿಂದಲೂ ತಿರಸ್ಕರಿಸಲ್ಪಡದವನು. **ವಿರಾಟ್**=ವಿವಿಧವಾಗಿ ಪ್ರಕಾಶಿಸುವವನಾಗಿ; **ಕ್ಷತ್ರಭೃತ್**=ಬಲವಂತನಾಗಿ; **ಇಹ**=ಈ ಕರ್ಮದಲ್ಲಿ; **ದೀದಿಹಿ**=ಪ್ರಕಾಶಿಸು; **ವಿಶ್ವಾಃ ಆಶಾಃ**=ನಿಷಿದ್ಧಾಚರಣವಿಷಯವಾದ ಸಮಸ್ತವಾದ ಆಶೆಗಳನ್ನೂ; **ಮಾನುಷೀಃ ಭಿಯಃ**=ಮಾನವಸಹಜವಾದ ರೋಗಾದಿಭೀತಿಗಳನ್ನೂ; **ಪ್ರಮುಂಚನ್**=ಚೆನ್ನಾಗಿ ಹೋಗಲಾಡಿಸುತ್ತಾ; **ಶಿವಾಭಿಃ**=ಮಂಗಳಕರವಾದ ಅನುಗ್ರಹಬುದ್ಧಿಗಳಿಂದ; **ಅದ್ಯ**=ಈ ಕರ್ಮದಲ್ಲಿ; **ನಃ**=ನಮ್ಮನ್ನು; **ವೃಧೇ**=ಅಭಿವೃದ್ಧಿಗಾಗಿ; **ಪರಿ ಪಾಹಿ**=ಸಂರಕ್ಷಿಸು.

ಬೃಹಸ್ಪತೇ ಸವಿತರ್ಬೋಧಯೈನಗ್ಂ ಸಗ್ಂಶಿತಂ ಚಿತ್ಸಂತ

ರಾಗ್ಂ ಸಗ್ಂಶಿಶಾಧಿ। ವರ್ಧಯೈನಂ ಮಹತೇ ಸೌಭಗಾಯ

[ಸೌಭಗಾಯ(೨೭)] ವಿಶ್ವ ಏನಮನುಮದಂತು ದೇವಾಃ ||

---

ಬೃಹಸ್ಪತೇ । ಸವಿತಃ । ಬೋಧಯ । ಏನಮ್ । ಸಗ್ಂಶಿತಮಿತಿ ಸಂ-ಶಿತಮ್ । ಚಿತ್ ।

ಸಂತರಾಮಿತಿ ಸಂ-ತರಾಮ್ । ಸಮಿತಿ । ಶಿಶಾಧಿ ॥ ವರ್ಧಯ । ಏನಮ್ । ಮಹತೇ ।

ಸೌಭಗಾಯ ।(೨೭)। ವಿಶ್ವೇ । ಏನಮ್ । ಅನ್ವಿತಿ । ಮದಂತು । ದೇವಾಃ ॥

---

| ಮಂತ್ರ | ವಿನಿಯೋಗ |
|---|---|
| ಬೃಹಸ್ಪತೇ...ದೇವಾಃ ॥ | ಎಂಟನೆಯ ಸಾಮಿಧೇನೀಮಂತ್ರ. |

---

+ಬೃಹಸ್ಪತೇ=ಬೃಹಸ್ಪತಿಯಂತೆ ಅಭಿಜ್ಞನಾದ; ಸವಿತಃ=ಸವಿತೃದೇವನಂತೆ ಪ್ರೇರಕನಾದ ಅಗ್ನಿಯೇ! ಏನಮ್=ಈ ಯಜಮಾನನನ್ನು; ಬೋಧಯ=ಕರ್ಮವಿಷಯದಲ್ಲಿ ಬುದ್ಧಿಮಂತನನ್ನಾಗಿ ಮಾಡು; ಸಗ್ಂಶಿತಮ್ ಚಿತ್=ಸೂಕ್ಷ್ಮಬುದ್ಧಿಯುಳ್ಳವನಾದರೂ; ಸಂತರಾಮ್=ಅತಿಶಯವಾಗಿ; ಸಂ ಶಿಶಾಧಿ=ತೀಕ್ಷ್ಣಮತಿಯನ್ನಾಗಿ ಮಾಡು; ಏನಮ್=ಈ ಯಜಮಾನನನ್ನು; ಮಹತೇ ಸೌಭಗಾಯ=ಮಹಾಭಾಗ್ಯವಂತನಾಗುವಂತೆ; ವರ್ಧಯ=ಅಭಿವೃದ್ಧಿಗೊಳಿಸು; ವಿಶ್ವೇ ದೇವಾಃ=ಎಲ್ಲ ದೇವತೆಗಳೂ; ಏನಮ್ ಅನುಮದಂತು=ಈ ಯಜಮಾನನು ಉತ್ತಮನೆಂದು ಸಂತೋಷಿಸಲಿ.

---

ನಿನ್ನದಾದ ಈ ಮನೆಯಲ್ಲಿದ್ದುಕೊಂಡು ನಮ್ಮ ಹಿತದ ವಿಷಯದಲ್ಲಿ ಜಾಗರೂಕನಾಗಿರು.

ಅಗ್ನಿಯೇ! ಈ ನಮ್ಮ ಮನೆಯಲ್ಲಿ ಧನವನ್ನು ಅಧಿಕವಾಗಿ ನೆಲೆಗೊಳಿಸು. ಹಿಂದೆ ಚಯನ ಮಾಡಿದವರು ಈಗ ಚಯನ ಮಾಡುವ ನನ್ನನ್ನೂ ಅಗ್ನಿಯಾದ ನಿನ್ನನ್ನೂ

ಅಮುತ್ರಭೂಯಾದಧ ಯದ್ಯಮಸ್ಯ ಬೃಹಸ್ಪತೇ

ಅಭಿಶಸ್ತೇರಮುಂಚಃ । ಪ್ರತ್ಯೌಹತಾಮಶ್ವಿನಾ

ಮೃತ್ಯುಮಸ್ಮಾದ್ದೇವಾನಾಮಗ್ನೇ ಭಿಷಜಾ ಶಚೀಭಿಃ ॥

---

ಅಮುತ್ರಭೂಯಾದಿತ್ಯಮುತ್ರ-ಭೂಯಾತ್ । ಅಧ । ಯತ್ । ಯಮಸ್ಯ । ಬೃಹಸ್ಪತೇ ।

ಅಭಿಶಸ್ತೇರಿತ್ಯಭಿ-ಶಸ್ತೇಃ । ಅಮುಂಚಃ ॥ ಪ್ರತೀತಿ । ಔಹತಾಮ್ । ಅಶ್ವಿನಾ । ಮೃತ್ಯುಮ್ ।

ಅಸ್ಮಾತ್ । ದೇವಾನಾಮ್ । ಅಗ್ನೇ । ಭಿಷಜಾ । ಶಚೀಭಿರಿತಿ ಶಚಿ-ಭಿಃ ॥

---

| ಮಂತ್ರ | ವಿನಿಯೋಗ |
|---|---|
| ಅಮುತ್ರಭೂಯಾತ್...ಶಚೀಭಿಃ ॥ | ಒಂಬತ್ತನೆಯ ಸಾಮಿಧೇನೀಮಂತ್ರ. |

---

✢ಬೃಹಸ್ಪತೇ=ಬೃಹಸ್ಪತಿಸಮಾನನಾದ ಅಗ್ನಿಯೇ! ಅಮುತ್ರಭೂಯಾತ್ =ಸ್ವರ್ಗದಲ್ಲಿ ಚಿರವಾಸಕಾಲದ ನಿಮಿತ್ತವಾಗಿ; ಅಧ=ಈಗ; ಯಮಸ್ಯ ಅಭಿಶಸ್ತೇಃ= ಯಮನ ಹಿಂಸೆಗೆ ನಿಮಿತ್ತವಾದ ಪಾಪದಿಂದ; ಅಮುಂಚಃ ಇತಿ ಯತ್=ನೀನು ವಿಮುಕ್ತಿಗೊಳಿಸಿದೆ ಎಂಬುದು ಯಾವುದುಂಟೋ [ಅದರಿಂದ ಪರಲೋಕವಿಷಯದಲ್ಲಿ ನಮಗೆ ಚಿಂತೆಯಿಲ್ಲ] ಅಗ್ನೇ=ಅಗ್ನಿಯೇ! ದೇವಾನಾಮ್=ದೇವತೆಗಳ; ಭಿಷಜಾ= ವೈದ್ಯರಾದ; ಅಶ್ವಿನಾ=ಅಶ್ವಿನೀದೇವತೆಗಳು; ಅಸ್ಮಾತ್=ಈ ಯಜಮಾನನಿಂದ; ಮೃತ್ಯುಮ್=ಅಪಮೃತ್ಯುವನ್ನು; ಶಚೀಭಿಃ=ತಮ್ಮ ಶಕ್ತಿಗಳಿಂದ; ಪ್ರತ್ಯೌಹತಾಮ್ =ಹೋಗಲಾಡಿಸಲಿ.

---

ನಿರಾಕರಿಸದೆ ಗೌರವಿಸಲಿ. ನಿನ್ನ ಬಲವು ಸುಸ್ಥಿರವಾಗಿರಲಿ. ನಿನ್ನನ್ನು ಆರಾಧಿಸುವವನು ಯಾರ ಹಿಂಸೆಯೂ ಇಲ್ಲದೆ ವೃದ್ಧಿ ಹೊಂದಲಿ.

ಹೇ! ಅಗ್ನಿಯೇ! ನಮ್ಮ ಆಯುಸ್ಸನ್ನು ನಿನ್ನ ಬಲದಿಂದ ರಕ್ಷಿಸು. ನಮ್ಮನ್ನು ಅನುಗ್ರಹ ಯುಕ್ತವಾದ ಮನಸ್ಸಿನಿಂದ ನೋಡು. ಬ್ರಾಹ್ಮಣರ ಮಧ್ಯದಲ್ಲಿದ್ದುಕೊಂಡು ಆರಾಧಿ

ಉದ್ವಯಂ ತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತರಮ್ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥ ೨೮-೭ ॥

[ಇಮೇ ಶಿವೋ ಅಗ್ನೇಽತಿ ಸೌಭಗಾಯ ಚತುಸ್ತ್ರಿಗ್ಂಶಚ್ಚ ॥]

---

ಉದಿತಿ । ವಯಮ್ । ತಮಸಃ । ಪರೀತಿ । ಪಶ್ಯಂತಃ । ಜ್ಯೋತಿಃ । ಉತ್ತರಮಿತ್ಯುತ್-ತರಮ್ ॥ ದೇವಮ್ । ದೇವತ್ರೇತಿ ದೇವ-ತ್ರಾ । ಸೂರ್ಯಮ್ । ಅಗನ್ಮ । ಜ್ಯೋತಿಃ । ಉತ್ತಮಮಿತ್ಯುತ್-ತಮಮ್ ॥ ೨೮ ॥

---

| ಮಂತ್ರ | ವಿನಿಯೋಗ |
|---|---|
| ಉದ್ವಯಂ...ಉತ್ತಮಮ್ ॥ | ಹತ್ತನೆಯ ಹಾಗೂ ಕೊನೆಯ ಸಾಮಿಧೇನೀಮಂತ್ರ. |

---

✦ವಯಮ್=ನಾವು; ತಮಸಃ ಉತ್=[ತಮೋನಾಶಕನಾದುದರಿಂದ] ಕತ್ತಲೆಗಿಂತಲೂ ಶ್ರೇಷ್ಠನಾದ; ಉತ್ತರಮ್ ಜ್ಯೋತಿಃ=ಉತ್ಕೃಷ್ಟವಾದ ಜ್ಯೋತಿಃಸ್ವರೂಪನಾದ ಅಗ್ನಿಯನ್ನು; ಪರಿ ಪಶ್ಯಂತಃ=ಸುತ್ತಲೂ ನೋಡುತ್ತಾ; ದೇವತ್ರಾ=ದೇವತೆಗಳ ಮಧ್ಯದಲ್ಲಿ; ಉತ್ತಮಮ್ ಜ್ಯೋತಿಃ=ಶ್ರೇಷ್ಠಜ್ಯೋತಿಯಾದ; ದೇವಮ್ ಸೂರ್ಯಮ್ =ಸೂರ್ಯರೂಪನಾದ ಅಗ್ನಿದೇವನನ್ನು; ಅಗನ್ಮ=ಹೊಂದಿದೆವು.

---

ಸಲ್ಪಡುವವನಾಗು/ಬ್ರಾಹ್ಮಣರನ್ನು ಗೌರವಿಸು. ರಾಜರು ಹಲವು ಯಾಗಗಳಲ್ಲಿ ತೊಡಗುವಂತೆ ಮಾಡು. ಅತಿಶಯವಾಗಿ ಪ್ರಜ್ವಲಿಸು.

ಅಗ್ನಿಯೇ! ಪಾಪಗಳನ್ನೂ, ರೋಗಗಳನ್ನೂ, ಅಜ್ಞಾನವನ್ನೂ, ಯಜ್ಞವಿರೋಧಿಗಳನ್ನೂ ಹೋಗಲಾಡಿಸು. ಹೆಚ್ಚೇನು? ಸಮಸ್ತಪಾಪಗಳನ್ನೂ ಪರಿಹರಿಸು. ಪುತ್ರಸಂಪತ್ತನ್ನೂ, ಧನಸಂಪತ್ತನ್ನೂ, ನಮಗೆ ಅನುಗ್ರಹಿಸಿಕೊಡು.

ಅಗ್ನಿಯು ಹಿಂದೆಯೂ ಮುಂದೆಯೂ ತಿರಸ್ಕರಿಸಲಸಾಧ್ಯನು. ಎಲ್ಲವನ್ನೂ ತಿಳಿದವನು. ಪ್ರಬಲನು. ವಿವಿಧವಾಗಿ ಜ್ವಲಿಸುವವನು. ಆತನು ಮಾನವನ ದುರಾಸೆಗಳನ್ನೂ, ಭಯ

ಗಳನ್ನೂ ಹೋಗಲಾಡಿಸಲಿ. ಅನುಗ್ರಹಬುದ್ಧಿಯಿಂದ ನಮಗೆ ಅಭಿವೃದ್ಧಿಯನ್ನು ಕರುಣಿಸಿ ಸಂರಕ್ಷಿಸಲಿ.

ಈ ಮಂತ್ರದಲ್ಲಿ ಬೃಹಸ್ಪತಿ ಹಾಗೂ ಸವಿತೃಶಬ್ದಗಳು ಅಗ್ನಿಯನ್ನು ತಿಳಿಸುತ್ತಿವೆ ಯೆಂದು ಭಾಷ್ಯಕಾರರ ಮತ. ಇವು ಸಾಮಿಧೇನೀಮಂತ್ರಗಳಾದುದರಿಂದ ಸಾಮಿಧೇನಿ ಗಳು ಅಗ್ನಿದೇವತಾಕಗಳಾದುದರಿಂದ ಆ ರೀತಿ ಹೇಳಿರುತ್ತಾರೆ.

ಹೇ! ಅಗ್ನಿಯೇ! ಯಜಮಾನನನ್ನು ಕರ್ಮಗಳ ವಿಷಯದಲ್ಲಿ ಪರಿಣತನನ್ನಾಗಿಯೂ, ತೀಕ್ಷ್ಣಬುದ್ಧಿಯುಳ್ಳವನನ್ನಾಗಿಯೂ, ಮಹಾಭಾಗ್ಯಶಾಲಿಯನ್ನಾಗಿಯೂ ಮಾಡು. ಎಲ್ಲ ದೇವತೆಗಳೂ ಈ ಯಜಮಾನನನ್ನು ಕಂಡು ಹರ್ಷಿಸಲಿ. ಈ ಮಂತ್ರದಲ್ಲಿಯೂ ಬೃಹಸ್ಪತಿಶಬ್ದವು ಅಗ್ನಿಪರವಾಗಿದೆ. ಯಜ್ಞದ ಫಲವಾಗಿ ಸ್ವರ್ಗಪ್ರಾಪ್ತಿಯಾಗುತ್ತದೆ. ಆದರಿಂದ ಯಮನು ಕೊಡುವ ನರಕಪೀಡೆಯು ಉಂಟಾಗುವುದಿಲ್ಲ. ಸತ್ಕರ್ಮಗಳ ಫಲವಾಗಿ ಅಶ್ವಿನೀದೇವತೆಗಳು ಪ್ರಸನ್ನರಾಗಿ ಅಪಮೃತ್ಯುವನ್ನು ಹೋಗಲಾಡಿಸಲಿ. ಅಗ್ನಿಯು ಹೀಗೆ ಅನುಗ್ರಹಿಸಲಿ.

ಕತ್ತಲೆಯನ್ನು ಹೋಗಲಾಡಿಸುವ ಶ್ರೇಷ್ಠವಾದ ಜ್ಯೋತಿಸ್ಸನ್ನು ನಾವು ಸುತ್ತಲೂ ನೋಡುತ್ತಾ, ದೇವತೆಗಳ ನಡುವೆ ಅಜ್ಞಾನವನ್ನೂ ಕತ್ತಲೆಯನ್ನೂ ಕಳೆಯುತ್ತಾ ಪ್ರಕಾಶಿಸುತ್ತಿರುವ ಸೂರ್ಯರೂಪವಾದ ಜ್ಯೋತಿಸ್ಸನ್ನು ಹೊಂದಿದೆವು. ಅಂತಹ ಅಗ್ನಿಯು ನಮ್ಮ ತಮಸ್ಸನ್ನು/ಅಜ್ಞಾನವನ್ನು ಕಳೆಯಲಿ.

---

## ವಿನಿಯೋಗಸಂಗ್ರಹ

1-10 ಸಮಾಸ್ತ್ವಾ ಸಾಮಿಧೇನ್ಯಃ ಸ್ಯುರ್ದಶೈತಾ ಅಗ್ನಿಕೇ ಪಶೌ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-೧೦

## ॥ ಅಷ್ಟಮೋಽನುವಾಕಃ ॥

ಊರ್ಧ್ವಾ ಅಸ್ಯ ಸಮಿಧೋ ಭವಂತ್ಯೂರ್ಧ್ವಾ ಶುಕ್ರಾ ಶೋಚೀಗ್ಂಷ್ಯಗ್ನೇಃ ।

---

ಊರ್ಧ್ವಾಃ । ಅಸ್ಯ । ಸಮಿಧ ಇತಿ ಸಮ್-ಇಧಃ । ಭವಂತಿ । ಊರ್ಧ್ವಾ । ಶುಕ್ರಾ । ಶೋಚೀಗ್ಂಷಿ । ಅಗ್ನೇಃ ॥

---

ಏಳನೆಯ ಅನುವಾಕದಲ್ಲಿ ಅಗ್ನಿಚಯನದ ಅಂಗವಾದ ಪಶುಯಾಗದ ಸಾಮಿಧೇನಿಗಳು ಹೇಳಲ್ಪಟ್ಟವು. ಈ ಎಂಟನೆಯ ಅನುವಾಕದಲ್ಲಿ ಪ್ರಯಾಜಗಳಿಗೆ ಸಂಬಂಧಿಸಿದ 'ಆಪ್ರೀ' ಎಂಬ ಹೆಸರಿನ ಯಾಜ್ಯಾಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
| --- | --- |
| ಊರ್ಧ್ವಾಃ...ಸೂನೋಃ ॥ | ಪ್ರಯಾಜಗಳಲ್ಲಿ ಮೊದಲನೆಯದಾದ ಸಮಿತ್ಪ್ರಯಾಜದ ಮಂತ್ರ. |

---

+ಅಸ್ಯ=ಈ ಅಗ್ನಿಯ; *ಸಮಿಧಃ=ಸಮಿದ್ರೂಪದೇವತೆಯು; ಊರ್ಧ್ವಾಃ ಭವಂತಿ =[ನಮ್ಮ ಶ್ರೇಯಸ್ಸಿಗಾಗಿ] ಉದ್ಯುಕ್ತರಾಗಲಿ; ಸುಪ್ರತೀಕಸ್ಯ=ಸುಮುಖನಾದ; ಸೂನೋಃ= ಮಗನಂತೆ ಹಿತಕರನಾದ; ಅಗ್ನೇಃ=ಸಮಿದಗ್ನಿಯ; ಶುಕ್ರಾ=ಪ್ರಕಾಶಮಾನವಾದ;

---

*ಚೆನ್ನಾಗಿ ಜ್ವಲಿಸುವುದರಿಂದ 'ಸಮಿತ್'. ಗೌರವಾರ್ಥವಾದ ಬಹುವಚನ.

ದ್ಯುಮತ್ತಮಾ ಸುಪ್ರತೀಕಸ್ಯ ಸೂನೋಃ ॥ ತನೂನಪಾದಸುರೋ

ವಿಶ್ವವೇದಾ ದೇವೋ ದೇವೇಷು ದೇವಃ ।

---

ದ್ಯುಮತ್ತಮೇತಿ ದ್ಯುಮತ್-ತಮಾ । ಸುಪ್ರತೀಕಸ್ಯೇತಿ ಸು-ಪ್ರತೀಕಸ್ಯ । ಸೂನೋಃ ॥

ತನೂನಪಾದಿತಿ ತನೂ-ನಪಾತ್ । ಅಸುರಃ । ವಿಶ್ವವೇದಾ ಇತಿ ವಿಶ್ವ-ವೇದಾಃ ।

ದೇವಃ । ದೇವೇಷು । ದೇವಃ ॥

---

| ಮಂತ್ರ | ವಿನಿಯೋಗ |
|---|---|
| ತನೂನಪಾದಸುರೋ...ಘೃತೇನ ॥ | ಎರಡನೆಯದಾದ ತನೂನಪಾತ್ಪ್ರಯಾಜ ಹೋಮವನ್ನು ಮಾಡಲು. |

---

ದ್ಯುಮತ್ತಮಾ=ಚೆನ್ನಾಗಿ ಬೇರೆಯ ವಸ್ತುಗಳನ್ನು ಬೆಳಗಿಸುವ; ಶೋಚೀಗ್‌ಂಷಿ= ಜ್ವಾಲೆಗಳು; ಊರ್ಧ್ವಾಃ ಭವಂತಿ=ಎತ್ತರವಾಗಿರಲಿ/ಶ್ರೇಷ್ಠವಾಗಿರಲಿ. +ತನೂನಪಾತ್ =ಶರೀರರಕ್ಷಕನಾಗಿ ತನೂನಪಾನ್ನಾಮಕನಾದ ಅಗ್ನಿದೇವನು; ಅಸುರಃ=ಪ್ರಾಣಗಳನ್ನು ಕೊಡುವವನು; ವಿಶ್ವವೇದಾಃ=ಎಲ್ಲವನ್ನೂ ತಿಳಿದವನು;/ಮಾನವರೆಲ್ಲರಿಂದಲೂ ಪೂಜ್ಯನು; ದೇವಃ=ಪ್ರಕಾಶಮಾನನು; ದೇವೇಷು ದೇವಃ=ದೇವತೆಗಳಲ್ಲಿ ಶ್ರೇಷ್ಠನಾದ ದೇವನು;[ಇಂತಹ ತನೂನಪಾತನು]

---

ಸಮಿನ್ನಾಮಕನಾದ ಪ್ರಥಮಪ್ರಯಾಜದೇವತೆಯು ನಮ್ಮ ಶ್ರೇಯಸ್ಸಿಗಾಗಿ ಉದ್ಯುಕ್ತನಾಗಲಿ. ಆತನು ನಮ್ಮ ವಿಷಯದಲ್ಲಿ ಸುಮುಖನಾಗಿರಲಿ. ಮಗನಂತೆ ಹಿತಕರನಾಗಿರಲಿ. ಆತನು ಬೆಳಗುವ ಮತ್ತು ಬೆಳಗಿಸುವ ಜ್ವಾಲೆಗಳು ಉತ್ತಮವಾಗಿರಲಿ. ನಮ್ಮ ಹವಿಸ್ಸನ್ನು ಸ್ವೀಕರಿಸಲಿ.

ಪಥ ಆಽನಕ್ತಿ ಮಧ್ವಾ ಘೃತೇನ ॥ ಮಧ್ವಾ ಯಜ್ಞಂ

ನಕ್ಷಸೇ ಪ್ರೀಣಾನೋ ನರಾಶಗ್ಂಸೋ ಅಗ್ನೇ ।

ಸುಕೃದ್ದೇವಃ ಸವಿತಾ ವಿಶ್ವವಾರಃ ॥

---

ಪಥಃ । ಏತಿ । ಅನಕ್ತಿ । ಮಧ್ವಾ । ಘೃತೇನ ॥ ಮಧ್ವಾ । ಯಜ್ಞಮ್ । ನಕ್ಷಸೇ । ಪ್ರೀಣಾನಃ । ನರಾಶಗ್ಂಸಃ । ಅಗ್ನೇ ॥ ಸುಕೃದಿತಿ ಸು-ಕೃತ್ । ದೇವಃ । ಸವಿತಾ । ವಿಶ್ವವಾರ ಇತಿ ವಿಶ್ವ-ವಾರಃ ॥

---

| ಮಂತ್ರ | ವಿನಿಯೋಗ |
|---|---|
| ಮಧ್ವಾ...ವಿಶ್ವವಾರಃ ॥ | ಮೂರನೆಯ ಪ್ರಯಾಜಹೋಮವನ್ನು ಮಾಡಲು |

---

ಪಥಃ=ಸ್ವರ್ಗದ ಮಾರ್ಗದಂತಿರುವ ಹವಿಸ್ಸುಗಳನ್ನು; ಮಧ್ವಾ ಘೃತೇನ=ಮಧುರವಾದ ಆಜ್ಯದಿಂದ; ಆ ಅನಕ್ತಿ=ಚೆನ್ನಾಗಿ ತೋಯಿಸಲಿ. +ಅಗ್ನೇ= ನರಾಶಗ್ಂಸಾಗ್ನಿಯೇ! ನರಾಶಗ್ಂಸಃ= [ನೀನು] ಮಾನವರಿಂದ ಹೊಗಳಲ್ಪಡುವವನು; ಸುಕೃತ್=ಕರ್ಮಗಳನ್ನು ಒಳ್ಳೆಯದನ್ನಾಗಿ ಮಾಡುವವನು; ದೇವಃ=ಪ್ರಕಾಶಮಾನನು; ಸವಿತಾ=ಪ್ರೇರಕನು; ವಿಶ್ವವಾರಃ=ಎಲ್ಲ ಪಾಪಗಳನ್ನೂ ನಿವಾರಿಸತಕ್ಕವನು; ಮಧ್ವಾ=ಮಧುರವಾದ ಆಜ್ಯದಿಂದ; ಪ್ರೀಣಾನಃ=ಸಂತೋಷಪಡುವವನು; ಯಜ್ಞಮ್=ಯಜ್ಞವನ್ನು; ನಕ್ಷಸೇ= ಹೊಂದುತ್ತೀಯೆ;

---

ಶರೀರರಕ್ಷಕನಾದ ತನೂನಪಾದನು ಎರಡನೆಯ ಪ್ರಯಾಜದೇವತೆ. ಆತನು ಪ್ರಾಣಪ್ರದನಾಗಿ ಅಸುರನೂ, ಎಲ್ಲವನ್ನೂ ತಿಳಿದವನೂ, ಎಲ್ಲರಿಂದಲೂ ಪೂಜ್ಯನೂ ದೇವತೆಗಳಲ್ಲಿ ಶ್ರೇಷ್ಠದೇವನೂ ಆಗಿರುತ್ತಾನೆ. ಆತನು ಮಧುರವಾದ ಆಜ್ಯದಿಂದ ಸ್ವರ್ಗಸಾಧನಮಾರ್ಗವಾಗಿರುವ ಹವಿಸ್ಸುಗಳನ್ನು ತೋಯಿಸಲಿ.

ಅಚ್ಛಾಯಮೇತಿ ಶವಸಾ ಘೃತೇನೇಡಾನೋ ವಹ್ನಿರ್ನಮಸಾ ।
ಅಗ್ನಿಗ್ಗ್ಂ ಸ್ರುಚೋ ಅಧ್ವರೇಷು ಪ್ರಯಥ್ಸು ॥

---

ಅಚ್ಛ । ಅಯಮ್ । ಏತಿ । ಶವಸಾ । ಘೃತೇನ । ಈಡಾನಃ । ವಹ್ನಿಃ । ನಮಸಾ ॥
ಅಗ್ನಿಮ್ । ಸ್ರುಚಃ । ಅಧ್ವರೇಷು । ಪ್ರಯತ್ಸ್ವಿತಿ ಪ್ರಯತ್-ಸು ॥

---

| ಮಂತ್ರ | ವಿನಿಯೋಗ |
|---|---|
| ಅಚ್ಛಾ...ಪ್ರಯತ್ಸು॥ | ನಾಲ್ಕನೆಯ ಈಡಾನ ದೇವತೆಯ ಪ್ರಯಾಜಹೋಮಕ್ಕಾಗಿ |

---

✦ಈಡಾನಃ=ಸ್ತುತಿಪ್ರಿಯನಾದ ಈಡಾನನೆಂಬ; ಅಯಮ್=ಈ; ವಹ್ನಿಃ=ಅಗ್ನಿಯು; ಶವಸಾ=ಬಲದಿಂದ ಕೂಡಿದವನಾಗಿ; ಅಚ್ಛ=[ಯಜ್ಞವನ್ನು] ಹೊಂದುವುದಕ್ಕೆ; ಏತಿ= ಹೋಗುತ್ತಾನೆ. ಅಧ್ವರೇಷು=ಯಜ್ಞಗಳು; ಪ್ರಯತ್ಸು=ಪ್ರವರ್ತಿತವಾಗುತ್ತಿರಲಾಗಿ; ಸ್ರುಚಃ=ಸ್ರುಚದ/ಸ್ರುಚದಲ್ಲಿರುವ; ಘೃತೇನ=ತುಪ್ಪದಿಂದಲೂ; ನಮಸಾ=ನಮಸ್ಕಾರ ದಿಂದಲೂ; ಅಗ್ನಿಮ್=ಈ ಈಡಾನಾಗ್ನಿಯನ್ನು; [ಪರಿಚರೇಮ=ಪರಿಚರ್ಯೆಯಿಂದ ಉಪಚರಿಸೋಣ.]

---

ನರಾಶಗ್ಂಸನೆಂಬ ಅಗ್ನಿಯು ಮೂರನೆಯ ಪ್ರಯಾಜದೇವತೆಯು. ಈತನು ಮಾನವರಿಂದ ಸ್ತುತಿಸಲ್ಪಡತಕ್ಕವನು. ಈತನು ದೋಷಗಳನ್ನು ಪರಿಹರಿಸಿ ಕರ್ಮಗಳನ್ನು ಸಂಪಾದಿಸತಕ್ಕವನು. ಪ್ರೇರಕನಾಗಿ ಸವಿತೃವಿನಂತೆ ಇರುವವನು. ಪಾಪಗಳನ್ನು ಹೋಗಲಾಡಿಸುವವನು. ಈತನು ಮಧುರವಾದ ಘೃತಾಹುತಿಯಿಂದ ತೃಪ್ತನಾಗಲಿ. ಯಜ್ಞವನ್ನು ಪೂರ್ಣಗೊಳಿಸಲಿ.

ಸ್ತೋತ್ರಪ್ರಿಯನಾದ ಅಗ್ನಿಯು ಈಡಾನನು, ಈತನು. ಜುಹೂವಿನಲ್ಲಿರುವ ತುಪ್ಪದ ಆಹುತಿಯಿಂದ ತೃಪ್ತನಾಗಿ ಬಲದಿಂದ ಯಜ್ಞವನ್ನು ಪೂರ್ಣಗೊಳಿಸುವುದಕ್ಕೆ ಹೋಗು ತ್ತಾನೆ.

ಸ ಯಕ್ಷದಸ್ಯ ಮಹಿಮಾನಮಗ್ನೇಸ್ಸ

[ಸಃ(೨೯)ಈಮಂದ್ರಾಸು] ಈಮಂದ್ರಾಸು ಪ್ರಯಸಃ ॥

ವಸುಶ್ಚೇತಿಷ್ಠೋ ವಸುಧಾತಮಶ್ಚ ॥

---

ಸಃ । ಯಕ್ಷತ್ । ಅಸ್ಯ । ಮಹಿಮಾನಮ್ । ಅಗ್ನೇಃ । ಸಃ ।(೨೯)। ಈಮ್ । ಮಂದ್ರಾಸು । ಪ್ರಯಸಃ ॥ ವಸುಃ । ಚೇತಿಷ್ಠಃ । ವಸುಧಾತಮ ಇತಿ ವಸು–ಧಾತಮಃ । ಚ ॥

---

| ಮಂತ್ರ | ವಿನಿಯೋಗ |
|---|---|
| ಸ ಯಕ್ಷದಸ್ಯ...ಚ ॥ | ಐದನೆಯದಾದ ಬರ್ಹಿರ್ನಾಮಕವಾದ ಪ್ರಯಾಜಹೋಮಕ್ಕಾಗಿ |

---

+ಸಃ=ಆ ಪ್ರಸಿದ್ಧನಾದ ಬರ್‌ಹಿರಗ್ನಿಯು; ಅಸ್ಯ ಅಗ್ನೇಃ=ಈ ಸಾಮಾನ್ಯರೂಪನಾದ ಅಗ್ನಿಯ; ಮಹಿಮಾನಮ್=ಮಹಿಮೆಯನ್ನು; ಯಕ್ಷತ್=ಪೂಜಿಸಲಿ; ಸಃ ಈಮ್= ಆ ಬರ್‌ಹಿರಗ್ನಿಯೇ; ಮಂದ್ರಾಸು=ಸಂತೋಷದಾಯಕವಾದ ಮಂತ್ರಗಳಲ್ಲಿ; ಪ್ರಯಸಃ=ಪ್ರಯಾಸವುಳ್ಳವನು; ವಸುಃ=ಪ್ರಾಣಿಗಳ ವಾಸಕ್ಕೆ ಕಾರಣನು; ಚೇತಿಷ್ಠಃ =ಅತಿಶಯವಾಗಿ ತಿಳಿದವನು; ಚ=ಮತ್ತು; ವಸುಧಾತಮಃ=[ಯಜಮಾನನಿಗೆ] ಅತ್ಯಂತವಾಗಿ ಧನಗಳನ್ನು ಕೊಡತಕ್ಕವನೂ ಆಗಿರುತ್ತಾನೆ.

---

ಈತನನ್ನು ಆಹುತಿಯಿಂದಲೂ ನಮಸ್ಕಾರಗಳಿಂದಲೂ ಉಪಚರಿಸಿ ಸಂತೋಷ ಪಡೋಣ. ಈತನು ನಮಗೆ ಯಜ್ಞಫಲವನ್ನು ಅನುಗ್ರಹಿಸಲಿ.

'ಬರ್‌ಹಿರಗ್ನೇ' ಮೊದಲಾದ ಮಂತ್ರಗಳಲ್ಲಿ ಹೇಳಲ್ಪಡುವ ಬರ್ಹಿರ್ನಾಮಕನಾದ ಪ್ರಯಾಜಾಗ್ನಿಯು ಪ್ರಸಿದ್ಧನು. ಆತನು ಸಾಮಾನ್ಯರೂಪನಾದ ಅಗ್ನಿಯ ಮಹಿಮೆಯನ್ನು ಪೂಜಿಸಲಿ. ಆತನು ಸಂತೋಷಪ್ರದವಾದ ಮಂತ್ರಗಳಲ್ಲಿ ಪ್ರಯಾಸವುಳ್ಳವನು. ಮಂತ್ರಸ್ತುತಿಗಳಿಂದ ಪರಿಚರಿಸಲ್ಪಡತಕ್ಕವನು.

ದ್ವಾರೋ ದೇವೀರನ್ವಸ್ಯ ವಿಶ್ವೇ ವ್ರತಾ ದದಂತೇ ಅಗ್ನೇಃ ।
ಉರುವ್ಯಚಸೋ ಧಾಮ್ನಾ ಪತ್ಯಮಾನಾಃ ॥ ತೇ ಅಸ್ಯ
ಯೋಷಣೇ ದಿವ್ಯೇ ನ ಯೋನಾವುಷಾಸಾನಕ್ತಾ ।

---

ದ್ವಾರಃ । ದೇವೀಃ । ಅನ್ವಿತಿ । ಅಸ್ಯ । ವಿಶ್ವೇ । ವ್ರತಾ । ದದಂತೇ । ಅಗ್ನೇಃ ॥
ಉರುವ್ಯಚಸ ಇತ್ಯುರು-ವ್ಯಚಸಃ । ಧಾಮ್ನಾ । ಪತ್ಯಮಾನಾಃ ॥ ತೇ ಇತಿ । ಅಸ್ಯ ।
ಯೋಷಣೇ ಇತಿ । ದಿವ್ಯೇ ಇತಿ । ನ । ಯೋನೌ । ಉಷಾಸಾನಕ್ತಾ ॥

---

| ಮಂತ್ರ | ವಿನಿಯೋಗ |
|---|---|
| ದ್ವಾರೋ...ಪತ್ಯಮಾನಾಃ ॥ | ಆರನೆಯ ಪ್ರಯಾಜಹೋಮವನ್ನು ಅನುಷ್ಠಿಸಲು. |
| ತೇ ಅಸ್ಯ...ನಃ ॥ | ಏಳನೆಯ ಪ್ರಯಾಜಹೋಮವನ್ನು ಅನುಷ್ಠಿಸಲು. [ಉಷಾಸಾನಕ್ತಾಪ್ರಯಾಜ] |

---

✦ಉರುವ್ಯಚಸಃ=ವಿಸ್ತೀರ್ಣಗತಿಯುಳ್ಳ/ಸರ್ವವ್ಯಾಪಿಯಾದ; ಧಾಮ್ನಾ=ತೇಜಸ್ಸಿನಿಂದ; ಪತ್ಯಮಾನಾಃ=ಹೊಂದಲ್ಪಡುವ; ದ್ವಾರಃ ದೇವೀಃ=ದ್ವಾರದೇವಿಯರನ್ನು; ಅನು=ಅನುಸರಿಸಿ; ವಿಶ್ವೇ=ಎಲ್ಲ ಯಜಮಾನರೂ; ಅಸ್ಯ ಅಗ್ನೇಃ=ಈ ಅಗ್ನಿಗೆ ಸಂಬಂಧಿಸಿದ; ವ್ರತಾ=ಹವಿಸ್ಸುಗಳನ್ನು; ದದಂತೇ=ಕೊಡುತ್ತಾರೆ. [ಅವರು ನಮ್ಮನ್ನು ಅನುಗ್ರಹಿಸಲಿ] ✦[ಯಾವ ಮೂರ್ತಿಗಳು] ಉಷಾಸಾನಕ್ತಾ=ಉಷಾಸಾನಕ್ತಾ ಎಂಬ ಹೆಸರುಳ್ಳವುಗಳೋ; ಅಸ್ಯ=ಈ ಅಗ್ನಿಯ; ತೇ=ಆ ದೇವತಾವಿಶೇಷಗಳು; ದಿವ್ಯೇನ=ದೇವತಾ ಮೂರ್ತಿಗಳಂತೆ; ಯೋಷಣೇ=ಕೂಡಿಕೊಂಡಿದ್ದು [ಪ್ರಕಾಶಮಾನವಾಗಿದ್ದುಕೊಂಡು]

---

'ದ್ವಾರಃ' ಎನ್ನುವುದು ಸ್ತ್ರೀಮೂರ್ತಿಧಾರಿಯಾದ ಅಗ್ನಿವಿಶೇಷದ ಹೆಸರು. 'ದ್ವಾರಃ' ಎಂಬಲ್ಲಿ ಗೌರವಾರ್ಥವಾಗಿ ಬಹುವಚನ. ಆ ಅಗ್ನಿವಿಶೇಷವು ಈ ಆರನೆಯ ಪ್ರಯಾಜದ ದೇವತೆ.

ಇಮಂ ಯಜ್ಞಮವತಾಮಧ್ವರಂ ನಃ । ದೈವ್ಯಾ

ಹೋತಾರಾವೂರ್ಧ್ವಮಧ್ವರಂ ನೋಽಗ್ನೇರ್ಜಿಹ್ವಾಮಭಿ

ಗೃಣೀತಮ್ । ಕೃಣುತಂ ನಃ ಸ್ವಿಷ್ಟಿಮ್ ॥

---

ಇಮಮ್ । ಯಜ್ಞಮ್ । ಅವತಾಮ್ । ಅಧ್ವರಮ್ । ನಃ ॥ ದೈವ್ಯಾ । ಹೋತಾರೌ । ಊರ್ಧ್ವಮ್ । ಅಧ್ವರಮ್ । ನಃ । ಅಗ್ನೇಃ । ಜಿಹ್ವಾಮ್ । ಅಭೀತಿ । ಗೃಣೀತಮ್ ॥ ಕೃಣುತಮ್ । ನಃ । ಸ್ವಿಷ್ಟಿಮಿತಿ ಸು–ಇಷ್ಟಿಮ್ ॥

---

| ಮಂತ್ರ | ವಿನಿಯೋಗ |
|---|---|
| ದೈವ್ಯಾ ಹೋತಾರೌ...ಸ್ವಿಷ್ಟಿಮ್ ॥ | ಎಂಟನೆಯ ದೈವ್ಯಹೋತೃಪ್ರಯಾಜ ಹೋಮವನ್ನು ಅನುಷ್ಠಿಸಲು |

---

ಯೋನೌ=ಈ ಸ್ಥಾನದಲ್ಲಿ; ನಃ=ನಮ್ಮ; ಇಮಮ್ ಯಜ್ಞಮ್=ಈ ಯಜ್ಞವನ್ನು; ಅಧ್ವರಮ್=ಹಿಂಸಾರಹಿತವಾಗಿರುವಂತೆ ಮಾಡಿ; ಅವತಾಮ್=ರಕ್ಷಿಸಲಿ.+ದೈವ್ಯಾ ಹೋತಾರೌ=ದೈವ್ಯಹೋತೃಶಬ್ದವಾಚ್ಯರಾದ ಅಗ್ನಿವಿಶೇಷಗಳೇ! ಊರ್ಧ್ವಮ್=ಉನ್ನತವಾದ; ಅಗ್ನೇಃ=ಅಗ್ನಿಯ; ಜಿಹ್ವಾಮ್ ಅಭಿ=ಜ್ವಾಲೆಯ ಅಭಿಮುಖವಾಗಿ [ಪ್ರವೃತ್ತವಾದ]; ನಃ=ನಮ್ಮ; ಅಧ್ವರಮ್=ಯಾಗವನ್ನು; ಗೃಣೀತಮ್=[ದೇವತೆಗಳಲ್ಲಿ] ಪ್ರಸಿದ್ಧಪಡಿಸಿರಿ; ನಃ=ನಮ್ಮ [ಆ ಯಾಗವನ್ನು]; ಸ್ವಿಷ್ಟಿಮ್=ಚೆನ್ನಾಗಿ ಮಾಡಿದ ಯಾಗವನ್ನಾಗಿ; ಕೃಣುತಮ್=ಮಾಡಿರಿ.

---

ಆ ದ್ವಾರದೇವಿಯರು ವಿಸ್ತೀರ್ಣಗತಿಯುಳ್ಳವರು. ಸರ್ವವ್ಯಾಪಿಗಳು. ತೇಜಸ್ವಿನಿಯರು. ಅವರನ್ನು ಅನುಸರಿಸಿ ಎಲ್ಲ ಯಜಮಾನರೂ ಈ ಅಗ್ನಿಗೆ ಸಂಬಂಧಿಸಿದ ಹವಿಸ್ಸುಗಳನ್ನು ಅರ್ಪಿಸುತ್ತಾರೆ. ಆತನು ಸುಪ್ರೀತನಾಗಲಿ. ನಮ್ಮನ್ನು ಅನುಗ್ರಹಿಸಲಿ. ಉಷಾನಾಮಕಮೂರ್ತಿಯೂ, ನಕ್ತನಾಮಕಮೂರ್ತಿಯೂ, ಅಗ್ನಿಯ ಎರಡು ಮೂರ್ತಿ

ತಿಸ್ರೋ ದೇವೀರ್ಬರ್‌ಹಿರೇದಗ್‌ಂ ಸದಂತ್ವಿಡಾ

ಸರಸ್ವತೀ[ಸರಸ್ವತೀ(೩೦)] ಭಾರತೀ । ಮಹೀ ಗೃಣಾನಾ ॥

ತನ್ನಸ್ತುರೀಪಮದ್ಭುತಂ ಪುರುಕ್ಷು ತ್ವಷ್ಟಾ ಸುವೀರಮ್ ।

---

ತಿಸ್ರಃ । ದೇವೀಃ । ಬರ್‌ಹಿಃ । ಏತಿ । ಇದಮ್ । ಸದಂತು । ಇಡಾ । ಸರಸ್ವತೀ ।(೩೦)। ಭಾರತೀ ॥ ಮಹೀ । ಗೃಣಾನಾ ॥ ತತ್ । ನಃ । ತುರೀಪಮ್ । ಅದ್ಭುತಮ್ । ಪುರುಕ್ಷು । ತ್ವಷ್ಟಾ । ಸುವೀರಮಿತಿ ಸು-ವೀರಮ್ ॥

---

| ಮಂತ್ರ | ವಿನಿಯೋಗ |
|---|---|
| ತಿಸ್ರೋ...ಗೃಣಾನಾ ॥ | ಒಂಬತ್ತನೆಯ ಪ್ರಯಾಜಹೋಮವನ್ನು ಅನುಷ್ಠಿಸಲು. |
| ತನ್ನಸ್ತುರೀಪಂ...ಅಸ್ಮೇ ॥ | ಹತ್ತನೆಯ ಪ್ರಯಾಜಹೋಮವನ್ನು ಅನುಷ್ಠಿಸಲು. |

---

✦ಮಹೀ=ಮಹತ್ತಾಗಿರುವ; ಗೃಣಾನಾ=ಪ್ರಸಿದ್ಧಿಪಡಿಸುವ; ಇಡಾ ಸರಸ್ವತೀ ಭಾರತೀ=ಇಡಾ, ಸರಸ್ವತೀ, ಭಾರತೀ ಎಂಬ ಈ ಹೆಸರಿನ; ತಿಸ್ರಃ=ಮೂರು; ದೇವೀಃ=ಅಗ್ನಿಯ ಸ್ತ್ರೀರೂಪಮೂರ್ತಿಗಳು; ಇದಮ್ ಬರ್‌ಹಿಃ=ಈ [ನಮ್ಮ] ಯಾಗವನ್ನು; ಆ ಸದಂತು=ಹೊಂದಲಿ. ✦ತ್ವಷ್ಟಾ=ತ್ವಷ್ಟೃನೆಂಬ ಪ್ರಯಾಜದೇವತೆಯು; ನಃ=ನಮಗೆ; ತುರೀಪಮ್=ಶೀಘ್ರವಾಗಿ ಪ್ರಾಪ್ತವಾಗುವ; ಅದ್ಭುತಮ್=ಗವಾಶ್ವಾದಿ ರೂಪವಾದ ಬಹುವಿಧವಾಗಿ ಆಶ್ಚರ್ಯಕರವಾದ; ಪುರುಕ್ಷು=ಪುರುಷರಿಂದ ಪ್ರಶಂಸಿಸಲ್ಪಡುವ; ಸುವೀರಮ್=ಸತ್ಪುತ್ರರಿಂದ ಕೂಡಿದ;

---

ವಿಶೇಷಗಳು. ಉಷಾಸಾ=ಹಗಲಿನ ದೇವತೆ; ನಕ್ತಾ=ರಾತ್ರಿಯ ದೇವತೆ. ಈ ಎರಡು ಅಗ್ನಿವಿಶೇಷಗಳು ಒಟ್ಟಿಗೆ ಇದ್ದು ಪ್ರಕಾಶಿಸುತ್ತವೆ. ಅವರು ನಮ್ಮ ಈ ಯಜ್ಞವೇದಿಯಲ್ಲಿ ನಮ್ಮ ಯಾಗವನ್ನು ಹಿಂಸಾರಹಿತವನ್ನಾಗಿ ಮಾಡಿ ರಕ್ಷಿಸಲಿ.

ರಾಯಸ್ಪೋಷಂ ವಿ ಷ್ಯತು ನಾಭಿಮಸ್ಮೇ ॥ ವನಸ್ಪತೇಽವ ಸೃಜಾ ರರಾಣಸ್ತ್ಮನಾ ದೇವೇಷು । ಅಗ್ನಿರ್ ಹವ್ಯಗ್ಂ ಶಮಿತಾ ಸೂದಯಾತಿ ॥

ರಾಯಃ । ಪೋಷಮ್ । ವೀತಿ । ಸ್ಯತು । ನಾಭಿಮ್ । ಅಸ್ಮೇ ಇತಿ ॥ ವನಸ್ಪತೇ । ಅವೇತಿ । ಸೃಜ । ರರಾಣಃ । ತ್ಮನಾ । ದೇವೇಷು ॥ ಅಗ್ನಿಃ । ಹವ್ಯಮ್ । ಶಮಿತಾ । ಸೂದಯಾತಿ ॥

| ಮಂತ್ರ | ವಿನಿಯೋಗ |
|---|---|
| ವನಸ್ಪತೇ...ಸೂದಯಾತಿ ॥ | ವನಸ್ಪತಿಪ್ರಯಾಜಹೋಮವನ್ನು ಮಾಡಲು. |

**ಅಸ್ಮೇ**=ನಮ್ಮಲ್ಲಿ; **ನಾಭಿಮ್**=[ಚಕ್ರದ ಅರೆಕಾಲುಗಳಿಗೆ ಆಶ್ರಯವಾದ] ಗುಂಬದಂತೆ [ಮಿತ್ರ-ಭೃತ್ಯಾದಿಗಳಿಗೆ ಆಶ್ರಯವಾಗಿರುವ]; **ತತ್ ರಾಯಃ ಪೋಷಮ್**=ಆ ಧನದ ಸಂಪತ್ತಿಯನ್ನು; **ವಿಷ್ಯತು**=ಸಂಪೂರ್ಣವಾಗಿ ಉಂಟುಮಾಡಲಿ. ✦**ವನಸ್ಪತೇ**=ವನಸ್ಪತ್ಯಗ್ನಿಯೇ! **ರರಾಣಃ**=ದಾನಶೀಲನಾದ ನೀನು; **ತ್ಮನಾ**=ತಾನಾಗಿಯೇ; **ದೇವೇಷು**=ದೇವತೆಗಳಲ್ಲಿ; **ಅವಸೃಜ**=[ಹವಿಸ್ಸುಗಳನ್ನು] ಸ್ಥಾಪಿಸು; **ಅಗ್ನಿಃ**=ಈ ಅಗ್ನಿಯು; **ಶಮಿತಾ**=ನಮ್ಮ ಪಾಪಗಳನ್ನು ಪರಿಹರಿಸುವವನಾಗಿ; **ಹವ್ಯಮ್**=[ನಾವು ದೇವತೆಗಳಿಗೆ ಕೊಡುವ] ಹವಿಸ್ಸುಗಳನ್ನು; **ಸೂದಯಾತಿ**=[ದೇವತೆಗಳಿಗೆ] ಬಡಿಸಲಿ/ಸಮರ್ಪಿಸಲಿ.

**ದೈವ್ಯಹೋತ, ಮಾನುಷಹೋತ-ಎಂದು ಎರಡು ಬಗೆಯ ಹೋತೃಗಳುಂಟು. ಹೇ ದೈವ್ಯಹೋತೃಗಳೇ!/ಅಗ್ನಿವಿಶೇಷಗಳೇ! ನೀವು ದೇವತೆಗಳಲ್ಲಿ ನಮ್ಮ ಯಜ್ಞವನ್ನು ಪ್ರಸಿದ್ಧಿಪಡಿಸಿರಿ. ನಮ್ಮ ಯಜ್ಞದ ವೈಗುಣ್ಯವನ್ನು ಪರಿಹರಿಸಿ, ಈ ಇಷ್ಟಿಯು ಒಳ್ಳೆಯ ಇಷ್ಟಿಯಾಗುವಂತೆ ಮಾಡಿರಿ.**

**ಅಗ್ನೇ ಸ್ವಾಹಾ ಕೃಣುಹಿ ಜಾತವೇದ ಇಂದ್ರಾಯ ಹವ್ಯಮ್ ।**

**ವಿಶ್ವೇ ದೇವಾ ಹವಿರಿದಂ ಜುಷಂತಾಮ್ ॥**

---

ಅಗ್ನೇ । ಸ್ವಾಹಾ । ಕೃಣುಹಿ । ಜಾತವೇದ ಇತಿ ಜಾತ-ವೇದಃ । ಇಂದ್ರಾಯ । ಹವ್ಯಮ್ ॥ ವಿಶ್ವೇ । ದೇವಾಃ । ಹವಿಃ । ಇದಮ್ । ಜುಷಂತಾಮ್ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಸ್ವಾಹಾ...ಜುಷಂತಾಮ್ ॥ | ಕೊನೆಯ ಪ್ರಯಾಜಹೋಮವನ್ನು ಅನುಷ್ಠಿಸಲು |

---

✦ಜಾತವೇದಃ=ಹುಟ್ಟಿದುದೆಲ್ಲದರ ವಿಷಯವನ್ನು ತಿಳಿದಿರುವ; ಅಗ್ನೇ=ಸ್ವಾಹಾ ಕಾರಾಭಿಮಾನಿಯಾದ ದೇವತೆಯಾದ ಅಗ್ನಿಯೇ! ಇಂದ್ರಾಯ=ಇಂದ್ರದೇವತೆಗಾಗಿ ಕೊಡುವ; ಹವ್ಯಮ್=ಹವಿಸ್ಸನ್ನು; ಸ್ವಾಹಾ ಕೃಣುಹಿ=ಚೆನ್ನಾಗಿ ಹುತವಾಗುವಂತೆ ಮಾಡು; ವಿಶ್ವೇ ದೇವಾಃ=ಎಲ್ಲ ದೇವತೆಗಳೂ; ಇದಮ್ ಹವಿಃ=[ಅವರವರಿಗೆ ನಾವು ಕೊಡುವ] ಈ ಹವಿಸ್ಸುಗಳನ್ನು; ಜುಷಂತಾಮ್=ಸೇವಿಸಲಿ.

---

ಇಡಾ, ಸರಸ್ವತೀ, ಭಾರತೀ-ಈ ಮೂವರು ಅಗ್ನಿಯ ಮೂರು ಸ್ತ್ರೀಮೂರ್ತಿ ವಿಶೇಷಗಳು. ಅವರು ಪ್ರೌಢೆಯರು. ದೇವತೆಗಳಲ್ಲಿ ನಮ್ಮ ಯಜ್ಞವನ್ನು ಪ್ರಸಿದ್ಧಿ ಪಡಿಸ ತಕ್ಕವರು. ಅವರು ನಮ್ಮ ಯಜ್ಞಕ್ಕೆ ಬರಲಿ. ಯಜ್ಞವು ಸಫಲವಾಗುವಂತೆ ಮಾಡಲಿ.

ತ್ವಷ್ಟೃವೆಂಬುವನು ಅಗ್ನಿವಿಶೇಷನು. ಆ ಅಗ್ನಿದೇವನು ನಮಗೆ ಗವಾಶ್ವಾದಿರೂಪವೂ, ಬಹುವಿಧವಾಗಿ ಆಶ್ಚರ್ಯಕರವೂ ಆದ, ಎಲ್ಲರೂ ಪ್ರಶಂಸಿಸುವಂತಹ ಬಂಧು-ಮಿತ್ರರಿಗೆ ಆಶ್ರಯವಾಗಿರುವಂತಹ ಮತ್ತು ಶೀಘ್ರವಾಗಿ ಪ್ರಾಪ್ತವಾಗುವ ಸಂಪತ್ತನ್ನು ನಮಗೆ ಸಂಪೂರ್ಣವಾಗಿ ಉಂಟುಮಾಡಿಕೊಡಲಿ.

ವನಸ್ಪತ್ಯಗ್ನಿಯು ದಾನಶೀಲನು. ಆತನು ನಾವು ದೇವತೆಗಳಿಗೆ ಕೊಡುವ ಹವಿಸ್ಸು ಗಳನ್ನು ತಾನಾಗಿಯೇ ಆಯಾ ದೇವತೆಗಳಿಗೆ ಸಮರ್ಪಿಸಲಿ. ನಮ್ಮ ಪಾಪಗಳನ್ನು ಪರಿಹರಿಸಲಿ.

ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ । ಸ ದಾಧಾರ ಪೃಥಿವೀಂ ದ್ಯಾ[ದ್ಯಾಮ್(೩೧) ಉತೇ]ಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥

---

ಹಿರಣ್ಯಗರ್ಭ ಇತಿ ಹಿರಣ್ಯ-ಗರ್ಭಃ । ಸಮಿತಿ । ಅವರ್ತತ । ಅಗ್ರೇ । ಭೂತಸ್ಯ । ಜಾತಃ । ಪತಿಃ । ಏಕಃ । ಆಸೀತ್ ॥ ಸಃ । ದಾಧಾರ । ಪೃಥಿವೀಮ್ । ದ್ಯಾಮ್ ।(೩೧)। ಉತ । ಇಮಾಮ್ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಹಿರಣ್ಯಗರ್ಭಃ...ವಿಧೇಮ ॥ | ಸ್ರುಕ್ಕಿನಿಂದ ಆಘಾರಹೋಮವನ್ನು ಮಾಡಲು. |

---

+ಹಿರಣ್ಯಗರ್ಭಃ=ಬ್ರಹ್ಮಾಂಡರೂಪವಾದ ಹಿರಣ್ಯದಲ್ಲಿಗರ್ಭರೂಪದಿಂದ ಇರುವ ಪ್ರಜಾಪತಿದೇವನು; ಭೂತಸ್ಯ=ಪ್ರಾಣಿಸಮೂಹದ; ಅಗ್ರೇ=ಉತ್ಪತ್ತಿಯ ಮೊದಲು; ಸಮ್ ಅವರ್ತತ=ಶರೀರಧಾರಿಯಾಗಿದ್ದನು; ಸಃ ಚ ಜಾತಃ=ಆತನು ಹುಟ್ಟಿದೊಡನೆಯೇ; ಏಕಃ=ಒಬ್ಬನೇ; ಪತಿಃ ಆಸೀತ್=[ಹುಟ್ಟಿದವುದೆಲ್ಲಕ್ಕೂ] ಒಡೆಯನಾಗಿದ್ದನು; ಸಃ=ಆ ಪ್ರಜಾಪತಿಯು; ಪೃಥಿವೀಮ್=ವಿಸ್ತೀರ್ಣವಾಗಿರುವ; ದ್ಯಾಮ್=ದ್ಯುಲೋಕವನ್ನೂ; ಉತ=ಮತ್ತು; ಇಮಾಮ್=ಈ ಭೂಮಿಯನ್ನೂ; ದಾಧಾರ=ಸೃಷ್ಟಿಸಿ ಧರಿಸಿದನು; ಕಸ್ಮೈ ದೇವಾಯ=ಆ ಅನಿರ್ವಾಚ್ಯನಾದ ಪ್ರಜಾಪತಿಬ್ರಹ್ಮನಿಗೆ; ಹವಿಷಾ=ಆಜ್ಯರೂಪವಾದ ಆಘಾರಹವಿಸ್ಸಿನಿಂದ; ವಿಧೇಮ=ಪರಿಚರ್ಯೆಯನ್ನು ಮಾಡೋಣ.

---

ಸ್ವಾಹಾಕಾರಾಭಿಮಾನಿಯಾದ ಎಲ್ಲವನ್ನೂ ತಿಳಿದಿರುವ ಅಗ್ನಿಯೇ! ಇಂದ್ರನಿಗೆ ಸಮರ್ಪಿಸುವ ಹವ್ಯವನ್ನು ಚೆನ್ನಾಗಿ ಹುತವಾಗುವಂತೆ ಮಾಡು. ಎಲ್ಲ ದೇವತೆಗಳೂ ತಮಗೆ ಸಮರ್ಪಿಸುವ ಹವಿಸ್ಸುಗಳನ್ನು ಸ್ವೀಕರಿಸಲಿ.

# ಯಃ ಪ್ರಾಣತೋ ನಿಮಿಷತೋ ಮಹಿತ್ವೈಕ ಇದ್ರಾಜಾ ಜಗತೋ ಬಭೂವ । ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ ಕಸ್ಮೈ ದೇವಾಯ ಹವಿಷಾ ವಿಧೇಮ ॥

---

ಯಃ । ಪ್ರಾಣತ ಇತಿ ಪ್ರ-ಅನತಃ । ನಿಮಿಷತ ಇತಿ ನಿ-ಮಿಷತಃ । ಮಹಿತ್ವೇತಿ ಮಹಿ-ತ್ವಾ । ಏಕಃ । ಇತ್ । ರಾಜಾ । ಜಗತಃ । ಬಭೂವ ॥ ಯಃ । ಈಶೇ । ಅಸ್ಯ । ದ್ವಿಪದ ಇತಿ ದ್ವಿ-ಪದಃ । ಚತುಷ್ಪದ ಇತಿ ಚತುಃ-ಪದಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಯಃ ಪ್ರಾಣತಃ...ವಿಧೇಮ ॥ | ಪ್ರಾಜಾಪತ್ಯಪಶುಯಾಗದ ಪುರೋನುವಾಕ್ಯೆ |

---

✦ಯಃ=ಯಾವ ಪ್ರಜಾಪತಿಯು; ಪ್ರಾಣತಃ=ಉಸಿರಾಡುವ; ನಿಮಿಷತಃ=ರೆಪ್ಪೆ ಹೊಡೆಯುವ; ಜಗತಃ=ಜಗತ್ತಿಗೆ; ಮಹಿತ್ವಾ=ತನ್ನ ಮಹಿಮೆಯಿಂದ; ಏಕಃ ಇತ್=ತಾನೊಬ್ಬನೇ; ರಾಜಾ ಬಭೂವ=ಪ್ರಭುವಾಗಿದ್ದಾನೆಯೋ; ಯಃ=ಯಾವನು; ಅಸ್ಯ=ಈ; ದ್ವಿಪದಃ ಚತುಷ್ಪದಃ=ದ್ವಿಪಾತ್, ಚತುಷ್ಪಾತ್ಪ್ರಾಣಿಗಳೆಲ್ಲಕ್ಕೂ; ಈಶೇ= ನಿಯಮನದಲ್ಲಿ ಸಮರ್ಥನಾಗಿದ್ದಾನೆಯೋ; ಕಸ್ಮೈ ದೇವಾಯ=ಆ ಅನಿರ್ವಾಚ್ಯ ನಾದ ಪ್ರಜಾಪತಿದೇವನಿಗೆ; ಹವಿಷಾ ವಿಧೇಮ=ವಪಾರೂಪವಾದ ಹವಿಸ್ಸಿನಿಂದ [ಪರಿಚರ್ಯೆಯನ್ನು] ಮಾಡುವೆವು.

---

ಇವು ಹನ್ನೊಂದು ಪ್ರಯಾಜಗಳು. ಇಲ್ಲಿ ಹನ್ನೆರಡು ಮಂತ್ರಗಳು ಇವೆ. ಅವುಗಳಲ್ಲಿ ಎರಡನೆಯದಾದ ನರಾಶಗ್ಂಸಪ್ರಯಾಜವು ವಸಿಷ್ಠಶುನಕಗೋತ್ರದವರಿಗೆಂದೂ, ತನೂನಪಾತ್ಪ್ರಯಾಜವು ಇತರರಿಗೆಂದೂ ವ್ಯವಸ್ಥೆ ಮಾಡಿರುವುದರಿಂದ [ಆಪ.ಶ್ರೌ.ಸೂ.21.2.7] ಏಕಾದಶಸಂಖ್ಯೆಗೂ ದ್ವಾದಶಸಂಖ್ಯೆಗೂ ವಿರೋಧವಿಲ್ಲ.

ಹಿರಣ್ಯಗರ್ಭನಾದ ಪ್ರಜಾಪತಿಬ್ರಹ್ಮನು ಸೃಷ್ಟಿಗೆ ಮೊದಲು ಒಬ್ಬನೇ ಇದ್ದನು. ಅನಂತರ

**ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ ದೇವಾಃ । ಯಸ್ಯ ಛಾಯಾಽಮೃತಂ ಯಸ್ಯ ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**

---

ಯಃ । ಆತ್ಮದಾ ಇತ್ಯಾತ್ಮ-ದಾಃ । ಬಲದಾ ಇತಿ ಬಲ-ದಾಃ । ಯಸ್ಯ । ವಿಶ್ವೇ । ಉಪಾಸತ ಇತ್ಯುಪ-ಆಸತೇ । ಪ್ರಶಿಷಮಿತಿ ಪ್ರ-ಶಿಷಮ್ । ಯಸ್ಯ । ದೇವಾಃ ॥ ಯಸ್ಯ । ಛಾಯಾ । ಅಮೃತಮ್ । ಯಸ್ಯ । ಮೃತ್ಯುಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ।

---

| ಮಂತ್ರ | ವಿನಿಯೋಗ |
|---|---|
| ಯಃ ಆತ್ಮದಾ...ವಿಧೇಮ ॥ | ಪ್ರಾಜಾಪತ್ಯಪಶುಯಾಗದ ಯಾಜ್ಯೆ. |

---

✦ಯಃ=ಯಾವ ಪ್ರಜಾಪತಿಯು; ಆತ್ಮದಾಃ=ಶರೀರಗಳಲ್ಲಿ ಜೀವರೂಪದಿಂದ ಆತ್ಮ ಪ್ರದನೋ; ಬಲದಾಃ=ಬಲವನ್ನು ಕೊಡುವವನೋ; ಯಸ್ಯ=ಯಾವನ; ಪ್ರಶಿಷಮ್=ಆಜ್ಞೆಯನ್ನು; ವಿಶ್ವೇ=ಮಾನವರೆಲ್ಲರೂ; ಉಪಾಸತೇ=ಪಾಲಿಸುತ್ತಾರೆಯೋ; ದೇವಾಃ=ದೇವತೆಗಳು; ಯಸ್ಯ ಪ್ರಶಿಷಃ ಉಪಾಸತೇ=ಯಾವನ ಆಜ್ಞೆಯನ್ನು ಅನುಸರಿಸುತ್ತಾರೆಯೋ; ಅಮೃತಮ್=ಮೋಕ್ಷವು; ಯಸ್ಯ ಛಾಯಾ=ನೆರಳಿನಂತೆ ಯಾರ ಅಧೀನವೋ; ಮೃತ್ಯುಃ=ಮರಣವೂ; ಯಸ್ಯ ಛಾಯಾ=ಯಾರಿಗೆ ನೆರಳಿನಂತೆ ಅಧೀನವಾಗಿದೆಯೋ; ಕಸ್ಮೈ ದೇವಾಯ=ಆ ಅನಿರ್ವಾಚ್ಯನಾದ ಪ್ರಜಾಪತಿದೇವನಿಗೆ; ಹವಿಷಾ ವಿಧೇಮ=[ವಪಾರೂಪವಾದ] ಹವಿಸ್ಸನ್ನು ಸಮರ್ಪಿಸಿ ಉಪಚರಿಸುತ್ತೇವೆ.

---

ಜಗತ್ತನ್ನು ಸೃಷ್ಟಿಸಿದನು. ಹುಟ್ಟಿದುದೆಲ್ಲಕ್ಕೂ ಪ್ರಭುವಾದನು. ಆತನೇ ದ್ಯುಲೋಕ ಭೂಲೋಕಗಳನ್ನೂ ಧರಿಸಿದನು. ಅಂತಹ ಅನಿರ್ವಾಚ್ಯಪ್ರಭಾವವುಳ್ಳ ಬ್ರಹ್ಮದೇವನಿಗೆ ಆಹಾರರೂಪವಾದ ಆಜ್ಯದ ಹೋಮದಿಂದ ಪರಿಚರ್ಯೆ ಮಾಡಿ ಆರಾಧಿಸೋಣ.

ಪ್ರಜಾಪತಿದೇವನು ಉಸಿರಾಡುವ ಮತ್ತು ರೆಪ್ಪೆ ಹೊಡೆಯುವ ಪ್ರಾಣಿಗಳೆಲ್ಲಕ್ಕೂ ತಾನೊಬ್ಬನೇ ತನ್ನ ಮಹಿಮೆಯಿಂದ ರಾಜನಾಗಿದ್ದಾನೆ. ಆತನು ಎರಡು ಕಾಲುಗಳನ್ನು

ಯಸ್ಯೇಮೇ ಹಿಮವಂತೋ ಮಹಿತ್ವಾ ಯಸ್ಯ ಸಮುದ್ರಗ್ಂ ರಸಯಾ ಸಹಾ[ಸಹ(೩೨)ಆಹುಃ]ಹುಃ । ಯಸ್ಯೇಮಾಃ ಪ್ರದಿಶೋ ಯಸ್ಯ ಬಾಹೂ ಕಸ್ಮೈ ದೇವಾಯ ಹವಿಷಾ ವಿಧೇಮ ।

---

ಯಸ್ಯ । ಇಮೇ । ಹಿಮವಂತ ಇತಿ ಹಿಮ-ವಂತಃ । ಮಹಿತ್ವೇತಿ ಮಹಿ-ತ್ವಾ । ಯಸ್ಯ । ಸಮುದ್ರಮ್ । ರಸಯಾ । ಸಹ ।(೩೨)। ಆಹುಃ ॥ ಯಸ್ಯ । ಇಮಾಃ । ಪ್ರದಿಶ ಇತಿ ಪ್ರ-ದಿಶಃ । ಯಸ್ಯ । ಬಾಹೂ ಇತಿ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಯಸ್ಯೇಮೇ...ವಿಧೇಮ ॥ | ಪ್ರಾಜಾಪತ್ಯ ಪಶುಪುರೋಡಾಶಯಾಗದ ಪುರೋನುವಾಕ್ಯೆ. |

---

+ಯಸ್ಯ=ಯಾವ ಪ್ರಜಾಪತಿಯ; ಮಹಿತ್ವಾ=ಮಹಿಮೆಯಿಂದ; ಇಮೇ ಹಿಮವಂತಃ =ಈ ಹಿಮವಂತನೇ ಮುಂತಾದ ಪರ್ವತಗಳು [ಇವೆಯೋ]; ಯಸ್ಯ=ಯಾವನ [ಅಧೀನದಲ್ಲಿ]; ರಸಯಾ ಸಹ=ಭೂಮಿಯೊಡನೆ; ಸಮುದ್ರಮ್=ಸಮುದ್ರವನ್ನೂ; ಆಹುಃ=[ಇದೆಯೆಂದು] ಹೇಳುತ್ತಾರೆಯೋ; ಯಸ್ಯ=ಯಾವನಿಗೆ; ಇಮಾಃ ಪ್ರದಿಶಃ =ಈ ದಿಕ್ಕು-ವಿದಿಕ್ಕುಗಳು; ಯಸ್ಯ ಬಾಹೂ=[ಅಧೀನವಾಗಿದೆಯೆನ್ನುತ್ತಾರೆಯೋ] ಯಾರಿಗೆ [ಧರ್ಮಾಧರ್ಮಗಳೇ] ತೋಳುಗಳೆಂದು [ಹೇಳುತ್ತಾರೆಯೋ]; ಕಸ್ಮೈ ದೇವಾಯ=ಅಂತಹ ಆ ಅನಿರ್ವಾಚ್ಯನಾದ ಪ್ರಜಾಪತಿದೇವನಿಗೆ; ಹವಿಷಾ ವಿಧೇಮ =ಪಶುಪುರೋಡಾಶರೂಪವಾದ ಹವಿಸ್ಸನ್ನು ಅರ್ಪಿಸುತ್ತೇವೆ.

---

ಹೊಂದಿರುವ ಮತ್ತು ನಾಲ್ಕು ಕಾಲುಗಳನ್ನು ಹೊಂದಿರುವ ಪ್ರಾಣಿವರ್ಗಕ್ಕೆಲ್ಲ ನಿಯಾಮಕನೂ ಆಗಿದ್ದಾನೆ. ಆತನನ್ನು ವಪಾರೂಪಹವಿಸ್ಸಿನಿಂದ ಆರಾಧಿಸೋಣ.

ಪ್ರಜಾಪತಿಯು ಶರೀರಗಳಲ್ಲಿ ಜೀವರೂಪದಿಂದ ಆತ್ಮಪ್ರದನು. ಅವನು ಬಲಪ್ರದನಾಗಿರುತ್ತಾನೆ. ಅವನ ಆಜ್ಞೆಯನ್ನು ಸಮಸ್ತಮಾನವರೂ ದೇವತೆಗಳೂ ಪಾಲಿಸುತ್ತಾರೆ.

**ಯಂ ಕ್ರಂದಸೀ ಅವಸಾ ತಸ್ತಭಾನೇ ಅಭ್ಯೈಕ್ಷೇತಾಂ ಮನಸಾ ರೇಜಮಾನೇ । ಯತ್ರಾಧಿ ಸೂರ ಉದಿತೌ ವ್ಯೇತಿ ಕಸ್ಮೈ ದೇವಾಯ ಹವಿಷಾ ವಿಧೇಮ ॥**

---

ಯಮ್ । ಕ್ರಂದಸೀ ಇತಿ । ಅವಸಾ । ತಸ್ತಭಾನೇ ಇತಿ । ಅಭ್ಯೈಕ್ಷೇತಾಮಿತ್ಯಭಿ-ಐಕ್ಷೇತಾಮ್ । ಮನಸಾ । ರೇಜಮಾನೇ ಇತಿ ॥ ಯತ್ರ । ಅಧೀತಿ । ಸೂರಃ । ಉದಿತಾವಿತ್ಯುತ್-ಇತೌ । ವ್ಯೇತೀತಿ ವಿ-ಏತಿ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಯಂ ಕ್ರಂದಸೀ...ವಿಧೇಮ ॥ | ಪ್ರಾಜಾಪತ್ಯಪಶುಪುರೋಡಾಶಯಾಗದ ಯಾಜ್ಯಾನುವಾಕ್ಯೆ |

---

✦ತಸ್ತಭಾನೇ=[ದೇವಮಾನವರ ಇರುವಿಕೆಗಾಗಿ] ನಿಶ್ಚಲವಾಗಿ ಮಾಡಲ್ಪಟ್ಟಿರುವ; ರೇಜಮಾನೇ=ಪ್ರಕಾಶಮಾನವಾಗಿರುವ; ಕ್ರಂದಸೀ*=[ಪ್ರಜಾಪತಿಯ ಕ್ರಂದನ/ರೋದನದಿಂದ ಹುಟ್ಟಿದುದರಿಂದ] ಕ್ರಂದಸೀ [ಎಂದು ಹೇಳಿಸಿಕೊಳ್ಳುವ] ದ್ಯಾವಾಪೃಥಿವಿಗಳು; ಅವಸಾ=ರಕ್ಷಣೆಯ ನಿಮಿತ್ತವಾಗಿ; ಯಮ್=ಯಾವ ಪ್ರಜಾಪತಿಯನ್ನು; ಮನಸಾ=ಮನಸ್ಸಿನಿಂದ; ಅಭಿ ಐಕ್ಷೇತಾಮ್=ಧ್ಯಾನಿಸುತ್ತವೆಯೋ; ಯತ್ರ ಅಧಿ=ಯಾವ ಪ್ರಜಾಪತಿಯನ್ನು ಆಶ್ರಯಿಸಿ; ಸೂರಃ=ಸೂರ್ಯನು; ಉದಿತೌ=ಉದಯಿಸುವಿಕೆಯಲ್ಲಿ; ವ್ಯೇತಿ=ವಿವಿಧವಾಗಿ ಸಂಚರಿಸುತ್ತಾನೆಯೋ; ಕಸ್ಮೈ ದೇವಾಯ=ಅಂತಹ ಅನಿರ್ವಾಚ್ಯನಾದ ಪ್ರಜಾಪತಿದೇವನಿಗೆ; ಹವಿಷಾ ವಿಧೇಮ=[ಪ್ರಾಜಾಪತ್ಯಪಶುಪುರೋಡಾಶರೂಪದ] ಹವಿಸ್ಸನ್ನು ಅರ್ಪಿಸಿ ಪೂಜಿಸುವೆವು.

---

*'ಯದರೋದೀತ್ । ತದನಯೋ ರೋದಸ್ತ್ವಮ್ ।' ಎಂದು 'ರೋದಸೀ' ಶಬ್ದದ ನಿರ್ವಚನವಿದೆ. 'ಕ್ರಂದಸೀ' ಶಬ್ದವೂ ಅದರಂತೆಯೇ.

# ಯೇನ ದ್ಯೌರುಗ್ರಾ ಪೃಥಿವೀ ಚ ದೃಢೇ ಯೇನ ಸುವಃ ಸ್ತಭಿತಂ ಯೇನ ನಾಕಃ । ಯೋ ಅಂತರಿಕ್ಷೇ ರಜಸೋ ವಿಮಾನಃ ಕಸ್ಮೈ ದೇವಾಯ ಹವಿಷಾ ವಿಧೇಮ ॥

ಯೇನ । ದ್ಯೌಃ । ಉಗ್ರಾ । ಪೃಥಿವೀ । ಚ । ದೃಢೇ ಇತಿ । ಯೇನ । ಸುವಃ । ಸ್ತಭಿತಮ್ । ಯೇನ । ನಾಕಃ ॥ ಯಃ । ಅಂತರಿಕ್ಷೇ । ರಜಸಃ । ವಿಮಾನ ಇತಿ ವಿ-ಮಾನಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

| ಮಂತ್ರ | ವಿನಿಯೋಗ |
|---|---|
| ಯೇನ ದ್ಯೌಃ...ವಿಧೇಮ ॥ | ಪ್ರಾಜಾಪತ್ಯಪಶುಯಾಗದಲ್ಲಿ ಹವಿರ್ಯಾಗದ ಪುರೋನುವಾಕ್ಯೆ. |

+ಯೇನ=ಯಾವ ಪ್ರಜಾಪತಿಯಿಂದ; ಉಗ್ರಾ=ಪಾಪಿಗಳಲ್ಲದವರಿಗೆ ನಿವಾಸವಾದ; ದ್ಯೌಃ=ಅಂತರಿಕ್ಷಲೋಕವೂ; ಚ=ಮತ್ತು; ಪೃಥಿವೀ=ಭೂಮಿಯೂ; ದೃಢೇ=ದೃಢವಾಗಿ ಮಾಡಲ್ಪಟ್ಟಿವೆಯೋ; ಯೇನ=ಯಾವನಿಂದ; ಸುವಃ=ಪುಣ್ಯವಂತರಿಗೆ ಆಶ್ರಯವಾದ ಸ್ವರ್ಗವು; ಸ್ತಭಿತಮ್=ದೃಢವಾಗಿರುವಂತೆ ಕೃತವಾಗಿದೆಯೋ; ಯೇನ=ಯಾವನಿಂದ; ನಾಕಃ=ದುಃಖದ ಸ್ಪರ್ಶವೇ ಇಲ್ಲದ ಮೋಕ್ಷವು; ಸ್ತಭಿತಃ=ಜ್ಞಾನಿಗಳಿಗೆ ನಿಶ್ಚಯಿಸಲ್ಪಟ್ಟಿದೆಯೋ; ಯಃ=ಯಾವನು; ಅಂತರಿಕ್ಷೇ=ಅಂತರಿಕ್ಷಲೋಕದಲ್ಲಿ; ರಜಸಃ=ರಜೋಗುಣಪ್ರಧಾನರಾದ ಯಕ್ಷಗಂಧರ್ವಾದಿಗಳನ್ನು; ವಿಮಾನಃ=ನಿರ್ಮಿಸಿರುವನೋ; ಕಸ್ಮೈ ದೇವಾಯ=ಅಂತಹ ಅನಿರ್ವಾಚ್ಯನಾದ ಪ್ರಜಾಪತಿದೇವನಿಗೆ; ಹವಿಷಾ ವಿಧೇಮ=ಪ್ರಾಜಾಪತ್ಯಪಶುಯಾಗದ ಹವಿಸ್ಸುಗಳನ್ನು ಅರ್ಪಿಸುವೆವು.

ಮೋಕ್ಷವೂ, ಮರಣವೂ ನೆರಳಿನಂತೆ ಅವನ ಅಧೀನವಾಗಿರುತ್ತವೆ. ಇಂತಹ ಪ್ರಜಾಪತಿದೇವನಿಗೆ ವಪಾರೂಪವಾದ ಹವಿಸ್ಸನ್ನು ಅರ್ಪಿಸುತ್ತೇವೆ.

ಹಿಮವದಾದಿಪರ್ವತಗಳೂ, ಭೂಮಿಯೂ, ಸಮುದ್ರಗಳೂ, ದಿಕ್ಕು-ವಿದಿಕ್ಕುಗಳೂ

ಆಪೋ ಹ ಯನ್ಮಹತೀರ್ವಿಶ್ವ[ವಿಶ್ವಮ್(೩೩)ಆಯನ್ದ]

ಮಾಯನ್ದಕ್ಷಂ ದಧಾನಾ ಜನಯಂತೀರಗ್ನಿಮ್ । ತತೋ

ದೇವಾನಾಂ ನಿರವರ್ತತಾಸುರೇಕಃ ಕಸ್ಮೈ ದೇವಾಯ

ಹವಿಷಾ ವಿಧೇಮ ।

---

ಆಪಃ । ಹ । ಯತ್ । ಮಹತೀಃ । ವಿಶ್ವಮ್ ।(೩೩)। ಆಯನ್ । ದಕ್ಷಮ್ । ದಧಾನಾಃ ।

ಜನಯಂತೀಃ । ಅಗ್ನಿಮ್ ॥ ತತಃ । ದೇವಾನಾಮ್ । ನಿರಿತಿ । ಅವರ್ತತ । ಅಸುಃ ।

ಏಕಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಆಪೋ ಹ...ವಿಧೇಮ ॥ | ಪ್ರಾಜಾಪತ್ಯಪಶುಯಾಗದ ಸಂಬಂಧಿ ಹವಿರ್ಯಾಗದ ಯಾಜ್ಯಾನುವಾಕ್ಯೆ. |

---

✦ಯತ್=ಯಾವ ಪ್ರಜಾಪತಿಯ ಅನುಗ್ರಹದಿಂದ; ದಕ್ಷಮ್ ದಧಾನಾಃ=ಚಯನ ಸಮರ್ಥನಾದ ಯಜಮಾನನನ್ನು ಧರಿಸಿರುವ; ಅಗ್ನಿಮ್=ಚಯನಾಗ್ನಿಯನ್ನು; ಜನಯಂತೀಃ=ಉಂಟು ಮಾಡುವ; ಮಹತೀಃ=ಮಹತ್ತಾಗಿರುವ; ಆಪಃ ಹ=ನೀರುಗಳೇ; ವಿಶ್ವಮ್=ವಿಶ್ವಾಕಾರವನ್ನು; ಆಯನ್=ಹೊಂದಿವೆಯೋ; ತತಃ=ಆ ಪ್ರಜಾಪತಿಯಿಂದ; ದೇವಾನಾಮ್=ದೇವಾದಿಗಳ; ಅಸುಃ ಏಕಃ=ಜೀವನಕಾರಣವಾದ ಪ್ರಾಣವು; ನಿರವರ್ತತ=ನಿಷ್ಪನ್ನವಾಯಿತು; ಕಸ್ಮೈ ದೇವಾಯ=ಅಂತಹ ಅನಿರ್ವಾಚ್ಯನಾದ ಪ್ರಜಾಪತಿದೇವನಿಗೆ; ಹವಿಷಾ ವಿಧೇಮ=ಈ ಹವಿಸ್ಸನ್ನು ಸಮರ್ಪಿಸುವೆವು.

---

ಪ್ರಜಾಪತಿಯ ಅಧೀನವಾಗಿವೆ. ಧರ್ಮ–ಅಧರ್ಮಗಳು ಆತನ ತೋಳುಗಳಾಗಿವೆ. ಇಂತಹ ಮಹಿಮೆಯಿಂದ ಕೂಡಿರುವ ಪ್ರಜಾಪತಿಗೆ ಪಶುಪುರೋಡಾಶಹವಿಸ್ಸನ್ನು ಸಮರ್ಪಿಸುತ್ತೇವೆ.

ಯಶ್ಚಿದಾಪೋ ಮಹಿನಾ ಪರ್ಯಪಶ್ಯದ್ದಕ್ಷಂ ದಧಾನಾ ಜನಯಂತೀರಗ್ನಿಮ್ । ಯೋ ದೇವೇಷ್ವಧಿ ದೇವ ಏಕ ಆಸೀತ್ಕಸ್ಮೈ ದೇವಾಯ ಹವಿಷಾ ವಿಧೇಮ ॥ ೩೪-8 ॥

[ಅಗ್ನೇಸ್ಸ ಸರಸ್ವತೀ ದ್ಯಾಗ್ಂ ಸಹ ವಿಶ್ವಂ ಚತುಸ್ತ್ರಿಗ್ಂಶಚ್ಚ ॥]

---

ಯಃ । ಚಿತ್ । ಆಪಃ । ಮಹಿನಾ । ಪರ್ಯಪಶ್ಯದಿತಿ ಪರಿ-ಅಪಶ್ಯತ್ । ದಕ್ಷಮ್ । ದಧಾನಾಃ । ಜನಯಂತೀಃ । ಅಗ್ನಿಮ್ ॥ ಯಃ । ದೇವೇಷು । ಅಧೀತಿ । ದೇವಃ । ಏಕಃ । ಆಸೀತ್ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥ ೩೪ ॥

---

| ಮಂತ್ರ | ವಿನಿಯೋಗ |
|---|---|
| ಯಶ್ಚಿದಾಪೋ...ವಿಧೇಮ ॥ | ಮೇಲಿನ ಹವಿರ್ಯಾಗದ ವೈಕಲ್ಪಿಕವಾದ ಯಾಜ್ಯಾನುವಾಕ್ಯೆ. |

---

✦ ಯಃ ಚಿತ್=ಯಾವ ಪ್ರಜಾಪತಿಯೇ; ದಕ್ಷಮ್ ದಧಾನಾಃ=ಯಾಗಕುಶಲನಾದ ಯಜಮಾನನನ್ನು ಧರಿಸಿರುವ; ಅಗ್ನಿಮ್ ಜನಯಂತೀಃ=ಅಗ್ನಿಯನ್ನು ಉತ್ಪತ್ತಿ ಮಾಡಿರುವ; ಆಪಃ=ನೀರುಗಳನ್ನು; ಮಹಿನಾ=ತನ್ನ ಮಹಿಮೆಯಿಂದ; ಪರ್ಯಪಶ್ಯತ್=[ಎಲ್ಲವನ್ನೂ ಸೃಷ್ಟಿಸುವ ಸಾಮರ್ಥ್ಯವುಂಟಾಗುವಂತೆ] ನೋಡಿದನೋ; ಯಃ=ಯಾವ ಪ್ರಜಾಪತಿಯು; ದೇವೇಷು=ದೇವತೆಗಳಲ್ಲಿ; ಏಕಃ ಅಧಿ ದೇವಃ ಆಸೀತ್=ಒಬ್ಬನೇ ಅಧಿಕನಾದ ದೇವನಾಗಿರುವನೋ; ಕಸ್ಮೈ ದೇವಾಯ=ಅಂತಹ ಅನಿರ್ವಾಚ್ಯನಾದ ಪ್ರಜಾಪತಿದೇವನಿಗೆ; ಹವಿಷಾ ವಿಧೇಮ=ಈ ಹವಿಸ್ಸನ್ನು ಅರ್ಪಿಸಿ ಪೂಜಿಸುತ್ತೇವೆ.

ದ್ಯಾವಾಪೃಥಿವಿಗಳು ದೇವತೆಗಳು ಮತ್ತು ಮಾನವಾದಿಗಳು ಇವರ ವಾಸಕ್ಕಾಗಿ ಪ್ರಜಾಪತಿಯಿಂದ ದೃಢವಾಗಿ ಮಾಡಲ್ಪಟ್ಟಿವೆ. ದೇವಾದಿಗಳು ತಮ್ಮ ರಕ್ಷಣೆಗಾಗಿ ಪ್ರಜಾಪತಿಯನ್ನೇ ಎದುರು ನೋಡುತ್ತಾರೆ. ಸೂರ್ಯನ ವಿವಿಧಗತಿಗಳೂ ಪ್ರಜಾಪತಿಯನ್ನೇ ಆಶ್ರಯಿಸಿವೆ. ಅಂತಹ ಪ್ರಜಾಪತಿಗೆ ಈ ಪ್ರಾಜಾಪತ್ಯಪಶುಪುರೋಡಾಶ ಹವಿಸ್ಸನ್ನು ಅರ್ಪಿಸುವೆವು.

ಪ್ರಜಾಪತಿಯು ಪುಣ್ಯವಂತರಿಗೂ ಜ್ಞಾನಿಗಳಿಗೂ ಆಶ್ರಯವಾದ ಲೋಕಗಳನ್ನು ಸೃಷ್ಟಿಸಿರುತ್ತಾನೆ. ಅವನೇ ರಜಃಪ್ರಧಾನರಾದ ಗಂಧರ್ವಯಕ್ಷಾದಿಗಳನ್ನೂ ಸೃಷ್ಟಿಸಿರುತ್ತಾನೆ. ಅವನಿಗೆ ನಾವು ಹವಿಸ್ಸನ್ನು ಕೊಡುತ್ತೇವೆ.

ಚಯನಯಾಗದ ಯಜಮಾನನನ್ನು ಧರಿಸಿರುವ, ಚಯನಾಗ್ನಿಯನ್ನೂ ಉಂಟು ಮಾಡಿರುವ ಮಹಾಪ್ರಭಾವದ ನೀರುಗಳು ಪ್ರಜಾಪತಿಯಿಂದಲೇ ವಿಶ್ವಾಕಾರವನ್ನು ಪಡೆದಿವೆ. ಸೃಷ್ಟಿಯ ಕ್ರಮದಲ್ಲಿ **'ಅಪ ಏವ ಸಸರ್ಜಾದೌ' [ಮನುಸ್ಮೃತಿ 1. 8. 9]** ಎಂದು ಹೇಳಿದೆ.

ಪ್ರಜಾಪತಿಯೇ ದೇವಾದಿಗಳಲ್ಲಿ ಪ್ರಾಣವನ್ನೂ ಉಂಟುಮಾಡಿರುತ್ತಾನೆ. ಆತನಿಗೆ ಈ ಹವಿಸ್ಸನ್ನು ಅರ್ಪಿಸುವೆವು.

ಪ್ರಜಾಪತಿಯೇ ನೀರುಗಳನ್ನು ಸೃಷ್ಟಿಸಿದನು, ಆ ನೀರುಗಳೇ ಯಜಮಾನನನ್ನು ಧರಿಸಿವೆ. ಅಗ್ನಿಯನ್ನು ಉತ್ಪಾದಿಸಿವೆ, ವಿಶ್ವವನ್ನೂ ಉತ್ಪಾದಿಸಿವೆ. ಈ ಧಾರಣೋತ್ಪಾದನಶಕ್ತಿಯು ಅವುಗಳಲ್ಲಿ ಉಂಟಾಗುವಂತೆ ಪ್ರಜಾಪತಿಯು ಕಟಾಕ್ಷದಿಂದ ನೋಡಿದನು. ಅವನೇ ದೇವತೆಗಳಲ್ಲಿ ಅಧಿಕನಾಗಿದ್ದಾನೆ. ಆತನು ಈ ಹವಿಸ್ಸನ್ನು ಸ್ವೀಕರಿಸಲಿ. ನಮ್ಮ ಕಾಮನೆಗಳನ್ನು ಪೂರ್ಣಗೊಳಿಸಲಿ.

---

## ವಿನಿಯೋಗಸಂಗ್ರಹ

1-12ಊರ್ಧ್ವಾಃ ಪ್ರಧಾನಯಾಜ್ಯಾಃ ಸ್ಯುರ್ದ್ವಾದಶಾಽಽಪ್ರೀತಿನಾಮಕಾಃ ।
13 ಹಿರಣ್ಯ ಬ್ಯಾಘಾರಹೋಮೋ 14-19ಯಃ ಪ್ರಾಣೇತಿ ದ್ವಯಂ ದ್ವಯಮ್ ॥
ಯಾಜ್ಯಾನುವಾಕ್ಯೇ ಹಿ ವಪಾ–ಪುರೋಡಾಶ–ಹವಿಃಷು ತಾಃ ।
20ಯಶ್ಚಿದ್ವಿಕಲ್ಪಿತೋ ಮಂತ್ರ ಇತಿ ವಿಂಶತಿರೀರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–20**

## ॥ ನವಮೋಽನುವಾಕಃ ॥

ಆಕೂತಿಮಗ್ನಿಂ ಪ್ರಯುಜಗ್ಂ ಸ್ವಾಹಾ

---

ಆಕೂತಿಮಿತ್ಯಾ-ಕೂತಿಮ್ । ಅಗ್ನಿಮ್ । ಪ್ರಯುಜಮಿತಿ ಪ್ರ-ಯುಜಮ್ । ಸ್ವಾಹಾ ।

---

ಎಂಟನೆಯ ಅನುವಾಕದಲ್ಲಿ ಆಪ್ರೀಸೂಕ್ತಗಳು ಹೇಳಲ್ಪಟ್ಟವು. ಈ ಒಂಬತ್ತನೆಯ ಅನುವಾಕದಲ್ಲಿ ಅಗ್ನ್ಯುತ್ಪಾದನೆಯು ಹೇಳಲ್ಪಡುತ್ತದೆ.



---

| ಮಂತ್ರ | ವಿನಿಯೋಗ |
|---|---|
| ಆಕೂತಿಮಗ್ನಿಂ...ಸ್ವಾಹಾ ॥ | |
| ಮನೋ ಮೇಧಾಂ...ಸ್ವಾಹಾ ॥ | |
| ಚಿತ್ತಂ ವಿಜ್ಞಾತಂ...ಸ್ವಾಹಾ ॥ | ಅಗ್ನಿದೇವತಾಕವಾದ ಆರು ಆಹುತಿಗಳನ್ನು ಅರ್ಪಿಸಲು. |
| ವಾಚೋ ವಿಧೃತಿಂ...ಸ್ವಾಹಾ ॥ | |
| ಪ್ರಜಾಪತಯೇ...ಸ್ವಾಹಾ ॥ | |
| ಅಗ್ನಯೇ...ಸ್ವಾಹಾ ॥ | |

---

✦ಆಕೂತಿಮ್=[ನಮ್ಮ ಅನುಷ್ಠಾನವಿಷಯಕವಾದ] ಸಂಕಲ್ಪವನ್ನು; ಪ್ರಯುಜಮ್=ಪ್ರೇರೇಪಿಸುವ; ಅಗ್ನಿಮ್=ಅಗ್ನಿಯನ್ನು ಉದ್ದೇಶಿಸಿ; ಸ್ವಾಹಾ=ಈ ಆಹುತಿಯು ಚೆನ್ನಾಗಿ ಹುತವಾಗಲಿ.

# ಮನೋ ಮೇಧಾಮಗ್ನಿಂ ಪ್ರಯುಜಗ್ಂ ಸ್ವಾಹಾ ಚಿತ್ತಂ ವಿಜ್ಞಾತಮಗ್ನಿಂ ಪ್ರಯುಜಗ್ಂ ಸ್ವಾಹಾ ವಾಚೋ ವಿಧೃತಿಮಗ್ನಿಂ ಪ್ರಯುಜಗ್ಂ ಸ್ವಾಹಾ

---

ಮನಃ । ಮೇಧಾಮ್ । ಅಗ್ನಿಮ್ । ಪ್ರಯುಜಮಿತಿ ಪ್ರ–ಯುಜಮ್ । ಸ್ವಾಹಾ । ಚಿತ್ತಮ್ । ವಿಜ್ಞಾತಮಿತಿ ವಿ–ಜ್ಞಾತಮ್ । ಅಗ್ನಿಮ್ । ಪ್ರಯುಜಮಿತಿ ಪ್ರ–ಯುಜಮ್ । ಸ್ವಾಹಾ । ವಾಚಃ । ವಿಧೃತಿಮಿತಿ ವಿ–ಧೃತಿಮ್ । ಅಗ್ನಿಮ್ । ಪ್ರಯುಜಮಿತಿ ಪ್ರ–ಯುಜಮ್ । ಸ್ವಾಹಾ ।

---

✦ಮನಃ=[ಅನುಷ್ಠೇಯಸ್ಮರಣಸಾಧನವಾದ] ಮನಸ್ಸನ್ನೂ; ಮೇಧಾಮ್= [ಸ್ಮೃತವಾದುದನ್ನು ಧಾರಣ ಮಾಡುವ ಸಾಮರ್ಥ್ಯರೂಪವಾದ]ಮೇಧೆಯನ್ನು; ಪ್ರಯುಜಮ್ ಅಗ್ನಿಮ್=ಪ್ರೇರಿಸುವ ಅಗ್ನಿದೇವತೆಗಾಗಿ; ಸ್ವಾಹಾ=ಈ ಆಹುತಿಯು ಚೆನ್ನಾಗಿ ಹುತವಾಗಲಿ. ✦ವಿಜ್ಞಾತಮ್ ಚಿತ್ತಮ್=ತಿಳಿಯದ ಅನುಷ್ಠಾನವನ್ನು ತಿಳಿಯಬಲ್ಲ ಚಿತ್ತವನ್ನೂ [ಅದರಿಂದ ತಿಳಿದ ಅನುಷ್ಠಾನವನ್ನೂ] ಪ್ರಯುಜಮ್=ಪ್ರೇರಿಸುವ; ಅಗ್ನಿಮ್ ಸ್ವಾಹಾ=ಅಗ್ನಿಗೆ ಇದು ಹುತವಾಗಲಿ. ✦ವಾಚಃ ವಿಧೃತಿಮ್=ಮಂತ್ರರೂಪವಾದ ವಾಕ್ಕನ್ನು ಧರಿಸುವುದನ್ನು; ಪ್ರಯುಜಮ್ ಅಗ್ನಿಮ್ ಸ್ವಾಹಾ=ಪ್ರೇರಿಸುವ ಅಗ್ನಿಯನ್ನು ಉದ್ದೇಶಿಸಿ ಮಾಡುವ ಈ ಹೋಮವು ಚೆನ್ನಾಗಿ ಹುತವಾಗಲಿ.

---

ಅಗ್ನಿದೇವತಾಕವಾದ ಈ ಹೋಮದಲ್ಲಿ ವಿನಿಯುಕ್ತವಾಗಿರುವ ಈ ಮಂತ್ರಗಳಲ್ಲಿ ಆಕೂತಿ–ಮನಸ್ಸು–ಮೇಧಾ–ಚಿತ್ತ ಇವುಗಳ ವಿವರಣೆಯು ಇದೆ.

ದೀಕ್ಷಾಹುತಿಗಿಂತಲೂ ಮೊದಲು ಈ ಆರು ಆಹುತಿಗಳನ್ನು ಅಗ್ನಿಯಲ್ಲಿ ಸಮರ್ಪಿಸಬೇಕು. ಇವು ಅಗ್ನಿದೇವತಾಕಗಳಾಗಿವೆಯೆಂದು ಹೇಳಲಾಗಿದೆ. ಅಗ್ನಿದೇವತಾಕವಾದ ಹೋಮಗಳೇ ಅಧಿಕವಾಗಿ ಇರುವುದರಿಂದ ಗೌಣೀ ರೀತಿಯಿಂದ ಇವುಗಳಿಗೂ ಸಹ

ಪ್ರಜಾಪತಯೇ ಮನವೇ ಸ್ವಾಹಾಽಗ್ನಯೇ ವೈಶ್ವಾನರಾಯ ಸ್ವಾಹಾ ವಿಶ್ವೇ ದೇವಸ್ಯ ನೇತುರ್ಮರ್ತೋ ವೃಣೀತ ಸಖ್ಯಂ ವಿಶ್ವೇ ರಾಯ ಇಷುಧ್ಯಸಿ ದ್ಯುಮ್ನಂ ವೃಣೀತ ಪುಷ್ಯಸೇ ಸ್ವಾಹಾ

ಪ್ರಜಾಪತಯ ಇತಿ ಪ್ರಜಾ-ಪತಯೇ। ಮನವೇ। ಸ್ವಾಹಾ। ಅಗ್ನಯೇ। ವೈಶ್ವಾನರಾಯ। ಸ್ವಾಹಾ। ವಿಶ್ವೇ। ದೇವಸ್ಯ। ನೇತುಃ। ಮರ್ತಃ। ವೃಣೀತ। ಸಖ್ಯಮ್। ವಿಶ್ವೇ। ರಾಯಃ। ಇಷುಧ್ಯಸಿ। ದ್ಯುಮ್ನಮ್। ವೃಣೀತ। ಪುಷ್ಯಸೇ। ಸ್ವಾಹಾ।

| ಮಂತ್ರ | ವಿನಿಯೋಗ |
| --- | --- |
| ವಿಶ್ವೇ ದೇವಸ್ಯ....ಪುಷ್ಯಸೇ ಸ್ವಾಹಾ ॥ | ಪೂರ್ಣಾಹುತಿಯನ್ನು ಮಾಡಲು. |

✦ಮನವೇ=ಮಾನವರ ಜನಕನಾದ; ಪ್ರಜಾಪತಯೇ=ಪ್ರಜಾಪತಿದೇವನಿಗೆ; ಸ್ವಾಹಾ=ಇದು ಚೆನ್ನಾಗಿ ಹುತವಾಗಲಿ.✦ವೈಶ್ವಾನರಾಯ=ಎಲ್ಲಾ ಮಾನವರನ್ನೂ ಅನುಗ್ರಹಿಸುವ ವೈಶ್ವಾನರರೂಪನಾದ; ಅಗ್ನಯೇ ಸ್ವಾಹಾ=ಅಗ್ನಿಗೆ ಇದು ಚೆನ್ನಾಗಿ ಹುತವಾಗಲಿ.✦ವಿಶ್ವೇ=ವಿಶ್ವಾತ್ಮಕನಾದ; ದೇವಸ್ಯ ನೇತುಃ=ವಿಶ್ವಕ್ಕೆ ನಿಯಂತೃವಾದ ಪ್ರಜಾಪತಿದೇವನ; ಸಖ್ಯಮ್=ಮೈತ್ರಿಯನ್ನು; ಮರ್ತಃ=ಮಾನವನಾದ [ಯಜಮಾನನು]; ವೃಣೀತ=ಕೇಳಿಕೊಳ್ಳಬೇಕು; ವಿಶ್ವೇ ರಾಯಃ=[ಇದು] ವಿಶ್ವಾತ್ಮಕವಾದ; ರಾಯಃ ಇಷುಧ್ಯಸಿ=ಧನಕ್ಕೆ ಒಡೆಯನಾಗಿದ್ದೀಯೆ [ಎಂಬ ಸ್ತುತಿಯಿಂದ ಸಾಧ್ಯವಾಗುತ್ತದೆ;] ಪುಷ್ಯಸೇ=ಯಜ್ಞಪೋಷಣೆಗಾಗಿ; ದ್ಯುಮ್ನಮ್ ವೃಣೀತ=ಧನವನ್ನು ಕೇಳಿಕೊಳ್ಳುವೆನು] ಸ್ವಾಹಾ=ಇದು ಆತನಿಗೆ ಹುತವಾಗಲಿ.

ಅಗ್ನಿಯೇ ದೇವತೆಯೆಂದು ಹೇಳಬಹುದು. ಈ ಮಂತ್ರಗಳಲ್ಲಿ ಬರುವ ಚಿತ್ತ-ಮನ-ಆಕೂತಿ-ಮುಂತಾದವುಗಳ ಅರ್ಥವಿಶೇಷವನ್ನು ಅರ್ಥದಲ್ಲಿಯೇ ವಿವರಿಸಲಾಗಿದೆ.

ಕೊನೆಯ ಮಂತ್ರದಲ್ಲಿನ 'ವಿಶ್ವೇ' ಎಂಬ ಪದಕ್ಕೆ 'ವಿಶ್ವಸ್ಯ' ಎಂದು ಭಾಷ್ಯಕಾರರು

# ಮಾ ಸು ಭಿತ್ಥಾ ಮಾ ಸು ರಿಷೋ ದೃಗ್ಂಹಸ್ವ ವೀಡಯಸ್ವ ಸು । ಅಂಬ ಧೃಷ್ಣು ವೀರಯಸ್ವಾ [ವೀರಯಸ್ವ(೩೫)ಅಗ್ನಿಶ್ಚೇ]ಗ್ನಿಶ್ಚೇದಂ ಕರಿಷ್ಯಥಃ ॥

---

ಮಾ । ಸ್ವಿತಿ । ಭಿತ್ಥಾಃ । ಮಾ । ಸ್ವಿತಿ । ರಿಷಃ । ದೃಗ್ಂಹಸ್ವ । ವೀಡಯಸ್ವ । ಸು ॥ ಅಂಬ । ಧೃಷ್ಣು । ವೀರಯಸ್ವ ।(೩೫)। ಅಗ್ನಿಃ । ಚ । ಇದಮ್ । ಕರಿಷ್ಯಥಃ ।

---

| ಮಂತ್ರ | ವಿನಿಯೋಗ |
| --- | --- |
| ಮಾ ಸು ಭಿತ್ಥಾಃ...ಕರಿಷ್ಯಥಃ ॥ | ಉಖೆಯನ್ನು ಕಾಯಿಸುವುದಕ್ಕಾಗಿ ಆಹವನೀಯದಲ್ಲಿ ಇಡಲು ಪ್ರಥಮಮಂತ್ರ. |

---

✦[ಉಖೆಯೇ!]ಮಾ ಭಿತ್ಥಾಃ=ಒಡೆದು ಹೋಗಬೇಡ; ಸು=ಚೆನ್ನಾಗಿ ಒಡೆಯದೆ ಇರು; ಮಾ ರಿಷಃ=ಒಂದು ಭಾಗವೂ ಹೋಳಾಗದಂತೆ ಇರು; ಸು=ಚೆನ್ನಾಗಿರು; ದೃಗ್ಂಹಸ್ವ=ದೃಢವಾಗಿರು/ಒಡೆಯದಿರು. ಸು ವೀಡಯಸ್ವ=ಸೀಳದಿರು, ಚೆನ್ನಾಗಿರು; ಅಂಬ= ಮಾತೃಸಮಳಾದ ಉಖೆಯೇ! ಧೃಷ್ಣು=ಧರ್ಷಣವನ್ನು ಸಹಿಸಬಲ್ಲವಳೇ! ವೀರಯಸ್ವ=ವೀರನಂತೆ ನಡೆದುಕೋ; ಅಗ್ನಿಃ ಚ=ನೀನೂ ಮತ್ತು ಅಗ್ನಿಯೂ; ಇದಮ್ = ಈ ಯಾಗಕರ್ಮವನ್ನು; ಕರಿಷ್ಯಥಃ=ನಡೆಸಿಕೊಡುತ್ತೀರಿ/ನೆರವೇರಿಸಿಕೊಡಿ.

---

ವಿವರಿಸಿರುತ್ತಾರೆ.

ಎಲೈ! ಉಖೆಯೇ! ನೀನು ಒಡೆದು ಹೋಗದೇ ಚೆನ್ನಾಗಿರು. ಬಿರುಕು ಬಿಡದಂತೆಯೂ ಇರು. ನೀನು ಗಟ್ಟಿಯಾಗಿ ಇದ್ದು. ಅಗ್ನಿಯೊಡನೆ ಸೇರಿ ಈ ಯಾಗಕರ್ಮವನ್ನು ನಡೆಸಿಕೊಡು.

ಎರಡು ಭಾಗವಾಗಿ ಸೀಳುವುದು ಭೇದ. ಒಂದು ಚೂರು ಒಡೆಯುವುದು ಸ್ಫೋಟ. ಇವೆರಡೂ ಆಗದಿರಲಿ.

ದೃಗ್ಂಹಸ್ವ ದೇವಿ ಪೃಥಿವಿ ಸ್ವಸ್ತಯ ಆಸುರೀ ಮಾಯಾ ಸ್ವಧಯಾ ಕೃತಾಸಿ । ಜುಷ್ಟಂ ದೇವಾನಾಮಿದಮಸ್ತು ಹವ್ಯಮರಿಷ್ಟಾ ತ್ವಮುದಿಹಿ ಯಜ್ಞೇ ಅಸ್ಮಿನ್ನ್ ॥

---

ದೃಗ್ಂಹಸ್ವ । ದೇವಿ । ಪೃಥಿವಿ । ಸ್ವಸ್ತಯೇ । ಆಸುರೀ । ಮಾಯಾ । ಸ್ವಧಯೇತಿ ಸ್ವ-ಧಯಾ । ಕೃತಾ । ಅಸಿ ॥ ಜುಷ್ಟಮ್ । ದೇವಾನಾಮ್ । ಇದಮ್ । ಅಸ್ತು । ಹವ್ಯಮ್ । ಅರಿಷ್ಟಾ । ತ್ವಮ್ । ಉದಿತಿ । ಇಹಿ । ಯಜ್ಞೇ । ಅಸ್ಮಿನ್ನ್ ॥

---

| ಮಂತ್ರ | ವಿನಿಯೋಗ |
|---|---|
| ದೃಗ್ಂಹಸ್ವ...ಅಸ್ಮಿನ್ನ್ ॥ | ಆಹವನೀಯದಲ್ಲಿ ಉಖೆಯನ್ನು ಇಡಲು ಕೊನೆಯ ಮಂತ್ರ. |

---

✦**ದೇವಿ**=[ಮಂತ್ರಪ್ರತಿಪಾದ್ಯಳಾಗಿ;] ದೇವಿಯೂ; **ಪೃಥಿವಿ**=[ಪೃಥಿವೀಕಾರ್ಯವಾದುದರಿಂದ] ಪೃಥಿವಿಯೂ ಆಗಿರುವ ಉಖೆಯೇ! **ದೃಗ್ಂಹಸ್ವ**=ದೃಢವಾಗಿರು/ಒಡೆಯದಿರು. **ಸ್ವಸ್ತಯೇ**=ಯಜಮಾನನ ಕಲ್ಯಾಣಾರ್ಥವಾಗಿ; **ಆಸುರೀ ಮಾಯಾ**=[ಇಲ್ಲದಿರುವುದನ್ನು ಒಡನೆಯೇ ಸೃಷ್ಟಿಸುವ] ಅಸುರರ ಮಾಯೆಯಂತೆ; ***ಸ್ವಧಯಾ**=ಅನ್ನನಿಮಿತ್ತವಾಗಿ; **ಕೃತಾ ಅಸಿ**=ನಿರ್ಮಿತಳಾಗಿದ್ದೀಯೆ; **ಇದಮ್ ಹವ್ಯಮ್**=ಈ ಅನ್ನರೂಪವಾದ ಹವಿಸ್ಸು; **ದೇವಾನಾಮ್ ಜುಷ್ಟಮ್**=ದೇವತೆಗಳಿಗೆ ಪ್ರಿಯವಾಗಿ; **ಅಸ್ತು**=ಆಗಲಿ; **ಅಸ್ಮಿನ್ ಯಜ್ಞೇ**=ಈ ಯಜ್ಞದಲ್ಲಿ; **ತ್ವಮ್**=ನೀನು; **ಅರಿಷ್ಟಾ**=ಹಿಂಸೆಯಿಲ್ಲದವಳಾಗಿ; **ಉದಿಹಿ**=ಮೇಲೆ ಬಾ.

---

*ಪಿತೃಗಳಿಗೆ ಸಮರ್ಪಿಸುವ ವಸ್ತು 'ಸ್ವಧೆ' ಎನಿಸುತ್ತದೆ. ಇಲ್ಲಿ ಸ್ವಧಾಶಬ್ದವು ಅನ್ನಸಾಮಾನ್ಯವನ್ನು ಹೇಳುತ್ತದೆ.

ಮಿತ್ರೈತಾಮುಖಾಂ ತಪ್ಯೈಷಾ ಮಾ ಭೇದಿ । ಏತಾಂ ತೇ ಪರಿದದಾಮ್ಯಭಿತ್ತ್ಯೈ ॥ ದ್ರ್ವನ್ನಸ್ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ । ಸಹಸಸ್ಪುತ್ರೋ ಅದ್ಭುತಃ ॥

---

ಮಿತ್ರ । ಏತಾಮ್ । ಉಖಾಮ್ । ತಪ । ಏಷಾ । ಮಾ । ಭೇದಿ ॥ ಏತಾಮ್ । ತೇ । ಪರೀತಿ । ದದಾಮಿ । ಅಭಿತ್ತ್ಯೈ ॥ ದ್ರ್ವನ್ನ ಇತಿ ದ್ರು–ಅನ್ನಃ । ಸರ್ಪಿರಾಸುತಿರಿತಿ ಸರ್ಪಿಃ–ಆಸುತಿಃ । ಪ್ರತ್ನಃ । ಹೋತಾ । ವರೇಣ್ಯಃ ॥ ಸಹಸಃ । ಪುತ್ರಃ । ಅದ್ಭುತಃ ॥

---

| ಮಂತ್ರ | ವಿನಿಯೋಗ |
|---|---|
| ಮಿತ್ರೈತಾ...ಅಭಿತ್ತ್ಯೈ ॥ | ಉಖೆಯ ಮೇಲೆ ಕೆಂಡಗಳನ್ನು ಹಾಕಲು |
| ದ್ರ್ವನ್ನ...ಅದ್ಭುತಃ ॥ | ತುಪ್ಪದಿಂದ ನೆನೆಸಿದ ಆರಳಿಮರದ ಕಡ್ಡಿಯನ್ನೂ ಒಣಗಿದ ನೊಜೆ ಹುಲ್ಲನ್ನೂ ಉಖೆಯಲ್ಲಿ ಹಾಕಲು. |

---

✦ಮಿತ್ರ=ಮಿತ್ರದೇವನೇ! ಏತಾಮ್ ಉಖಾಮ್=ಈ ಉಖೆಯನ್ನು; ತಪ= ಕಾಯಿಸು; ಏಷಾ ಮಾ ಭೇದಿ=ಇದು ಒಡೆಯದಿರಲಿ; ಏತಾಮ್=ಈ ಉಖೆಯನ್ನು; ಅಭಿತ್ತ್ಯೈ=ಒಡೆಯದಿರುವುದಕ್ಕಾಗಿ; ತೇ=ನಿನ್ನ [ಕೈಗೆ] ಪರಿದದಾಮಿ=[ರಕ್ಷಣೆಗಾಗಿ ಕೊಡುತ್ತೇನೆ] ✦ದ್ರ್ವನ್ನಃ=ಈ ಅಗ್ನಿಯು ಮರಗಳೇ/ಕಟ್ಟಿಗೆಗಳೇ ಅನ್ನವಾಗಿರುವವನು; ಸರ್ಪಿರಾಸುತಿಃ=ಘೃತಾಹುತಿಗಳಿಗೆ ಆಶ್ರಯವಾಗಿರುವವನು; ಪ್ರತ್ನಃ=ಪುರಾತನನಾದವನು ಹೋತಾ=[ದೇವತೆಗಳನ್ನು]ಆಹ್ವಾನಿಸುವವನು; ವರೇಣ್ಯಃ=ಯಾಗಾದಿಗಳಿಗಾಗಿ ಆರಿಸಿ ಕೊಳ್ಳಬೇಕಾದವನು/ಶ್ರೇಷ್ಠನು. ಸಹಸಃ=ಬಲದ; ಪುತ್ರಃ=ಮಗನು; ಅದ್ಭುತಃ= ವಿವಿಧ ರೂಪಗಳು ಇರುವುದರಿಂದ ಆಶ್ಚರ್ಯಜನಕನು.

---

ಆದರಾರ್ಥವಾಗಿ ಎರಡು ಬಾರಿ ಪ್ರಾರ್ಥನೆ. ಕರ್ಮವನ್ನು ನೆರವೇರಿಸಿಕೊಡಲು ಉಖೆಗೂ ಅಗ್ನಿಗೂ ಪ್ರಾರ್ಥನೆ.

ಪರಸ್ಯಾ ಅಧಿ ಸಂವತೋಽವರಾಗ್ಂ ಅಭ್ಯಾ[(೩೭)ತರ]

ತರ । ಯತ್ರಾಹಮಸ್ಮಿ ತಾಗ್ಂ ಅವ ॥

---

ಪರಸ್ಯಾಃ । ಅಧೀತಿ । ಸಂವತ ಇತಿ ಸಂ-ವತಃ । ಅವರಾನ್ । ಅಭಿ । ಏತಿ ।(೩೭)।

ತರ । ಯತ್ರ । ಅಹಮ್ । ಅಸ್ಮಿ । ತಾನ್ । ಅವ ॥

---

| ಮಂತ್ರ | ವಿನಿಯೋಗ |
|---|---|
| ಪರಸ್ಯಾಃ...ಅವ ॥ | ಹುಳಿಬೇಲದ ಸಮಿತ್ತನ್ನು ಉಖೆಯಲ್ಲಿ ಹಾಕಲು. |

---

✦[ಅಗ್ನಿಯೇ!] ಪರಸ್ಯಾಃ=ಉತ್ಕೃಷ್ಟವಾದ; ಸಂವತಃ=ಇಷ್ಟಿಗೆ; ಅಧಿ=ಅಧಿಷ್ಠಾನವಾಗಿರುವ ನೀನು; ಅವರಾನ್=ಕನಿಷ್ಠರಾದ ನಮ್ಮನ್ನು; ಅಭಿ ಆ ತರ=ಅಭಿಮುಖವಾಗಿ ಬಂದು ರಕ್ಷಿಸು; ಯತ್ರ=ಯಾವ ಬಂಧುಗಳ ಮಧ್ಯದಲ್ಲಿ; ಅಹಮ್ ಅಸ್ಮಿ=ನಾನು ಇರುವೆನೋ; ತಾನ್=ಅವರನ್ನೂ ಅವ=ಕಾಪಾಡು;

---

ಹೇ! ಉಖೆಯೇ! ಮಂತ್ರಪ್ರತಿಪಾದ್ಯಳಾಗಿ ನೀನು ಪೃಥಿವಿಯೇ ಆಗಿರುವೆ. ನೀನು ಯಜಮಾನನ ಮಂಗಳಕ್ಕಾಗಿ ನಿರ್ಮಿತವಾಗಿರುವೆ. ನೀನು ಅನ್ನನಿಮಿತ್ತವಾಗಿರುವೆ. ಅಂತಹವಳಾದ ನೀನು ಮೇಲೆ ಬಾ.

ಕಾದಿರುವ ಉಖೆಯಲ್ಲಿ ನೊಜೆ ಮೊದಲಾದವುಗಳಿಂದ ಅಗ್ನಿಯು ಜನಿಸುತ್ತದೆ. ಆ ಅಗ್ನಿಯ ಸ್ತೋತ್ರವಿದಾಗಿದೆ.

ಈ ಅಗ್ನಿದೇವನು ಕಟ್ಟಿಗೆಗಳೇ ಅನ್ನವಾಗಿರುವವನಾಗಿದ್ದಾನೆ. ಆಹುತಿಗಳಿಗೆ ಆಶ್ರಯನೂ, ದೇವತೆಗಳನ್ನು ಯಾಗಕ್ಕೆ ಬರಮಾಡುವವನೂ ವರಣೀಯನೂ ಆಗಿದ್ದಾನೆ. ಜೋರಾಗಿ ಮಥನ ಮಾಡುವುದರಿಂದ ಆ ಅಗ್ನಿಯು ಜನನವಾಗುವುದರಿಂದ ಅವನು ಬಲನ ಪುತ್ರನೇ ಸರಿ. ಆತನ ರೂಪವು ಅದ್ಭುತವಾಗಿದೆ. ಇಂತಹ ಅಗ್ನಿಯು ಪ್ರಜ್ವಲಿತನಾಗಲಿ.

ಹೇ! ಅಗ್ನಿಯೇ! ನೀನು ಶ್ರೇಷ್ಠವಾದ ಇಷ್ಟಿಗೆ ಆಶ್ರಯನಾಗಿರುವೆ. ಕನಿಷ್ಠರಾದ ನಮ್ಮನ್ನೂ ನಮ್ಮ ಬಂಧುಗಳನ್ನೂ ಕಾಪಾಡು.

ಪರಮಸ್ಯಾಃ ಪರಾವತೋ ರೋಹಿದಶ್ವ ಇಹಾಗಹಿ । ಪುರೀಷ್ಯಃ ಪುರುಪ್ರಿಯೋಽಗ್ನೇ ತ್ವಂ ತರಾಮೃಧಃ ॥ ಸೀದ ತ್ವಂ ಮಾತುರಸ್ಯಾ ಉಪಸ್ಥೇ ವಿಶ್ವಾನ್ಯಗ್ನೇ ವಯುನಾನಿ ವಿದ್ವಾನ್ ।

---

ಪರಮಸ್ಯಾಃ । ಪರಾವತ ಇತಿ ಪರಾ-ವತಃ । ರೋಹಿದಶ್ವ ಇತಿ ರೋಹಿತ್-ಅಶ್ವಃ । ಇಹ । ಏತಿ । ಗಹಿ ॥ ಪುರೀಷ್ಯಃ । ಪುರುಪ್ರಿಯ ಇತಿ ಪುರು-ಪ್ರಿಯಃ । ಅಗ್ನೇ । ತ್ವಮ್ । ತರ । ಮೃಧಃ ॥ ಸೀದ । ತ್ವಮ್ । ಮಾತುಃ । ಅಸ್ಯಾಃ । ಉಪಸ್ಥ ಇತ್ಯುಪ-ಸ್ಥೇ । ವಿಶ್ವಾನಿ । ಅಗ್ನೇ । ವಯುನಾನಿ । ವಿದ್ವಾನ್ ॥

---

| ಮಂತ್ರ | ವಿನಿಯೋಗ |
| --- | --- |
| **ಪರಮಸ್ಯಾಃ...ಮೃಧಃ ॥** | ಶಮೀಮಯಸಮಿತ್ತನ್ನು ಹಾಕಲು. |
| **ಸೀದ...ಭಾಹಿ ॥** | ಉಖೆಯಲ್ಲಿ ಅಗ್ನಿಯ ಉಪಸ್ಥಾನಕ್ಕಾಗಿ. |

---

**ರೋಹಿದಶ್ವಃ**=ಕೆಂಪಾದ ಕುದುರೆಗಳುಳ್ಳ [ನೀನು]; **ಪರಮಸ್ಯಾಃ ಪರಾವತಃ**=ಅತ್ಯಂತ ದೂರದಿಂದ; **ಇಹ**=[ಈ ಯಾಗವೇದಿಯಲ್ಲಿ] ಇಲ್ಲಿಗೆ; **ಆ ಗಹಿ**=ಬಾ; **ಪುರೀಷ್ಯಃ**= ಮಣ್ಣಿನಿಂದ ಮಾಡಿರುವ ಉಖೆಯಲ್ಲಿರುವ; **ಪುರುಪ್ರಿಯಃ**=ಹಲವರು ಯಜಮಾನರಿಗೆ ಪ್ರಿಯನಾದ; **ಅಗ್ನೇ**=ಅಗ್ನಿಯೇ! **ತ್ವಮ್**=ನೀನು; **ಮೃಧಃ ತರ**=ಶತ್ರುಗಳನ್ನು ಸೋಲಿಸುವಂತೆ ಮಾಡು. ✦**ಅಗ್ನೇ**=ಅಗ್ನಿದೇವನೇ! **ಅಸ್ಯಾಃ ಮಾತುಃ**=ಮಾತೃಸಮಳಾದ ಉಖೆಯ; **ಉಪಸ್ಥೇ**=ತೊಡೆಯಲ್ಲಿ; **ತ್ವಮ್**=ನೀನು; **ಸೀದ**=ಕುಳ್ಳಿರು; [**ಅಗ್ನೇ**= ಅಗ್ನಿಯೇ!] **ವಿಶ್ವಾನಿ ವಯುನಾನಿ**=ಎಲ್ಲಾ ಜ್ಞಾನೋಪಾಯಗಳನ್ನೂ; **ವಿದ್ವಾನ್**= ತಿಳಿದಿರುವ ನೀನು;

ಮೈನಾಮರ್ಚಿಷಾ ಮಾ ತಪಸಾಽಭಿಶೂಶುಚೋಽಂತರಸ್ಯಾಗ್ಂ ಶುಕ್ರಜ್ಯೋತಿರ್ವಿಭಾಹಿ । ಅಂತರಗ್ನೇ ರುಚಾ ತ್ವಮುಖಾಯೈ ಸದನೇ ಸ್ವೇ ॥ ತಸ್ಯಾಸ್ತ್ವಗ್ಂ ಹರಸಾ ತಪಞ್ಜಾತವೇದ ಶ್ಶಿವೋ ಭವ ।

---

ಮಾ । ಏನಾಮ್ । ಅರ್ಚಿಷಾ । ಮಾ । ತಪಸಾ । ಅಭೀತಿ । ಶೂಶುಚಃ । ಅಂತಃ । ಅಸ್ಯಾಮ್ । ಶುಕ್ರಜ್ಯೋತಿರಿತಿ ಶುಕ್ರ-ಜ್ಯೋತಿಃ । ವೀತಿ । ಭಾಹಿ ॥ ಅಂತಃ । ಅಗ್ನೇ । ರುಚಾ । ತ್ವಮ್ । ಉಖಾಯೈ । ಸದನೇ । ಸ್ವೇ ॥ ತಸ್ಯಾಃ । ತ್ವಮ್ । ಹರಸಾ । ತಪನ್ । ಜಾತವೇದ ಇತಿ ಜಾತ-ವೇದಃ । ಶಿವಃ । ಭವ ॥

---

| ಮಂತ್ರ | ವಿನಿಯೋಗ |
|---|---|
| ಅಂತರಗ್ನೇ...ಭವ ॥ | ಅಗ್ನ್ಯುಪಸ್ಥಾನದ ಎರಡನೆಯ ಮಂತ್ರ. |

---

ಏನಾಮ್=ಈ ಉಖೆಯನ್ನು; ಅರ್ಚಿಷಾ=ಪ್ರಕಾಶದಿಂದಲೂ; ಮಾ ಅಭಿಶೂಶುಚಃ =ಸಂತಾಪಗೊಳಿಸಬೇಡ; ತಪಸಾ=ಸಂತಾಪದಿಂದಲೂ; ಮಾ ಅಭಿಶೂಶುಚಃ= ಹೆಚ್ಚಾಗಿ ತಾಪಗೊಳಿಸಬೇಡ; ಅಸ್ಯಾಮ್=ಈ ಉಖೆಯಲ್ಲಿ; ಅಂತಃ=ಒಳಗಡೆ; ಶುಕ್ರಜ್ಯೋತಿಃ=ನಿರ್ಮಲವಾದ ಪ್ರಕಾಶವುಳ್ಳವನಾಗಿ; ವಿ ಭಾಹಿ=ಹೆಚ್ಚಾಗಿ ಪ್ರಕಾಶಿಸು; +ಅಗ್ನೇ=ಅಗ್ನಿದೇವನೇ! ತ್ವಮ್=ನೀನು; ಉಖಾಯೈ=ಉಖೆಯ; ಅಂತಃ=ಒಳಭಾಗದಲ್ಲಿ; ಸ್ವೇ ಸದನೇ=ಸ್ವೀಯಸ್ಥಾನದಲ್ಲಿ; ರುಚಾ=ದೀಪ್ತಿಯಿಂದ [ಕೂಡಿದವನಾಗಿರು]; ಜಾತವೇದಃ=ಹುಟ್ಟಿದುದೆಲ್ಲದರ ವಿಷಯವನ್ನೂ ತಿಳಿದಿರುವ ಜಾತವೇದನೇ! ತ್ವಮ್=ನೀನು; ಹರಸಾ=ಪ್ರಕಾಶದಿಂದ; ತಪನ್=ಬೆಳಗುತ್ತಾ; ತಸ್ಯಾಃ=ಆ ಉಖೆಗೆ; ಶಿವಃ ಭವ=ಸುಖಪ್ರದನಾಗಿರು;

ಶಿವೋ ಭೂತ್ವಾ ಮಹ್ಯಮಗ್ನೇಽಥೋ ಸೀದ ಶಿವಸ್ತ್ವಮ್ । ಶಿವಾಃ

ಕೃತ್ವಾ ದಿಶಸ್ಸರ್ವಾಸ್ಸ್ವಾಂ ಯೋನಿಮಿಹಾಽಽಸದಃ ॥ ೩೭–9 ॥

[ವೀರಯಸ್ವಾ ತಪನ್ವಿಗ್ಂಶತಿಶ್ಚ ॥]

---

ಶಿವಃ । ಭೂತ್ವಾ । ಮಹ್ಯಮ್ । ಅಗ್ನೇ । ಅಥೋ ಇತಿ । ಸೀದ । ಶಿವಃ । ತ್ವಮ್ ॥ ಶಿವಾಃ ।

ಕೃತ್ವಾ । ದಿಶಃ । ಸರ್ವಾಃ । ಸ್ವಾಮ್ । ಯೋನಿಮ್ । ಇಹ । ಏತಿ । ಅಸದಃ ॥ ೩೭ ॥

---

| ಮಂತ್ರ | ವಿನಿಯೋಗ |
|---|---|
| ಶಿವೋ ಭೂತ್ವಾ...ಅಸದಃ ॥ | ಉಪಸ್ಥಾನದ ಮೂರನೆಯ ಹಾಗೂ ಕೊನೆಯ ಮಂತ್ರ. |

---

✦ಅಗ್ನೇ=ಅಗ್ನಿಯೇ! ತ್ವಮ್=ನೀನು; ಮಹ್ಯಮ್=ನನಗೆ; ಶಿವಃ ಭೂತ್ವಾ=ಮಂಗಳಕರನಾಗಿದ್ದು; ಅಥೋ=ಮತ್ತು; ಶಿವಃ=ಎಲ್ಲರಿಗೂ ಶುಭಪ್ರದನಾಗಿ; ಸೀದ=ಉಖೆಯಲ್ಲಿ ಇರು; ಸರ್ವಾಃ ದಿಶಃ=ಎಲ್ಲ ದಿಕ್ಕುಗಳನ್ನೂ; ಶಿವಾಃ=ಮಂಗಳಯುಕ್ತವನ್ನಾಗಿ; ಕೃತ್ವಾ=ಮಾಡಿ; ಇಹ=ಈ ಉಖೆಯಲ್ಲಿ; ಸ್ವಾಮ್=ತನ್ನದಾದ; ಯೋನಿಮ್=ಸ್ಥಾನವನ್ನು; ಆ ಅಸದಃ=ಹೊಂದಿ ಕುಳಿತುಕೋ.

---

'ರೋಹಿತೇನ ತ್ವಾಽಗ್ನಿಃ' [ತೈ.ಸಂ. 1. 6. 4] ಎಂದು ಬೇರೆ ಕಡೆಯಲ್ಲಿದೆ. ಆದರಂತೆ ಅಗ್ನಿಯು ಕೆಂಪಾದ ಕುದುರೆಗಳುಳ್ಳವನು. ಆತನು ಅತಿದೂರದಿಂದ ನಮ್ಮ ಯಾಗಕ್ಕೆ ಆಗಮಿಸಲಿ. ಈ ಅಗ್ನಿಯು ಉಖೆಯಲ್ಲಿರತಕ್ಕವನು. ಯಜಮಾನರೆಲ್ಲರಿಗೂ ಪ್ರಿಯನು. ಆ ಅಗ್ನಿಯು ನಾವು ಶತ್ರುಗಳನ್ನು ಮೀರಿಸುವಂತೆ ಮಾಡಲಿ.

ಹೇ! ಅಗ್ನಿಯೇ! ನೀನು ಈ ಉಖೆಯನ್ನು ತಾಪಗೊಳಿಸದಿರು. ಕಾರಣವಾದ ಬೆಳಕು ಅಧಿಕವಾದರೆ ಕಾರ್ಯವಾದ ತಾಪವು ಉಂಟಾಗುತ್ತದೆ. ಸರ್ವಜ್ಞನಾದ ಅಗ್ನಿಯು

ತಾಪವನ್ನು ಅಧಿಕವಾಗಿ ಉಂಟುಮಾಡದಿರಲೆಂದು ಪಾರ್ಥನೆ.

ಅಗ್ನಿಯು ತನ್ನ ಸ್ಥಾನವಾದ ಉಖೆಯಲ್ಲಿ ಚೆನ್ನಾಗಿ ಪ್ರಜ್ವಲಿಸುತ್ತಾ ಇರಲಿ. ಉಖೆಗೆ ಅವನು ಮಂಗಳಕರನಾಗಿರಲಿ ಎಂದು ಪ್ರಾರ್ಥನೆ ಇಲ್ಲಿದೆ.

ಹೇ! ಅಗ್ನಿಯೇ! ನನಗೂ ನನ್ನ ಸಂಬಂಧಿಗಳೆಲ್ಲರಿಗೂ ಮತ್ತು ಎಲ್ಲ ದಿಕ್ಕುಗಳಿಗೂ ಒಳ್ಳೆಯದನ್ನು ಉಂಟುಮಾಡುತ್ತಾ ನಿನ್ನ ಸ್ವಸ್ಥಾನವಾದ ಉಖೆಯಲ್ಲಿ ಆಸೀನನಾಗಿರು ಎಂಬ ಪ್ರಾರ್ಥನೆಯು ಇಲ್ಲಿದೆ.

---

## ವಿನಿಯೋಗಸಂಗ್ರಹ

1-7ಆಕೂತಿಂ ಸಪ್ತಭಿರ್ದೀಕ್ಷಾಹುತಿ8-9ರ್ಮಾಸ್ವಿತಿ ಚ ದ್ವಯಾತ್ ।
ಪೂರ್ವಾಗ್ನೌ ಪ್ರವೃಣಕ್ತ್ಯುಖಾಂ 10ಮಿತ್ರಾಂಗಾರೈಃ ಸಮಿಧ್ಯತೇ ॥
11ದ್ರ್ವನ್ನಃ ಕ್ರಮುಕಮಾಧತ್ತೇ 12 ಪರಂ ವೈಕಂಕತೀಂ 13ಪರಮ್ ।
ಶಮೀಮಯೀಂ 14-16ಸೀದ ಜಾತಂ ತಿಸೃಭಿಶ್ಚೋಪತಿಷ್ಠತೇ ॥
ನವಮೇ ತ್ವನುವಾಕೇऽಸ್ಮಿನ್ ಮಂತ್ರಾಃ ಷೋಡಶ ವರ್ಣಿತಾಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-16

### ಅನುವಾಕದ ವಿಶೇಷವಿಷಯಗಳು

#### ಅ) ಮೀಮಾಂಸಾ

**೧) ದೀಕ್ಷಾಹುತಿಯಲ್ಲಿ ಪ್ರಾಕೃತಮಂತ್ರಗಳ ಬಾಧವೇ? ಸಮುಚ್ಚಯವೇ?**
**[ಜೈ.ಸೂ.10.3]**

ಪ್ರಕೃತಿಯಾಗವಾದ ಅಗ್ನಿಷ್ಟೋಮದಲ್ಲಿ 'ಆಕೂತ್ಯೈ ಪ್ರಯುಜೇऽಗ್ನಯೇ ಸ್ವಾಹಾ' ಎಂದು ದೀಕ್ಷಾಹುತಿಗಳನ್ನು ಹೇಳಲಾಗಿದೆ. ಈ ವಿಕೃತಿಯಾಗದಲ್ಲಿಯೂ ಸಹ 'ಆಕೂತಿಮಗ್ನಿಂ ಪ್ರಯುಜಗ್ಂ ಸ್ವಾಹಾ' ಎಂಬ ಮಂತ್ರಗಳು ಇವೆ. 'ದ್ವಾದಶಭಿ

ದರ್ಶಿಕ್ಷಯತಿ' ಎಂಬ ವಚನವೂ ಇರುವುದರಿಂದ ಪ್ರಾಕೃತಮಂತ್ರಗಳಿಗೆ ಈ ವೈಕೃತ ಮಂತ್ರಗಳಿಂದ ಬಾಧವನ್ನು ಹೇಳಿ ಈ ಆರು ಮಂತ್ರಗಳ ಆವೃತ್ತಿಯಿಂದ ದ್ವಾದಶ ಸಂಖ್ಯಾಸಂಪತ್ತಿಯನ್ನು ಮಾಡಿಕೊಳ್ಳಬೇಕೇ? ಪ್ರಾಕೃತ–ವೈಕೃತಮಂತ್ರಗಳ ಸಮುಚ್ಚಯದಿಂದ ದ್ವಾದಶಸಂಖ್ಯಾಸಂಪತ್ತಿಯೇ? ಎಂಬುದು ಇಲ್ಲಿನ ಸಂಶಯ.

ದೀಕ್ಷಣೀಯೇಷ್ಟಿಯ ಅಂಗವಾದ ಆಹುತಿಗಳಿಗೆ ಉಪಕಾರವನ್ನು ಮಾಡುವುದು ಎರಡು ಬಗೆಯ ಮಂತ್ರಗಳಿಗೂ ಸಮಾನವಾಗಿರುವುದರಿಂದ ಈ ವೈಕೃತಮಂತ್ರಗಳಿಂದ ಪ್ರಾಕೃತಮಂತ್ರಗಳಿಗೆ ಬಾಧವೇ ಯುಕ್ತ ಎಂಬುದು ಇಲ್ಲಿನ ಪೂರ್ವಪಕ್ಷ.

ಶ್ರುತಿಯಿಂದಲೇ ಮಂತ್ರಗಳ ಸ್ವರೂಪವು ಸಿದ್ಧಿಸುವುದಾದರೂ ಹೋಮಾಂಗತ್ವವು ಲಿಂಗದಿಂದ ಕಲ್ಪಿತವಾಗುತ್ತದೆ. ಹೀಗಾಗಿ ಪ್ರಾಕೃತ–ವೈಕೃತಮಂತ್ರಗಳಿಗೆ ತುಲ್ಯವಾದ ಬಲವು ಇರುವುದರಿಂದ ಬಾಧವು ಇಲ್ಲ. 'ದ್ವಾದಶ ಜುಹೋತಿ' ಎಂಬ ವಚನವಿರುವುದರಿಂದ ಎರಡು ಬಗೆಯ ಮಂತ್ರಗಳಿಗೂ ಸಮುಚ್ಚಯವು ಯುಕ್ತ. ವೈಕೃತಮಂತ್ರಗಳ ಆವೃತ್ತಿಯಿಂದ ಸಂಖ್ಯಾಸಂಪತ್ತಿಯಾಗಬಹುದಾದರೂ ಆವೃತ್ತಿಯ ವಿಧಿಯಿಲ್ಲದಿರುವುದರಿಂದ ಸಮುಚ್ಚಯವೇ ಯುಕ್ತ ಎಂಬುದು ಇಲ್ಲಿನ ಸಿದ್ಧಾಂತ.

## ॥ ದಶಮೋಽನುವಾಕಃ ॥

ಯದ॑ಗ್ನೇ ಯಾನಿ ಕಾನಿ ಚಾತೇ ದಾರೂ॑ಣಿ ದಧ್ಮಸಿ॑ ।

ತದ॑ಸ್ತು ತುಭ್ಯಮಿದ್ಘೃ॑ತಂ ತಜ್ಜುಷಸ್ವ ಯವಿಷ್ಠ್ಯ ॥

---

ಯತ್ । ಅಗ್ನೇ । ಯಾನಿ॑ । ಕಾನಿ॑ । ಚ । ಏತಿ॑ । ತೇ । ದಾರೂ॑ಣಿ । ದಧ್ಮಸಿ॑ ॥ ತತ್ । ಅಸ್ತು ।

ತುಭ್ಯ॑ಮ್ । ಇತ್ । ಘೃತಮ್ । ತತ್ । ಜುಷಸ್ವ । ಯವಿಷ್ಠ್ಯ ॥

---

ನವಮಾನುವಾಕದಲ್ಲಿ ಅಗ್ನ್ಯುತ್ಪಾದನವು ಉಕ್ತವಾಯಿತು. ಈ ಹತ್ತನೆಯ ಅನುವಾಕದಲ್ಲಿ ಅಗ್ನಿಧಾರಣವು ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
| --- | --- |
| ಯದ॑ಗ್ನೇ...ಯವಿಷ್ಠ್ಯ ॥ | ತಾನಾಗಿಯೇ ಮರದಿಂದ ಬಿದ್ದಿರುವ ಅತ್ತಿಮರದ ಕಟ್ಟಿಗೆಗಳನ್ನು ಉಖ್ಯಾಗ್ನಿಯಲ್ಲಿ ಹಾಕಲು ಪ್ರಥಮಮಂತ್ರ. |

---

+ಅಗ್ನೇ=ಅಗ್ನಿಯೇ! ಯಾನಿ ಕಾನಿ ಚ ದಾರೂಣಿ=ಯಾವುದಾದರೂ ತಾನಾಗಿಯೇ ಬಿದ್ದಿರುವ ಕಟ್ಟಿಗೆಗಳನ್ನು; ತೇ=ನಿನಗಾಗಿ; ಆ ದಧ್ಮಸಿ=ತಂದು ನಿನ್ನಲ್ಲಿ ಹಾಕುತ್ತೇವೆಂಬುದು; ಯತ್=ಯಾವುದಿದೆಯೋ; ತತ್=ಆ ಕಾಷ್ಠಸಮೂಹವು; ತುಭ್ಯಮ್=ನಿನಗೆ; ಘೃತಮ್ ಇತ್=ತುಪ್ಪವೇ[ತುಪ್ಪದಂತೆ ರುಚಿಕರವೇ]; ಅಸ್ತು=ಆಗಲಿ. ಯವಿಷ್ಠ್ಯ=ಯುವಕನೇ! [ಹೊಸದಾಗಿ ಜನಿಸಿದವನೇ!] ತತ್=ಆ ದಾರುಸಮೂಹವನ್ನು; ಜುಷಸ್ವ=ಸೇವಿಸು/ಭಕ್ಷಿಸು.

**ಯದತ್ತ್ಯುಪಜಿಹ್ವಿಕಾ ಯದ್ವಮ್ರೋ ಅತಿಸರ್ಪತಿ । ಸರ್ವಂ ತದಸ್ತು ತೇ ಘೃತಂ ತಜ್ಜುಷಸ್ವ ಯವಿಷ್ಠ್ಯ ॥**

---

ಯತ್ । ಅತ್ತಿ । ಉಪಜಿಹ್ವಿಕೇತ್ಯುಪ–ಜಿಹ್ವಿಕಾ । ಯತ್ । ವಮ್ರಃ । ಅತಿಸರ್ಪತೀತ್ಯತಿ–ಸರ್ಪತಿ ॥ ಸರ್ವಮ್ । ತತ್ । ಅಸ್ತು । ತೇ । ಘೃತಮ್ । ತತ್ । ಜುಷಸ್ವ । ಯವಿಷ್ಠ್ಯ ॥

---

| ಮಂತ್ರ | ವಿನಿಯೋಗ |
|---|---|
| ಯದತ್ತ್ಯುಪ...ಯವಿಷ್ಠ್ಯ ॥ | ಸಮಿದಾಧಾನದ ದ್ವಿತೀಯಮಂತ್ರ. |

---

✦[ಅಗ್ನಿಯೇ!] ಉಪಜಿಹ್ವಿಕಾ=ಕಾಡಿನ ಕಾಡ್ಗಿಚ್ಚಿನ ಅಲ್ಪಜ್ವಾಲೆಯು; ಯತ್=ಯಾವ ದಾರುಜಾತವನ್ನು; ಅತ್ತಿ=ತಿಂದಿದೆಯೋ/ಸ್ವಲ್ಪ ಸುಟ್ಟಿದೆಯೋ; ಯತ್=ಯಾವ ದಾರುವನ್ನು; ವಮ್ರಃ=ಇರುವೆ–ಗೆದ್ದಲು ಮುಂತಾದ ಕ್ರಿಮಿಸಮೂಹವು; ಅತಿಸರ್ಪತಿ =ಅತಿಕ್ರಮಿಸಿ ಸ್ವಲ್ಪ ಸಾರವನ್ನು ಭಕ್ಷಿಸಿದೆಯೋ; ತತ್ ಸರ್ವಮ್=ಆ ಎಲ್ಲವೂ; ತೇ=ನಿನಗೆ; ಘೃತಮ್ ಅಸ್ತು=ತುಪ್ಪದಂತೆ ಪ್ರಿಯವಾಗಿರಲಿ; ಯವಿಷ್ಠ್ಯ= ಯುವಕನೇ! ತತ್=ಅದನ್ನು; ಜುಷಸ್ವ=ನೀನು ಭಕ್ಷಿಸು.

---

ಯುವಕನಾದ ಅಗ್ನಿಯೇ! ನಾವು ನಿನಗೆ ಸಮರ್ಪಿಸುವ ಮರಗಳಿಂದ ತಾನಾಗಿಯೇ ಬಿದ್ದಿರುವ ದಾರುಸಮೂಹವು ನಿನಗೆ ತುಪ್ಪದಂತೆ ಪ್ರಿಯವಾಗಲಿ. ಅದನ್ನು ನೀನು ಭಕ್ಷಿಸು. ಕಾಡುಗಿಚ್ಚಿನ ಜ್ವಾಲೆಯು ಮಹಾಜ್ವಾಲೆ. ಆದರಿಂದ ಹಾರಿ ಅಲ್ಲಲ್ಲಿ ಉರಿಯುವ ಜ್ವಾಲೆಯು ಅಲ್ಪಜ್ವಾಲೆ. ಇದು ಉಪಜಿಹ್ವಿಕೆ.

ಹೀಗೆ ಸ್ವಲ್ಪ ಸುಟ್ಟು ಬಿದ್ದಿರುವ ಕಟ್ಟಿಗೆಯನ್ನು ನಿನಗೆ ಅರ್ಪಿಸುತ್ತೇವೆ. ಹಾಗೆಯೇ ಇರುವೆ–ಗೆದ್ದಲು ಮುಂತಾದವುಗಳು ಸ್ವಲ್ಪ ತಿಂದಿರುವ ಕೆಳಗೆ ಬಿದ್ದಿರುವ ಕಟ್ಟಿಗೆಗಳನ್ನೂ ನಿನ್ನಲ್ಲಿ ಹಾಕುತ್ತೇವೆ. ಇದೆಲ್ಲವೂ ನಿನಗೆ ತುಪ್ಪದಂತೆ ಪ್ರಿಯವಾಗಲಿ. ಅದೆಲ್ಲವನ್ನೂ ಭಕ್ಷಿಸಿ ನೀನು ಸುಪ್ರಸನ್ನನಾಗು.

**ರಾತ್ರಿಗ್ಂ ರಾತ್ರಿಮಪ್ರಯಾವಂ ಭರಂತೋಽಶ್ವಾಯೇವ ತಿಷ್ಠತೇ ಘಾಸಮಸ್ಮೈ । ರಾಯಸ್ಪೋಷೇಣ ಸಮಿಷಾ ಮದಂತೋಽಗ್ನೇ ಮಾ ತೇ ಪ್ರತಿವೇಶಾ ರಿಷಾಮ ॥**

---

ರಾತ್ರಿಗ್ಂರಾತ್ರಿಮಿತಿ ರಾತ್ರಿಮ್-ರಾತ್ರಿಮ್ । ಅಪ್ರಯಾವಮಿತ್ಯಪ್ರ-ಯಾವಮ್ । ಭರಂತಃ । ಅಶ್ವಾಯ । ಇವ । ತಿಷ್ಠತೇ । ಘಾಸಮ್ । ಅಸ್ಮೈ ॥ ರಾಯಃ । ಪೋಷೇಣ । ಸಮಿತಿ । ಇಷಾ । ಮದಂತಃ । ಅಗ್ನೇ । ಮಾ । ತೇ । ಪ್ರತಿವೇಶಾ ಇತಿ ಪ್ರತಿ-ವೇಶಾಃ । ರಿಷಾಮ ॥

---

| ಮಂತ್ರ | ವಿನಿಯೋಗ |
|---|---|
| ರಾತ್ರಿಗ್ಂ...ರಿಷಾಮ ॥ | ಸಮಿದಾಧಾನದ ತೃತೀಯಮಂತ್ರ. |

---

✦**ಅಗ್ನೇ**=ಹೇ! ಅಗ್ನಿಯೇ! **ತೇ ಪ್ರತಿವೇಶಾಃ**=ನಿನ್ನ ಸಮೀಪಸ್ಥರಾಗಿರುವ; [ನಾವು]; **ಮಾ ರಿಷಾಮ**=[ನಿನ್ನ ಅನುಗ್ರಹದಿಂದ]; ಹಿಂಸೆಯನ್ನು ಹೊಂದದೇ ಇರೋಣ. [ನಾವು]; **ತಿಷ್ಠತೇ**=[ಅಶ್ವಶಾಲೆಯಲ್ಲಿ] ಇರುವ; **ಅಶ್ವಾಯ**=ಕುದುರೆಗೆ; **ಘಾಸಮ್ ಇವ**=ಹುಲ್ಲನ್ನು ಹೇಗೋ ಹಾಗೆ; **ರಾತ್ರಿಂ ರಾತ್ರಿಮ್**=ಪ್ರತಿದಿನವೂ; **ಅಪ್ರಯಾವಮ್**=ವಿಚ್ಛಿತ್ತಿ ಇಲ್ಲದೆ; **ಅಸ್ಮೈ**=ಈ ಅಗ್ನಿಗೆ; **ಭರಂತಃ**=ಸಮಿತ್ತುಗಳನ್ನು ಹಾಕುವವರಾಗಿ; **ರಾಯಃ ಪೋಷೇಣ**=ಧನಸಂಪತ್ತಿಯಿಂದಲೂ; **ಇಷಾ**=ಅನ್ನದಿಂದಲೂ; **ಸಮ್ ಮದಂತಃ**=ಚೆನ್ನಾಗಿ ಸಂತೋಷಿಸುವವರಾಗಿರುವವರು; [ಆಗೋಣ]

---

ಕುದುರೆಗಳನ್ನು ಸಾಕುವವರು ಒಂದು ದಿನವೂ ತಪ್ಪದೆ ಕುದುರೆಗಳಿಗೆ ಹುಲ್ಲನ್ನು ಹಾಕುತ್ತಾರೆ. ಹೇ! ಅಗ್ನಿಯೇ! ನಾವು ಕಟ್ಟಿಗೆಯ ರೂಪದ ಆಹಾರವನ್ನು ಕೊಟ್ಟು ನಿನ್ನನ್ನು ಪೋಷಿಸುತ್ತೇವೆ. ನೀನು ನಮಗೆ ಧನಸಂಪತ್ತನ್ನೂ ಅನ್ನಸಮೃದ್ಧಿಯನ್ನೂ ಕೊಟ್ಟು

ದಗ್ಂಷ್ಟ್ರಾಭ್ಯಾಂ ಮಲಿಮ್ಲೂಞ್ಜಂಭ್ಯೈಸ್ತಸ್ಕರಾಗ್ಂ ಉತ ।
ಹನೂಭ್ಯಾಗ್ಂ ಸ್ತೇನಾನ್ಭಗವಸ್ತಾಗ್ಂಸ್ತ್ವಂ ಖಾದ
ಸುಖಾದಿತಾನ್ ॥

---

ದಗ್ಂಷ್ಟ್ರಾಭ್ಯಾಮ್ । ಮಲಿಮ್ಲೂನ್ । ಜಂಭ್ಯೈಃ । ತಸ್ಕರಾನ್ । ಉತ ॥
ಹನೂಭ್ಯಾಮಿತಿ ಹನು-ಭ್ಯಾಮ್ । ಸ್ತೇನಾನ್ । ಭಗವ ಇತಿ ಭಗ-ವಃ । ತಾನ್ ।
ತ್ವಮ್ । ಖಾದ । ಸುಖಾದಿತಾನಿತಿ ಸು-ಖಾದಿತಾನ್ ॥

---

| ಮಂತ್ರ | ವಿನಿಯೋಗ |
| --- | --- |
| ದಗ್ಂಷ್ಟ್ರಾಭ್ಯಾಂ...ಸುಖಾದಿತಾನ್ ॥ | ಅಶ್ವತ್ಥ ಸಾಮಿತ್ತುಗಳನ್ನು ಹಾಕಲು. |

---

+ಭಗವಃ=ಭಗವಂತನಾದ/ಪೂಜ್ಯನಾದ ಅಗ್ನಿಯೇ! ದಗ್ಂಷ್ಟ್ರಾಭ್ಯಾಮ್=ಕೋರೆ ಹಲ್ಲುಗಳಿಂದ; ಮಲಿಮ್ಲೂನ್=ಮಲಿಮ್ಲುಗಳೆನಿಸಿಕೊಳ್ಳುವ ಕಳ್ಳರನ್ನೂ; ಜಂಭ್ಯೈಃ =ದಂಷ್ಟ್ರಗಳ ಮುಂಭಾಗದ ಹಲ್ಲುಗಳಿಂದ; ತಸ್ಕರಾನ್=ತಸ್ಕರಶಬ್ದವಾಚ್ಯರಾದ ಕಳ್ಳರನ್ನೂ; ಉತ=ಮತ್ತು; ಹನೂಭ್ಯಾಮ್=ದವಡೆಗಳಿಂದ; ಸ್ತೇನಾನ್= ಸ್ತೇನರೆನಿಸಿಕೊಳ್ಳುವ ಕಳ್ಳರನ್ನೂ; ತಾನ್=ಅವರೆಲ್ಲರನ್ನೂ; ತ್ವಮ್=ನೀನು; ಸುಖಾದಿತಾನ್= ಚೆನ್ನಾಗಿ ಅಗಿದು ತಿನ್ನಲ್ಪಟ್ಟವರಂತೆ; ಖಾದ=ತಿಂದು ಹಾಕು.

---

ಬಗೆಯವರುಂಟು. ಅಂತಹ ಕಳ್ಳರನ್ನೂ, ಹಗೆಗಳ ಸೇನೆಗಳನ್ನೂ ನಿನ್ನ ಬಾಯಿಯಲ್ಲಿ ಹಾಕುತ್ತೇನೆ. ನೀನು ಅವರನ್ನು ನಾಶಪಡಿಸುವವನಾಗು.

ಕಾಡಿನಲ್ಲಿ ದಾರಿಹೋಕರನ್ನು ಅಡ್ಡಗಟ್ಟಿ ಧನಾದಿಗಳನ್ನು ದೋಚಿಕೊಳ್ಳುವ, ಗ್ರಾಮಕ್ಕೇ ಬಂದು ದರೋಡೆ ಮಾಡುವ ಅತಿಪಾಪಿಗಳಾದ ಕಳ್ಳರು ಮಲಿಮ್ಲುಗಳು. ಪ್ರಕಟವಾಗಿಯೇ ಕಳ್ಳತನ ಮಾಡುವವರಾದುದರಿಂದ ಇವರು ತಸ್ಕರರೆನಿಸಿಕೊಳ್ಳುತ್ತಾರೆ. ತಿಳಿಯ

ಯೇ ಜನೇಷು ಮಲಿಮ್ಲವಃ ಸ್ತೇನಾಸಸ್ತಸ್ಕರಾ ವನೇ । ಯೇ [(೩೯)]ಕಕ್ಷೇಷ್ವಘಾಯವಸ್ತಾಗ್‌ಂಸ್ತೇ ದಧಾಮಿ ಜಂಭಯೋಃ ॥

---

ಯೇ । ಜನೇಷು । ಮಲಿಮ್ಲವಃ । ಸ್ತೇನಾಸಃ । ತಸ್ಕರಾಃ । ವನೇ ॥ ಯೇ । (೩೯) । ಕಕ್ಷೇಷು । ಅಘಾಯವ ಇತ್ಯಘ-ಯವಃ । ತಾನ್ । ತೇ । ದಧಾಮಿ । ಜಂಭಯೋಃ ॥

---

| ಮಂತ್ರ | ವಿನಿಯೋಗ |
|---|---|
| ಯೇ ಜನೇಷು...ಜಂಭಯೋಃ ॥ | ವಿಕಂಕತ [ಹುಳಿಬೇಲ]ಸಮಿತ್ತನ್ನು ಹಾಕಲು |

---

✦[ಹೇ! ಅಗ್ನಿಯೇ!] ಯೇ ಮಲಿಮ್ಲವಃ=ಯಾವ ಮಲಿಮ್ಲುಗಳೂ; ಸ್ತೇನಾಸಃ= ಸ್ತೇನರೂ; ತಸ್ಕರಾಃ=ತಸ್ಕರರೂ; ಜನೇಷು=ಜನರಲ್ಲಿಯೂ/ಗ್ರಾಮಗಳಲ್ಲಿಯೂ; ವನೇ=ಕಾಡಿನಲ್ಲಿಯೂ [ಇದ್ದಾರೆಯೋ][ಅವರನ್ನೂ]; ಯೇ=ಯಾವ [ಪ್ರಾಣಿಗಳು] ಕಕ್ಷೇಷು=ಪೊದೆಗಳಲ್ಲಿ ಇದ್ದುಕೊಂಡು; ಅಘಾಯವಃ=ಜನಗಳಿಗೆ ಹಿಂಸೆಯನ್ನು ಮಾಡುತ್ತವೆಯೋ; ತಾನ್=ಅವುಗಳನ್ನೂ; ತೇ=ನಿನ್ನ; ಜಂಭಯೋಃ=ಹಲ್ಲುಗಳಲ್ಲಿ; ದಧಾಮಿ=ಇಡುತ್ತೇನೆ/ಹಾಕುತ್ತೇನೆ; [ಅವೆಲ್ಲವನ್ನೂ ನೀನು ನಾಶಪಡಿಸು]

---

ದಂತೆಯೇ ಧನಾದಿಗಳನ್ನು ಕದಿಯುವವರು ಸ್ತೇನರು. ಈ ತಸ್ಕರರನ್ನೂ, ಸ್ತೇನರನ್ನೂ ಕೋರೆಹಲ್ಲು ಮುಂತಾದವುಗಳಿಂದ ಹೇ ಅಗ್ನಿಯೇ! ನೀನು ಚೆನ್ನಾಗಿ ಅಗಿದು ತಿಂದು ಹಾಕಿಬಿಡು.

ಬಗೆಬಗೆಯ ಕಳ್ಳರನ್ನೂ, ಹುಲಿಯೇ ಮುಂತಾದ ಹಿಂಸಕಪ್ರಾಣಿಗಳನ್ನೂ ನಾಶಪಡಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿ, ವಿಕಂಕತದ ಸಮಿತ್ತನ್ನು ಅಗ್ನಿಗೆ ಸಮರ್ಪಿಸುವ ಮಂತ್ರವಿದಾಗಿದೆ.

**ನಾಭಾ[ನಾಭಾ(೩೮)ಪೃಥಿವ್ಯಾಃ]ಪೃಥಿವ್ಯಾಸ್ಸಮಿಧಾನಮಗ್ನಿಗ್ಂ ರಾಯಸ್ಪೋಷಾಯ ಬೃಹತೇ ಹವಾಮಹೇ । ಇರಂಮದಂ ಬೃಹದುಕ್ಥಂ ಯಜತ್ರಂ ಜೇತಾರಮಗ್ನಿಂ ಪೃತನಾಸು ಸಾಸಹಿಮ್ ॥**

---

ನಾಭಾ ।(೩೮) । ಪೃಥಿವ್ಯಾಃ । ಸಮಿಧಾನಮಿತಿ ಸಮ್-ಇಧಾನಮ್ । ಅಗ್ನಿಮ್ । ರಾಯಃ । ಪೋಷಾಯ । ಬೃಹತೇ । ಹವಾಮಹೇ ॥ ಇರಂಮದಮಿತೀರಂ-ಮದಮ್ । ಬೃಹದುಕ್ಥಮಿತಿ ಬೃಹತ್-ಉಕ್ಥಮ್ । ಯಜತ್ರಮ್ । ಜೇತಾರಮ್ । ಅಗ್ನಿಮ್ । ಪೃತನಾಸು । ಸಾಸಹಿಮ್ ॥

---

| ಮಂತ್ರ | ವಿನಿಯೋಗ |
|---|---|
| ನಾಭಾ...ಸಾಸಹಿಮ್ ॥ | ಸಮಿದಾಧಾನದ ನಾಲ್ಕನೆಯ ಮಂತ್ರ. |

---

✦**ಪೃಥಿವ್ಯಾಃ** ನಾಭಾ=ಪೃಥಿವೀಸ್ವರೂಪಳಾದ ಉಖೆಯ ಮಧ್ಯದಲ್ಲಿ; **ಸಮಿಧಾನಮ್**=ಪ್ರಜ್ವಲಿಸುತ್ತಿರುವ; **ಇರಂಮದಮ್**=ಸಮಿದ್ರೂಪವಾದ ಅನ್ನದಿಂದ ಸಂತೋಷಪಡುವ; **ಬೃಹದುಕ್ಥಮ್**=ಪ್ರೌಢವಾದ, ಪ್ರಶಂಸಾಪರವಾದ ಉಕ್ಥಮಂತ್ರಗಳಿಂದ ಸ್ತುತಿಸಲ್ಪಡುವ; **ಯಜತ್ರಮ್**=ಯಾಗನಿರ್ವಾಹಕನಾದ; **ಜೇತಾರಮ್**=ಶತ್ರುಗಳ ಮೇಲೆ ಗೆಲುವನ್ನು ಸಾಧಿಸುವ; **ಪೃತನಾಸು**=ಸೇನೆಗಳಲ್ಲಿ; **ಅಗ್ನಿಮ್**=ಅಗ್ರಗಾಮಿಯಾದ/ಯುದ್ಧಗಳಲ್ಲಿ ಹಗೆಗಳನ್ನು ಸೋಲಿಸುವ; **ಸಾಸಹಿಮ್**=ನಮ್ಮ ಅಪರಾಧಗಳನ್ನು ಕ್ಷಮಿಸುವ; **ಅಗ್ನಿಮ್**=ಅಗ್ನಿಯನ್ನು; **ಬೃಹತೇ**=ಮಹತ್ತಾದ; **ರಾಯಃ ಪೋಷಾಯ**=ಧನಸಮೃದ್ಧಿಗಾಗಿ; **ಹವಾಮಹೇ**=ಆಹ್ವಾನಿಸುತ್ತೇವೆ.

# ಯಾಸ್ಸೇನಾ ಅಭೀತ್ವರೀರಾವ್ಯಾಧಿನೀರುಗಣಾ ಉತ । ಯೇ ಸ್ತೇನಾ ಯೇ ಚ ತಸ್ಕರಾಸ್ತಾಗ್ಂಸ್ತೇ ಅಗ್ನೇಽಪಿ ದಧಾಮ್ಯಾಸ್ಯೇ ॥

ಯಾಃ । ಸೇನಾಃ । ಅಭೀತ್ವರೀರಿತ್ಯಭಿ-ಇತ್ವರೀಃ । ಆವ್ಯಾಧಿನೀರಿತ್ಯಾ-ವ್ಯಾಧಿನೀಃ । ಉಗಣಾಃ । ಉತ ॥ ಯೇ । ಸ್ತೇನಾಃ । ಯೇ । ಚ । ತಸ್ಕರಾಃ । ತಾನ್ । ತೇ । ಅಗ್ನೇ । ಅಪೀತಿ । ದಧಾಮಿ । ಆಸ್ಯೇ ॥

| ಮಂತ್ರ | ವಿನಿಯೋಗ |
|---|---|
| ಯಾಸ್ಸೇನಾ...ದಧಾಮ್ಯಾಸ್ಯೇ ॥ | ಸಮಿದಾಧಾನದ ಐದನೆಯ ಮಂತ್ರ. |

+ಅಗ್ನೇ=ಅಗ್ನಿಯೇ! ಯಾಃ ಸೇನಾಃ=ಯಾವ ಶತ್ರುಸೇನೆಗಳು; ಅಭೀತ್ವರೀಃ=ನಮಗೆ ಎದುರಾಗಿ ಬರುತ್ತಿವೆಯೋ; ಆವ್ಯಾಧಿನೀಃ=ನಮ್ಮನ್ನು ಎಲ್ಲ ಕಡೆಗಳಲ್ಲಿಯೂ ಹಿಂಸಿಸುತ್ತವೆಯೋ; ಉಗಣಾಃ=ಹಲವು ಗುಂಪುಗಳಿಂದ ಕೂಡಿಕೊಂಡಿವೆಯೋ; [ಆ ಹಗೆಗಳ ಸೇನೆಗಳನ್ನೂ] ಉತ=ಮತ್ತು; ಯೇ ಸ್ತೇನಾಃ=ತಿಳಿಯದಂತೆ ಕಳ್ಳತನ ಮಾಡುವ ಯಾವ ಕಳ್ಳರುಂಟೋ; ಯೇ ತಸ್ಕರಾಃ ಚ=ಮತ್ತು ಪ್ರತ್ಯಕ್ಷವಾಗಿಯೇ ಕದಿಯುವ ಯಾವ ಕಳ್ಳರುಂಟೋ; ತಾನ್=ಅವರೆಲ್ಲರನ್ನೂ; ತೇ=ನಿನ್ನ; ಆಸ್ಯೇ= ಮುಖದಲ್ಲಿ/ಬಾಯಿಯಲ್ಲಿ; ಅಪಿ ದಧಾಮಿ=ಹಾಕುತ್ತೇನೆ. [ನೀನು ಅವರನ್ನು ಭಕ್ಷಿಸು]

ಸಂತೋಷಪಡುವಂತೆ ಅನುಗ್ರಹಿಸು. ನಿನ್ನ ಹತ್ತಿರದವರಾದ ನಮಗೆ ಯಾವುದೇ ಹಿಂಸೆಯಾಗದಂತೆ ಮಾಡಿ ನಮ್ಮನ್ನು ಅನುಗ್ರಹಿಸು.

ಉಖೆಯ ಮಧ್ಯದಲ್ಲಿ ಜ್ವಲಿಸುವ, ಸಮಿತ್ತುಗಳಿಂದ ಹರ್ಷಿಸುವ, ಸ್ತುತ್ಯನಾದ, ಯುದ್ಧಗಳಲ್ಲಿ ಗೆಲುವನ್ನು ಸಾಧಿಸುವ, ಕ್ಷಮಾಶೀಲನಾದ ಅಗ್ನಿಯನ್ನು ನಾವು ಹೆಚ್ಚಿನ ಸಂಪತ್ತಿನ ಸಮೃದ್ಧಿಗಾಗಿ ಆಮಂತ್ರಿಸುತ್ತೇವೆ.

ಕಳ್ಳರಲ್ಲಿ ತಿಳಿಯದಂತೆ, ತಿಳಿಯುವಂತೆ, ಹೆದರಿಸಿ, ಬಲಾತ್ಕಾರಪಡಿಸಿ ಕದಿಯುವ ಹಲವು

**ಯೋ ಅಸ್ಮಭ್ಯಮರಾತೀಯಾದ್ಯಶ್ಚ ನೋ ದ್ವೇಷತೇ ಜನಃ ।**

**ನಿಂದಾದ್ಯೋ ಅಸ್ಮಾನ್ದಿಪ್ಸಾಚ್ಚ ಸರ್ವಂ ತಂ ಮಸ್ಮಸಾ ಕುರು ॥**

**ಸಗ್ಂಶಿತಂ ಮೇ ಬ್ರಹ್ಮ ಸಗ್ಂಶಿತಂ ವೀರ್ಯಂ ಬಲಮ್ ।**

---

ಯಃ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಅರಾತೀಯಾತ್ । ಯಃ । ಚ । ನಃ । ದ್ವೇಷತೇ । ಜನಃ ॥ ನಿಂದಾತ್ । ಯಃ । ಅಸ್ಮಾನ್ । ದಿಪ್ಸಾತ್ । ಚ । ಸರ್ವಮ್ । ತಮ್ । ಮಸ್ಮಸಾ । ಕುರು ॥ ಸಗ್ಂಶಿತಮಿತಿ ಸಮ್-ಶಿತಮ್ । ಮೇ । ಬ್ರಹ್ಮ । ಸಗ್ಂಶಿತಮಿತಿ ಸಮ್-ಶಿತಮ್ । ವೀರ್ಯಮ್ । ಬಲಮ್ ॥

---

| ಮಂತ್ರ | ವಿನಿಯೋಗ |
|---|---|
| **ಯೋ ಅಸ್ಮಭ್ಯಂ...ಕುರು ॥** | ಬನ್ನಿಯ ಸಮಿತ್ತನ್ನು ಉಖ್ಯಾಗ್ನಿಯಲ್ಲಿ ಹಾಕಲು. |
| **ಸಗ್ಂಶಿತಂ...ಪುರೋಹಿತಃ ॥** | ಅಧ್ವರ್ಯುವು ಯಜಮಾನನಿಂದ ಮಂತ್ರವನ್ನು ಹೇಳಿಸಿ ಉದುಂಬರಸಮಿತ್ತನ್ನು ಹಾಕಿಸಲು ಮೊದಲ ಮಂತ್ರ. |

---

✦**ಯಃ**=ಯಾವನು; **ಅಸ್ಮಭ್ಯಮ್**=ನಮಗೆ; **ಅರಾತೀಯಾತ್**=ನಮಗೆ ಕೊಡಬೇಕಾದುದನ್ನು ಕೊಡದ ಅರಾತಿಯಂತೆ ವರ್ತಿಸುತ್ತಾನೆಯೋ; **ಚ**=ಮತ್ತು; **ಯಃ ಜನಃ**=ಯಾವನು; **ನಃ ದ್ವೇಷತೇ**=ನಮ್ಮ ಕಾರ್ಯವಿಘಾತ ಮಾಡುವ ದ್ವೇಷಿಯೋ; **ಯಃ**=ಯಾವನು; **ಅಸ್ಮಾನ್ ನಿಂದಾತ್**=ನಮ್ಮನ್ನು ಬೈಯುವ ನಿಂದಕನೋ; **ಚ**=ಮತ್ತು; **ಯಃ**=ಯಾವನು; **ನಃ ದಿಪ್ಸಾತ್**=ನಮ್ಮನ್ನು ಕೊಲ್ಲಲು ಇಚ್ಛಿಸುವನೋ; **ತಮ್ ಸರ್ವಮ್**=ಅವರೆಲ್ಲರನ್ನೂ; **ಮಸ್ಮಸಾ ಕುರು**=ಪುಡಿ ಪುಡಿ ಮಾಡಿ ತಿಂದು ಹಾಕು. ✦[ಅಗ್ನಿಯೇ!]**ಮೇ**=ನನ್ನ; **ಬ್ರಹ್ಮ**=ಬ್ರಾಹ್ಮಣ್ಯವು; **ಸಗ್ಂಶಿತಮ್**=ಶಾಸ್ತ್ರಮಾರ್ಗಾನುವರ್ತಿಯಾಗಿ ಚೆನ್ನಾಗಿ ತೀಕ್ಷ್ಣವಾಗಿ [ಸ್ವಕಾರ್ಯಕ್ಷಮವಾಗಿ] ಇರಲಿ; [ಹಾಗೆಯೇ] **ವೀರ್ಯಮ್**=ಇಂದ್ರಿಯಶಕ್ತಿಯೂ; **ಬಲಮ್**=ದೇಹಶಕ್ತಿಯೂ;

## ಸಗ್ಂಶಿತಂ ಕ್ಷತ್ರಂ ಜಿಷ್ಣು ಯಸ್ಯಾಹಮಸ್ಮಿ ಪುರೋಹಿತಃ ॥
## ಉದೇಷಾಂ ಬಾಹೂ ಅತಿರಮುದ್ವರ್ಚ ಉದೂ ಬಲಮ್ ।

---

ಸಗ್ಂಶಿತಮಿತಿ ಸಮ್-ಶಿತಮ್ । ಕ್ಷತ್ರಮ್ । ಜಿಷ್ಣು । ಯಸ್ಯ । ಅಹಮ್ । ಅಸ್ಮಿ ।
ಪುರೋಹಿತ ಇತಿ ಪುರಃ-ಹಿತಃ ॥ ಉದಿತಿ । ಏಷಾಮ್ । ಬಾಹೂ ಇತಿ । ಅತಿರಮ್ ।
ಉದಿತಿ । ವರ್ಚಃ । ಉದಿತಿ । ಉ । ಬಲಮ್ ॥

---

| ಮಂತ್ರ | ವಿನಿಯೋಗ |
|---|---|
| ಉದೇಷಾಂ...ಅಹಮ್ ॥ | ಅಧ್ವರ್ಯುವು ಯಜಮಾನನಿಂದ ಮಂತ್ರವನ್ನು ಹೇಳಿಸಿ ಉದುಂಬರಸಮಿತ್ತನ್ನು ಹಾಕಿಸಲು ಎರಡನೆಯ ಮಂತ್ರ. |

---

**ಸಗ್ಂಶಿತಮ್**=[ಇವೆರಡೂ ನಿನ್ನ ಅನುಗ್ರಹದಿಂದ] ಚೆನ್ನಾಗಿ ತೀಕ್ಷ್ಣವಾಗಿರಲಿ; **ಯಸ್ಯ**=ಯಾವ ರಾಜನಿಗೆ; **ಅಹಮ್**=ನಾನು; **ಪುರೋಹಿತಃ ಅಸ್ಮಿ**=ಪುರೋಹಿತನಾಗಿ ಇರುವೆನೋ; **ಮೇ**=[ನನ್ನ ನಿರ್ದೇಶವನ್ನು ಅನುಸರಿಸಿ] ನನ್ನದಾದ; **ಕ್ಷತ್ರಮ್**=ಆ ರಾಜನ ಕ್ಷತ್ರಿಯಶಕ್ತಿಯು; **ಸಗ್ಂಶಿತಮ್**=ಚೆನ್ನಾಗಿ ತೀಕ್ಷ್ಣವಾಗಿ; **ಜಿಷ್ಣು**=ಜಯಶೀಲವಾಗಿರಲಿ. ✦**ಏಷಾಮ್**=ಈ ಬ್ರಾಹ್ಮಣ-ಕ್ಷತ್ರಿಯರ; **ಬಾಹೂ**=ತೋಳುಗಳನ್ನು; [ಬಾಹುಬಲವನ್ನು] **ಉತ್ ಅತಿರಮ್**=ವೃದ್ಧಿಗೊಳಿಸಿದೆನು; **ವರ್ಚಃ**=ಕಾಂತಿಯನ್ನೂ; **ಉತ್ ಅತಿರಮ್**=ವೃದ್ಧಿಗೊಳಿಸಿದೆನು; **ಉ**=ಮತ್ತು; **ಬಲಮ್**=ದೇಹಬಲವನ್ನೂ; **ಉತ್ ಅತಿರಮ್**=ವೃದ್ಧಿಗೊಳಿಸಿದೆನು.

---

ನಾಲ್ಕು ಬಗೆಯ ಶತ್ರುಗಳುಂಟು. ಕೊಡಬೇಕಾದುದನ್ನು ಕೊಡದೆ ಇರುವವನೊಬ್ಬನು. ಕೆಲಸಕ್ಕೆ ಅಡ್ಡಿಪಡಿಸುವವನೊಬ್ಬನು. ನಿಂದಿಸುವವನೊಬ್ಬನು ಮತ್ತು ಕೊಲ್ಲಬಯಸುವವನೊಬ್ಬನು. ಇವರೆಲ್ಲರನ್ನೂ ಅಗ್ನಿಯು ನಾಶಪಡಿಸಲೆಂಬ ಪ್ರಾರ್ಥನೆಯಿದು.

ತಿನ್ನುವಾಗ ಉಂಟಾಗುವ ಶಬ್ದದ ಅನುಕರಣೆ 'ಮಸ್ಮಸಾ' ಎಂದು ಶ್ರುತಿಯು ಹೇಳಿದೆ.

ಕ್ಷಿಣೋಮಿ ಬ್ರಹ್ಮಣಾಽಮಿತ್ರಾನುನ್ನಯಾಮಿ

[ನಯಾಮಿ(೪೦)] ಸ್ವಾಗ್ಂ ಅಹಮ್ ॥ ದೃಶಾನೋ ರುಕ್ಮ

ಉರ್ವ್ಯಾ ವ್ಯದ್ಯೌದ್ದುರ್ಮರ್ಷಮಾಯುಶ್ರಿಯೇ ರುಚಾನಃ ।

ಅಗ್ನಿರಮೃತೋ ಅಭವದ್ವಯೋಭಿ-

---

ಕ್ಷಿಣೋಮಿ । ಬ್ರಹ್ಮಣಾ । ಅಮಿತ್ರಾನ್ । ಉದಿತಿ । ನಯಾಮಿ ।(೪೦)। ಸ್ವಾನ್ । ಅಹಮ್ ॥ ದೃಶಾನಃ । ರುಕ್ಮಃ । ಉರ್ವ್ಯಾ । ವೀತಿ । ಅದ್ಯೌತ್ । ದುರ್ಮರ್ಷಮಿತಿ ದುಃ-ಮರ್ಷಮ್ ॥ ಆಯುಃ । ಶ್ರಿಯೇ । ರುಚಾನಃ ॥ ಅಗ್ನಿಃ । ಅಮೃತಃ । ಅಭವತ್ । ವಯೋಭಿರಿತಿ ವಯಃ-ಭಿಃ ।

---

| ಮಂತ್ರ | ವಿನಿಯೋಗ |
|---|---|
| ದೃಶಾನೋ...ಸುರೇತಾಃ ॥ | ಇಪ್ಪತ್ತೊಂದು ಬೊಟ್ಟುಗಳುಳ್ಳ ದಾರದಲ್ಲಿ ಪೋಣಿಸಿರುವ ಚಿನ್ನದ ಹಾರವನ್ನು ಯಜಮಾನನು ಧರಿಸಲು. |

---

**ಬ್ರಹ್ಮಣಾ**=ನನ್ನ ಮಂತ್ರಬಲದಿಂದ; **ಅಮಿತ್ರಾನ್**=ಹಗೆಗಳನ್ನು; **ಕ್ಷಿಣೋಮಿ**=ಕ್ಷೀಣರನ್ನಾಗಿ ಮಾಡುತ್ತೇನೆ. **ಅಹಮ್**=ನಾನು; **ಸ್ವಾನ್**=ನನ್ನವರನ್ನು; **ಉನ್ನಯಾಮಿ**=ಮೇಲೆತ್ತುವೆನು. [ಉತ್ಕೃಷ್ಟರನ್ನಾಗಿ ಮಾಡುವೆನು] ✦**ದೃಶಾನಃ**=ನೋಡಲು ಚೆನ್ನಾಗಿರುವ; **ರುಕ್ಮಃ**=ಸುವರ್ಣಾಭರಣವು; **ಉರ್ವ್ಯಾ**=ವಿಶೇಷಕಾಂತಿಯಿಂದ ಕೂಡಿ; **ದುರ್ಮರ್ಷಮ್**=ತಡೆಯಲಾಗದ; **ಆಯುಃ**=ಆಯುಸ್ಸನ್ನು; **ಶ್ರಿಯೇ**=ಆಶ್ರಯಿಸುವುದಕ್ಕೆ; **ರುಚಾನಃ**=ಇಚ್ಛಿಸುವುದಾಗಿ; **ವ್ಯದ್ಯೌತ್**=ವಿಶೇಷವಾಗಿ ಪ್ರಕಾಶಿಸಿತು. **ಅಗ್ನಿಃ**=ಅಗ್ನಿಯು [ಆಭರಣರೂಪವಾದ ಅಗ್ನಿಯೆಂದು ವರ್ಣಿಸಲಾಗಿದೆ] **ವಯೋಭಿಃ**=ಹವೀರೂಪವಾದ ಅನ್ನಗಳಿಂದ; **ಅಮೃತಃ ಅಭವತ್**=ನಾಶರಹಿತನಾಗಿರುವನು;

ಯದೇನಂ ದ್ಯೌರಜನಯತ್ಸುರೇತಾಃ ॥ ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ । ವಿ ನಾಕಮಖ್ಯತ್ಸವಿತಾ ವರೇಣ್ಯೋ-

---

ಯತ್ । ಏನಮ್ । ದ್ಯೌಃ । ಅಜನಯತ್ । ಸುರೇತಾ ಇತಿ ಸು-ರೇತಾಃ ॥ ವಿಶ್ವಾ । ರೂಪಾಣಿ । ಪ್ರತೀತಿ । ಮುಂಚತೇ । ಕವಿಃ । ಪ್ರೇತಿ । ಅಸಾವೀತ್ । ಭದ್ರಮ್ । ದ್ವಿಪದ ಇತಿ ದ್ವಿ-ಪದೇ । ಚತುಷ್ಪದ ಇತಿ ಚತುಃ-ಪದೇ ॥ ವೀತಿ । ನಾಕಮ್ । ಅಖ್ಯತ್ । ಸವಿತಾ । ವರೇಣ್ಯಃ ।

---

| ಮಂತ್ರ | ವಿನಿಯೋಗ |
|---|---|
| ವಿಶ್ವಾ ರೂಪಾಣಿ...ವಿರಾಜತಿ ॥ | ಉಖ್ಯವನ್ನು ಧರಿಸುವ ನೆಲವು (ಶಿಕ್ಯ) ಹಗ್ಗವನ್ನು ಹಾಕಿಕೊಳ್ಳುವುದಕ್ಕಾಗಿ |

---

**ಯತ್**=ಏತಕ್ಕೆಂದರೆ; **ಏನಮ್**=ಈ ಅಗ್ನಿಯನ್ನು; **ಸುರೇತಾಃ**=ಒಳ್ಳೆಯ ರೇತಸ್ಸುಳ್ಳ; **ದ್ಯೌಃ**=ದ್ಯುಲೋಕವಾಸಿಯಾದ ದೇವಗಣವು **ಅಜನಯತ್**=ಉತ್ಪಾದಿಸಿದೆ. ✦**ಕವಿಃ**=ವಿದ್ವಾಂಸನಾದ; **ವರೇಣ್ಯಃ**=ಶ್ರೇಷ್ಠನಾದ; **ಸವಿತಾ**=ಪ್ರೇರಕನಾದ ಸವಿತೃ ದೇವನು; **ವಿಶ್ವಾ ರೂಪಾಣಿ**=ಎಲ್ಲ ಜಗತ್ತಿನ ರೂಪಗಳನ್ನೂ; **ಪ್ರತಿ ಮುಂಚತೇ**=ತನ್ನದನ್ನಾಗಿ ಮಾಡಿಕೊಳ್ಳುತ್ತಾನೆ/ಬೆಳಗಿಸುತ್ತಾನೆ. **ದ್ವಿಪದೇ**=ಮಾನವಾದಿ ಎರಡು ಕಾಲಿನ ಪ್ರಾಣಿಗಳಿಗೂ; **ಚತುಷ್ಪದೇ**=ಗವಾದಿ ನಾಲ್ಕು ಕಾಲಿನ ಪ್ರಾಣಿಗಳಿಗೂ; **ಭದ್ರಮ್**=ಸ್ವೀಯಕರ್ಮಪ್ರಕಾಶಕರೂಪವಾದ ಶ್ರೇಯಸ್ಸನ್ನು; **ಪ್ರ ಅಸಾವೀತ್**=ಉಂಟುಮಾಡಿಕೊಟ್ಟನು. **ನಾಕಮ್**=ಸ್ವರ್ಗವನ್ನು; **ವಿ ಅಖ್ಯತ್**=ವಿಶೇಷವಾಗಿ ಪ್ರಕಾಶಗೊಳಿಸಿದನು.

–ऽನು ಪ್ರಯಾಣಮುಷಸೋ ವಿರಾಜತಿ । ನಕ್ತೋೇಷಾಸಾ

ಸಮನಸಾ ವಿರೂಪೇ ಧಾಪಯೇತೇ ಶಿಶುಮೇಕಗ್ಂ ಸಮೀಚೀ ।

ದ್ಯಾವಾಕ್ಷಾಮಾ ರುಕ್ಮೋ [ರುಕ್ಮಃ(೪೧)] ಅಂತರ್ವಿಭಾತಿ

ದೇವಾ ಅಗ್ನಿಂ ಧಾರಯನ್ದ್ರವಿಣೋದಾಃ ॥

---

ಅನ್ವಿತಿ । ಪ್ರಯಾಣಮಿತಿ ಪ್ರ–ಯಾನಮ್ । ಉಷಸಃ । ವೀತಿ । ರಾಜತಿ ॥ ನಕ್ತೋೇಷಾಸಾ । ಸಮನಸೇತಿ ಸ–ಮನಸಾ । ವಿರೂಪೇ ಇತಿ ವಿ–ರೂಪೇ । ಧಾಪಯೇತೇ ಇತಿ । ಶಿಶುಮ್ । ಏಕಮ್ । ಸಮೀಚೀ ಇತಿ ॥ ದ್ಯಾವಾ । ಕ್ಷಾಮ । ರುಕ್ಮಃ । (೪೧) । ಅಂತಃ । ವೀತಿ । ಭಾತಿ । ದೇವಾಃ । ಅಗ್ನಿಮ್ । ಧಾರಯನ್ । ದ್ರವಿಣೋದಾ ಇತಿ ದ್ರವಿಣಃ–ದಾಃ ।

---

| ಮಂತ್ರ | ವಿನಿಯೋಗ |
|---|---|
| ನಕ್ತೋೇಷಾಸಾ...ದ್ರವಿಣೋದಾಃ ॥ | ಕೃಷ್ಣಾಜಿನವನ್ನು ಹೊದೆಯಲು |

---

ಉಷಸಃ ಪ್ರಯಾಣಮ್ ಅನು=ಉಷಃಕಾಲವು ಕಳೆಯುವುದನ್ನು ಅನುಸರಿಸಿ/ಉಷಃ ಕಾಲಾನಂತರ; ವಿರಾಜತಿ=ವಿಶೇಷವಾಗಿ ಪ್ರಕಾಶಿಸುತ್ತಾನೆ; +ಸಮನಸಾ=ಐಕಮತ್ಯ ವುಳ್ಳ; ವಿರೂಪೇ=ವಿಭಿನ್ನವಾದ ರೂಪವುಳ್ಳ; ನಕ್ತೋೇಷಾಸಾ=ಹಗಲು–ರಾತ್ರಿಗಳು; ಏಕಮ್ ಶಿಶುಮ್=ಅಗ್ನಿರೂಪವಾದ ಶಿಶುವನ್ನು; ಸಮೀಚೀ=ಚೆನ್ನಾಗಿ ನೋಡಿ ಕೊಳ್ಳವುಗಳಾಗಿ; ಧಾಪಯೇತೇ=ಯಜಮಾನಕರ್ತೃಕವಾಗಿ ಮಾಡುತ್ತಿರುತ್ತವೆ; ರುಕ್ಮಃ=ಸುವರ್ಣದಂತೆ ಪ್ರಕಾಶಮಾನನಾದ ಈ ಅಗ್ನಿಯು; ದ್ಯಾವಾ=ದ್ಯುಲೋಕದ ಲ್ಲಿಯೂ; ಕ್ಷಾಮ=ಭೂಮಿಯಲ್ಲಿಯೂ; ಅಂತಃ=ಮಧ್ಯದ ಅಂತರಿಕ್ಷಲೋಕದಲ್ಲಿಯೂ; ವಿಭಾತಿ=ವಿಶೇಷವಾಗಿ ಪ್ರಕಾಶಿಸುತ್ತಾನೆ; ದೇವಾಃ=ದೇವಶಬ್ದವಾಚ್ಯವಾದ ಪ್ರಾಣ ಗಳು; ದ್ರವಿಣೋದಾಃ=ಯಾಗಫಲರೂಪವಾಗಿ ಧನವನ್ನು ಕೊಡುವವುಗಳಾಗಿ; ಅಗ್ನಿಮ್ =ಈ ಅಗ್ನಿಯನ್ನು; ಧಾರಯನ್=ಧರಿಸಿದವು.

**ಸುಪರ್ಣೋಽಸಿ ಗರುತ್ಮಾನ್ತ್ರಿವೃತ್ತೇ ಶಿರೋ ಗಾಯತ್ರಂ ಚಕ್ಷು**

**ಸ್ತೋಮ ಆತ್ಮಾ ಸಾಮ ತೇ ತನೂರ್ವಾಮದೇವ್ಯಂ**

---

ಸುಪರ್ಣ ಇತಿ ಸು-ಪರ್ಣಃ । ಅಸಿ । ಗರುತ್ಮಾನ್ । ತ್ರಿವೃದಿತಿ ತ್ರಿ-ವೃತ್ । ತೇ । ಶಿರಃ ।

ಗಾಯತ್ರಮ್ । ಚಕ್ಷುಃ । ಸ್ತೋಮಃ । ಆತ್ಮಾ । ಸಾಮ । ತೇ । ತನೂಃ ।

ವಾಮದೇವ್ಯಮಿತಿ ವಾಮ-ದೇವ್ಯಮ್ ।

---

| ಮಂತ್ರ | ವಿನಿಯೋಗ |
|---|---|
| ಸುಪರ್ಣೋಽಸಿ...ಸಾಮ ॥ | ಉಖ್ಯಾಗ್ನಿಯ ಅವೇಕ್ಷಣವನ್ನು ಮಾಡಲು. |

---

✦[ಉಖ್ಯಾಗ್ನಿಯೇ!]ಗರುತ್ಮಾನ್=ಒಳ್ಳೆಯ ಗರಿಗಳುಳ್ಳ; **ಸುಪರ್ಣಃ ಅಸಿ**=ಗರುಡನಾಗಿದ್ದೀಯೆ;* **ತ್ರಿವೃತ್**=ತ್ರಿವೃತ್ ಸ್ತೋಮವು; **ತೇ ಶಿರಃ**=ನಿನ್ನ ತಲೆ; **ಗಾಯತ್ರಮ್ ಚಕ್ಷುಃ**=ಗಾಯತ್ರಸಾಮವು ಕಣ್ಣು; **ಸ್ತೋಮಃ ಆತ್ಮಾ**=ಪಂಚದಶಾದಿಸ್ತೋಮಜಾತವು ಜೀವಾತ್ಮನು; **ವಾಮದೇವ್ಯಮ್ ಸಾಮ**=ವಾಮದೇವ್ಯಸಾಮವು; **ತೇ ತನೂಃ**=ನಿನ್ನ ತಲೆಯನ್ನು ಬಿಟ್ಟು ಉಳಿದ ಶರೀರರೂಪವಾಗಿದೆ.

---

ಹೇ! ಅಗ್ನಿಯೇ! ಬ್ರಾಹ್ಮಣ್ಯವು ಕ್ಷತ್ರಿಯರಕ್ಷಿತವಾಗಿ ತನ್ನ ಕಾರ್ಯದಲ್ಲಿ ಸಮರ್ಥವಾಗಲಿ. ಹಾಗೆಯೇ ಕ್ಷತ್ರಿಯಶಕ್ತಿಯೂ ಬ್ರಾಹ್ಮಣನ ನಿರ್ದೇಶದಿಂದ ಧರ್ಮಾನುವರ್ತಿಯಾಗಿ ಜಯಶೀಲವಾಗಿರಲೆಂದು ಪ್ರಾರ್ಥಿಸುತ್ತಾನೆ.

ಅಧ್ವರ್ಯುವು ಯಜಮಾನನಿಂದ ಸಮಿತ್ತನ್ನು ಹಾಕಿಸುತ್ತಾ ಬ್ರಾಹ್ಮಣ-ಕ್ಷತ್ರಿಯರಿಬ್ಬರ ಬಲವನ್ನು ಹೆಚ್ಚಿಸಿದೆನೆಂದೂ, ಅನ್ಯೋನ್ಯಾಶ್ರಯದಿಂದ ಬ್ರಾಹ್ಮಣ-ಕ್ಷತ್ರಿಯರಿಬ್ಬರೂ ವೃದ್ಧಿ ಹೊಂದುವರೆಂದೂ ಹೇಳುತ್ತಾನೆ. ಅನ್ಯೋನ್ಯಾಶ್ರಯದಿಂದ ಉಭಯವೃದ್ಧಿಯು ಇಲ್ಲಿ ಪ್ರತಿಪಾದಿತವಾಗಿದೆ.

---

* ಪಕ್ಷಿಯ ಆಕಾರವಾಗಿ ಚಿತಿಗಳನ್ನು ನಿರ್ಮಿಸುವುದರಿಂದ ಹೀಗೆ ವರ್ಣಿಸಲಾಗಿದೆ.

**ಬೃಹದ್ರಥಂತರೇ ಪಕ್ಷೌ ಯಜ್ಞಾಯಜ್ಞಿಯಂ ಪುಚ್ಛಂ ಛಂದಾಗ್ಂ ಸ್ಯಂಗಾನಿ ಧಿಷ್ಣಿಯಾಶ್ಶಫಾ ಯಜೂಗ್ಂಷಿ ನಾಮ ।**

---

ಬೃಹದ್ರಥಂತರೇ ಇತಿ ಬೃಹತ್-ರಥಂತರೇ । ಪಕ್ಷೌ । ಯಜ್ಞಾಯಜ್ಞಿಯಮ್ । ಪುಚ್ಛಮ್ । ಛಂದಾಗ್ಂಸಿ । ಅಂಗಾನಿ । ಧಿಷ್ಣಿಯಾಃ । ಶಫಾಃ । ಯಜೂಗ್ಂಷಿ । ನಾಮ ॥

---

ಬೃಹದ್ರಥಂತರೇ ಪಕ್ಷೌ=ಬೃಹದ್ರಥಂತರಸಾಮಗಳು ರೆಕ್ಕೆಗಳಾಗಿವೆ; **ಯಜ್ಞಾಯಜ್ಞಿಯಮ್ ಪುಚ್ಛಮ್**=ಯಜ್ಞಾಯಜ್ಞಿಯ ಸಾಮವು ಹಿಂದಿನ ರೆಕ್ಕೆ (ಪುಚ್ಛ) ಗಳಾಗಿವೆ; **ಛಂದಾಗ್ಂಸಿ ಅಂಗಾನಿ**=ಗಾಯತ್ರ್ಯಾದಿಛಂದಸ್ಸುಗಳು ಹೃದಯಾದಿ ಅಂಗಗಳಾಗಿವೆ; **ಧಿಷ್ಣಿಯಾಃ ಶಫಾಃ**=ಸೌಮಿಕವೇದಿಯಲ್ಲಿರುವ ಹೋತ್ರಿಯಾದಿ ಧಿಷ್ಣಿಯಗಳು ಗೊರಸುಗಳು; **ಯಜೂಗ್ಂಷಿ ನಾಮ**=ಯಜುಸ್ಸು ಗಳು ನಾಮರೂಪವಾಗಿವೆ.

---

ಅಗ್ನಿಯು ತಾಪಜನಕನಾದುದರಿಂದ ಮೃತ್ಯುರೂಪನು. ಚಿನ್ನವು ಕಾಯಿಸಿದರೂ ನಾಶವಾಗದಿರುವುದರಿಂದ ಅದು ಅಮೃತರೂಪವಾದ ತೈಜಸವಾಗಿದೆ. ಆ ಚಿನ್ನದ ಹಾರವು ಆಯುರ್ದಾಯಕವು. ವಿಶೇಷವಾಗಿ ಪ್ರಕಾಶಿಸುವುದೂ ಆಗಿದೆ. ಅಮರರಾದ ದೇವತೆಗಳಿಂದ ಉತ್ಪಾದಿಸಲ್ಪಟ್ಟ ಸುವರ್ಣವು ಅಮೃತವೇ ಆಗಿದೆ.

ಅಗ್ನಿಯು ಹವಿಸ್ಸುಗಳಿಂದ ಅಮರನು. ಅಗ್ನಿಧಾರಣೆಯಿಂದ ಯಜಮಾನನಿಗೆ ಉಂಟಾಗಬಹುದಾದ ಬಾಧೆಯನ್ನು ಇಪ್ಪತ್ತೊಂದು ಬೊಟ್ಟುಗಳುಳ್ಳ ಸುವರ್ಣಹಾರವು ಹೋಗಲಾಡಿಸುತ್ತದೆ.

ಸೂರ್ಯನು ಶ್ರೇಷ್ಠನು. ಸೂರ್ಯೋದಯಾನಂತರ ಜಗತ್ತು ತನ್ನ ಕಾರ್ಯದಲ್ಲಿ ತೊಡಗುತ್ತದೆ. ಕರ್ಮಫಲವಾದ ಶ್ರೇಯಸ್ಸನ್ನು ಪಡೆಯುತ್ತದೆ. ಸೂರ್ಯನು ಸ್ವರ್ಗ ಲೋಕವನ್ನೂ ಬೆಳಗುತ್ತಾನೆ. ಉಷಃಕಾಲಾನಂತರ ಅಧಿಕವಾಗಿ ಬೆಳಗುತ್ತಾನೆ. ಇಂತಹ ಸವಿತೃದೇವನು ನಮ್ಮನ್ನು ಅನುಗ್ರಹಿಸಲಿ.

ಈ ಮಂತ್ರದಿಂದ ಕೃಷ್ಣಾಜಿನಧಾರಣೆಯನ್ನು ಸ್ತುತಿಸಲಾಗಿದೆ. ಹಗಲು-ರಾತ್ರಿಗಳು

**ಸುಪರ್ಣೋಽಸಿ ಗರುತ್ಮಾನ್ದಿವಂ ಗಚ್ಛ ಸುವಃ ಪತ ॥ ೪೨-10 ॥**

[ನಾಭಾ ವನೇ ಯೇ ನಯಾಮಿ ಕ್ಷಾಮಾ ರುಕ್ಮೋಽಷ್ಟಾತ್ರಿಂಶಚ್ಚ ॥]

---

ಸುಪರ್ಣ ಇತಿ ಸು-ಪರ್ಣಃ । ಅಸಿ । ಗರುತ್ಮಾನ್ । ದಿವಮ್ । ಗಚ್ಛ । ಸುವಃ ।

ಪತ ॥ ೪೨ ॥

---

| ಮಂತ್ರ | ವಿನಿಯೋಗ |
|---|---|
| **ಸುಪರ್ಣೋಽಸಿ...ಪತ ॥** | ಉಖ್ಯಾಗ್ನಿಯನ್ನು ತೆಗೆದುಕೊಂಡು ಏಳಲು. |

---

✦[ಅಗ್ನಿಯೇ! ನೀನು]**ಗರುತ್ಮಾನ್ ಸುಪರ್ಣಃ ಅಸಿ**=ಪಕ್ಷಿಯಾದ ಗರುಡನಂತಿರುವೆ; **ದಿವಮ್ ಗಚ್ಛ**=ಆಕಾಶಕ್ಕೆ ಹಾರು; **ಸುವಃ ಪತ**=ಅನಂತರ ಸ್ವರ್ಗಕ್ಕೂ ಹಾರು.

---

ಐಕಮತ್ಯವನ್ನು ಹೊಂದಿವೆ. ಹಗಲು ಬೆಳ್ಳಗಿದೆ. ರಾತ್ರಿಯು ಕಪ್ಪಗಿದೆ. ಹೀಗೆ ಇವು ವಿಭಿನ್ನರೂಪಗಳನ್ನು ಹೊಂದಿವೆ. ಈ ಕೃಷ್ಣಾಜಿನವನ್ನು ಧರಿಸಿ ಯಜಮಾನನು ಅಗ್ನಿಯನ್ನು ಧರಿಸುವುದರಿಂದ ಈ ಅಹೋರಾತ್ರಿಗಳು ಅಗ್ನಿರೂಪನಾದ ಶಿಶುವನ್ನು ಧರಿಸಿದಂತಾಗುತ್ತದೆ. ಈ ಅಗ್ನಿಯು ದ್ಯುಲೋಕ-ಭೂಲೋಕ-ಅಂತರಿಕ್ಷಲೋಕ ಈ ಎಲ್ಲ ಲೋಕಗಳಲ್ಲಿಯೂ ಪ್ರಕಾಶಿಸುತ್ತಾನೆ. ದೇವರೂಪವಾದ ಪ್ರಾಣಗಳು ಯಜಮಾನನಿಗೆ ಯಾಗಫಲರೂಪವಾದ ಧನವನ್ನು ಕೊಡುತ್ತಾ ಅಗ್ನಿಯನ್ನು ಧರಿಸುತ್ತವೆ.

ಹೇ! ಉಖ್ಯಾಗ್ನಿಯೇ! ನೀನು ಗರುಡನಂತಿರುವೆ. ಸ್ತೋಮ-ಸಾಮ-ಛಂದಸ್ಸು-ಧಿಷ್ಣಿಯ -ಯಜುಸ್ಸುಗಳು ನಿನ್ನ ಅವಯವಗಳಂತಿವೆ. ಹೆಸರಿನಂತಿವೆ. ಹೀಗೆ ಚಯನಾಗ್ನಿಯು ಗರುಡನಂತಿದೆ.

ಹೇ! ಉಖ್ಯಾಗ್ನಿಯೇ! ನೀನು ಗರುಡನಂತಿರುವೆ. ಇಲ್ಲಿಂದ ಆಕಾಶಕ್ಕೆ ನೆಗೆದು ಬಳಿಕ ಸ್ವರ್ಗಕ್ಕೂ ಹಾರುವಂತಹವನಾಗು.

ಶ್ರುತಿಯಲ್ಲಿ ಅಗ್ನಿಶಬ್ದವು ಉಖ್ಯಾಗ್ನಿ ಎಂಬ ಅರ್ಥದಲ್ಲಿಯೂ, ಚಯನಾಗ್ನಿಯೆಂಬ ಅರ್ಥದಲ್ಲಿಯೂ ಇದೆ.

## ವಿನಿಯೋಗಸಂಗ್ರಹ

1-5ಯದಗ್ನೇ ಪಂಚಭಿಃ ಕಾಷ್ಠಂ ವಹ್ನಾವೌದುಂಬರಂ ಕ್ಷಿಪೇತ್ ।
6ದಂಷ್ಟ್ರಾಽಽಶ್ವತ್ಥೀಮಾದಧಾತಿ 7ಯೇ ಜ ವೈಕಂಕತೀಂ ತಥಾ ॥
8ಯೋ ಅಸ್ಮಭ್ಯಂ ಶಮೀಕಾಷ್ಠಂ 9-10ಸಂಶಿತದ್ವಯವಾಚನಮ್ ।
11ದೃಶಾ ರುಕ್ಮಂ ನಿಜೇ ಕಂಠೇ ಬದ್ಧ್ವಾ 12 ವಿಶ್ವೇತಿ ಮಂತ್ರತಃ ॥
ಸಾಗ್ನ್ಯಶಿಖಾಶಿಕ್ಯಪಾಶಂ ತು ಸ್ವಾಮ್ಯತ್ರ ಪ್ರತಿಮುಂಚತೇ ।
13ನಕ್ತೋಽಜಿನಂ ಚೋಪರಿಷ್ಟಾತ್ 14ಸುಪರ್ಣೋಽಗ್ನಿಮವೇಕ್ಷತೇ ॥
ಸುಪರ್ಣಃ15 ಸಾಗ್ನಿರುತ್ತಿಷ್ಠೇನ್ಮಂತ್ರಾಃ ಪಂಚದಶೇರಿತಾಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–15

ೞ❀ೞೞ❀ೞ

## ॥ ಏಕಾದಶೋಽನುವಾಕಃ ॥

ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ ।

ಸ ಇದ್ದೇವೇಷು ಗಚ್ಛತಿ ॥

---

ಅಗ್ನೇ । ಯಮ್ । ಯಜ್ಞಮ್ । ಅಧ್ವರಮ್ । ವಿಶ್ವತಃ । ಪರಿಭೂರಿತಿ ಪರಿ–ಭೂಃ ।

ಅಸಿ ॥ ಸಃ । ಇತ್ । ದೇವೇಷು । ಗಚ್ಛತಿ ॥

---

ಹತ್ತನೆಯ ಅನುವಾಕದಲ್ಲಿ ಉಖ್ಯಾಗ್ನಿಧಾರಣವು ಹೇಳಲ್ಪಟ್ಟಿತು. ಈ ಹನ್ನೊಂದನೆಯ ಅನುವಾಕದಲ್ಲಿ ಚಾತುರ್ಮಾಸ್ಯೇಷ್ಟಿಯ ವೈಶ್ವದೇವಪರ್ವದ ಹವಿಸ್ಸುಗಳ ಯಾಜ್ಯಾನುವಾಕ್ಯೆಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಯಂ...ಗಚ್ಛತಿ ॥ | ಪ್ರಥಮಾಜ್ಯಭಾಗದ ಪುರೋನುವಾಕ್ಯೆ. |

---

+ಅಗ್ನೇ=ಅಗ್ನಿಯೇ! ಯಮ್=ಯಾವ; ಅಧ್ವರಮ್=ಹಿಂಸಾರಹಿತವಾದ; ಯಜ್ಞಮ್=ಯಜ್ಞವನ್ನು; ವಿಶ್ವತಃ=ಎಲ್ಲ ಕಡೆಗಳಲ್ಲಿಯೂ; ಪರಿಭೂಃ ಅಸಿ=ಹೊಂದಿದವನಾಗಿರುತ್ತೀಯೋ; ಸಃ ಇತ್=ಆ ಯಜ್ಞವೇ; ದೇವೇಷು ಗಚ್ಛತಿ=ದೇವತೆಗಳಲ್ಲಿ ಹೋಗುತ್ತದೆ/ದೇವತೆಗಳಿಗೆ ಸೇರುತ್ತದೆ.

ಸೋಮ ಯಾಸ್ತೇ ಮಯೋಭುವ ಊತಯಃ ಸಂತಿ

ದಾಶುಷೇ । ತಾಭಿರ್ನೋಽವಿತಾ ಭವ ॥

*ಅಗ್ನಿರ್ಮೂರ್ಧಾ *ಭುವಃ ।

---

ಸೋಮ । ಯಾಃ । ತೇ । ಮಯೋಭುವ ಇತಿ ಮಯಃ–ಭುವಃ । ಊತಯಃ । ಸಂತಿ ।

ದಾಶುಷೇ ॥ ತಾಭಿಃ । ನಃ । ಅವಿತಾ । ಭವ ॥ ಅಗ್ನಿಃ । ಮೂರ್ಧಾ । ಭುವಃ ॥

---

*ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಮ್ ।

ಅಪಾಗ್ಂ ರೇತಾಗ್ಂಸಿ ಜಿನ್ವತಿ ॥

*ಭುವೋ ಯಜ್ಞಸ್ಯ ರಜಸಶ್ಚ ನೇತಾ ಯತ್ರಾ ನಿಯುದ್ಭಿಃ ಸಚಸೇ ಶಿವಾಭಿಃ । ದಿವಿ ಮೂರ್ಧಾನಂ ದಧಿಷೇ ಸುವರ್ಷಾಂ ಜಿಹ್ವಾಮಗ್ನೇ ಚಕೃಷೇ ಹವ್ಯವಾಹಮ್ ॥

---

| ಮಂತ್ರ | ವಿನಿಯೋಗ |
|---|---|
| ಸೋಮ...ಭವ ॥ | ಎರಡನೆಯ ಆಜ್ಯಭಾಗದ ಪುರೋನುವಾಕ್ಯೆ. |
| ಅಗ್ನಿರ್ಮೂರ್ಧಾ.. ॥ | ಆಗ್ನೇಯ ಅಷ್ಟಾಕಪಾಲಯಾಗದ ಪುರೋನುವಾಕ್ಯೆ (ಪ್ರತೀಕ) |
| ಭುವಃ...॥ | ಆಗ್ನೇಯ ಅಷ್ಟಾಕಪಾಲಯಾಗದ ಯಾಜ್ಯಾನುವಾಕ್ಯೆ (ಪ್ರತೀಕ) |

---

✦ಸೋಮ=ಸೋಮದೇವನೇ! ದಾಶುಷೇ=[ನಿನಗೆ ಹವಿಸ್ಸನ್ನು] ಕೊಡುವ ಯಜಮಾನನಿಗಾಗಿ; ಮಯೋಭುವಃ=ಸುಖವನ್ನು ಬಯಸುವ; ತೇ=ನಿನ್ನ; ಯಾಃ ಊತಯಃ ಸಂತಿ=ಯಾವ ರಕ್ಷಣಾಪ್ರಕಾರಗಳಿವೆಯೋ; ತಾಭಿಃ=ಆ ರಕ್ಷಣಾಪ್ರಕಾರಗಳಿಂದ; ನಃ=ನಮಗೆ; ಅವಿತಾ ಭವ=ರಕ್ಷಕನಾಗು.

---

*ಈ ಪ್ರತೀಕಮಂತ್ರಗಳು ತೈ. ಸಂ. 4.4.4. ರಲ್ಲಿ ಪಠಿತವಾಗಿವೆ.

# *ತ್ವಂ ನಃ ಸೋಮ *ಯಾ ತೇ ಧಾಮಾನಿ ।

ತ್ವಮ್ । ನಃ । ಸೋಮ । ಯಾ । ತೇ । ಧಾಮಾನಿ ॥

*ತ್ವಂ ನಃ ಸೋಮ ವಿಶ್ವತೋ ರಕ್ಷಾ ರಾಜನ್ನಘಾಯತಃ । ನ ರಿಷ್ಯೇತ್ತ್ವಾವತಃ ಸಖಾ ॥

*ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ ಯಾ ಪರ್ವತೇಷ್ವೋಷಧೀಷ್ವಪ್ಸು ।

ತೇಭಿರ್ನೋ ವಿಶ್ವೈಃ ಸುಮನಾ ಅಹೇಡನ್ರಾಜನ್ಸೋಮ ಪ್ರತಿ ಹವ್ಯಾ ಗೃಭಾಯ ॥

| ಮಂತ್ರ | ವಿನಿಯೋಗ |
|---|---|
| ತ್ವಂ ನಃ ಸೋಮ...॥ | ಸೋಮಯಾಗದ ಪುರೋನುವಾಕ್ಯೆ(ಪ್ರತೀಕ) |
| ಯಾ ತೇ ಧಾಮಾನಿ...॥ | ಸೋಮಯಾಗದ ಯಾಜ್ಯಾನುವಾಕ್ಯೆ(ಪ್ರತೀಕ) |

✦ಅಯಮ್ ಅಗ್ನಿಃ=ಈ ಅಗ್ನಿದೇವನು; ದಿವಃ=ದ್ಯುಲೋಕಕ್ಕೆ; ಕಕುತ್=[ಸೂರ್ಯ ರೂಪದಿಂದ] ಎತ್ತರವಾಗಿ; ಮೂರ್ಧಾ=ಶಿರಃಸ್ಥಾನದಲ್ಲಿದ್ದಾನೆ; ಪೃಥಿವ್ಯಾಃ= ಭೂಮಿಗೆ; ಪತಿಃ=[ದಾಹ–ಪಾಕಾದಿಗಳನ್ನು ಮಾಡುವುದರಿಂದ] ಪಾಲಕನಾಗಿದ್ದಾನೆ; ಅಪಾಮ್=ನೀರಿನ; ರೇತಾಗ್‌ಂಸಿ=ಕಾರ್ಯಗಳಾದ [ಸ್ಥಾವರಜಂಗಮಶರೀರಗಳನ್ನು] ಜಿನ್ವತಿ=[ಜಠರಾಗ್ನಿರೂಪದಿಂದ] ತೃಪ್ತಿಪಡಿಸುತ್ತಾನೆ. ✦[ಈ ಅಗ್ನಿಯು] ಭುವಃ=ಭೂ ಲೋಕದಲ್ಲಿನ; ಯಜ್ಞಸ್ಯ=ಯಜ್ಞಗಳ; ಚ=ಮತ್ತು; ರಜಸಃ=[ಆ ಯಜ್ಞದಲ್ಲಿ ಪ್ರವೃತ್ತಿಯನ್ನು ಉಂಟುಮಾಡುವ] ರಜೋಗುಣದ; ನೇತಾ=ನಿರ್ವಾಹಕನಾಗಿದ್ದಾನೆ; [ಅಂತಹ] ಅಗ್ನೇ=ಅಗ್ನಿದೇವನೇ! ಯತ್ರ=ಯಾವ [ದ್ಯುಲೋಕದಲ್ಲಿ] [ಸೂರ್ಯರೂಪ ನಾಗಿದ್ದುಕೊಂಡು]; ನಿಯುದ್ಭಿಃ=[ರಥದಲ್ಲಿ] ದೃಢವಾಗಿ ಕಟ್ಟಲ್ಪಟ್ಟಿರುವ; ಶಿವಾಭಿಃ= ಶ್ರೇಷ್ಠವಾದ ಕುದುರೆಗಳೊಡನೆ; ಸಚಸೇ=ಸೇರಿರುವೆಯೋ; ದಿವಿ=ಆ ದ್ಯುಲೋಕದಲ್ಲಿ; ಸುವರ್‌ಷಾಮ್=ಸ್ವರ್ಗಲೋಕದಲ್ಲಿ ಶಾಶ್ವತವಾಗಿರುವಂತಹ; ಮೂರ್ಧಾನಮ್= ಉನ್ನತಸ್ಥಿತಿಯನ್ನು; ದಧಿಷೇ=ಹೊಂದಿರುವೆ; [ಈ ಯಜ್ಞದಲ್ಲಿ] ಹವ್ಯವಾಹಮ್= ಹವಿಸ್ಸನ್ನು ಕೊಂಡೊಯ್ಯುವ; ಜಿಹ್ವಾಮ್=ಜ್ವಾಲೆಯನ್ನು; ಚಕೃಷೇ=ಚಾಚುವೆ.

*ಈ ಪ್ರತೀಕದಿಂದ ಕೂಡಿರುವ ಮಂತ್ರಗಳು ತೈ. ಸಂ. ೨.೩.೧೪ರಲ್ಲಿ ವಿವರಿಸಲ್ಪಟ್ಟಿವೆ. ಇಲ್ಲಿ ತಾತ್ಪರ್ಯ ವನ್ನು ನೀಡಲಾಗಿದೆ.

## ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।

## ಧಿಯೋ ಯೋ ನಃ ಪ್ರಚೋದಯಾತ್ ।

---

ತತ್ । ಸವಿತುಃ । ವರೇಣ್ಯಮ್ । ಭರ್ಗಃ । ದೇವಸ್ಯ । ಧೀಮಹಿ ॥ ಧಿಯಃ । ಯಃ । ನಃ । ಪ್ರಚೋದಯಾದಿತಿ ಪ್ರ-ಚೋದಯಾತ್ ।

---

| ಮಂತ್ರ | ವಿನಿಯೋಗ |
|---|---|
| ತತ್ಸವಿತುಃ...ಪ್ರಚೋದಯಾತ್ ॥ | ಸಾವಿತ್ರದ್ವಾದಶಕಪಾಲದ ಪುರೋನುವಾಕ್ಯೆ. |

---

✦ಯಃ=ಯಾವ ಸವಿತೃದೇವನು; ನಃ=ನಮ್ಮ; ಧಿಯಃ=ಬುದ್ಧಿಗಳನ್ನು; ಪ್ರಚೋದಯಾತ್=ಪ್ರಚೋದಿಸುತ್ತಾನೆಯೋ; ಸವಿತುಃ ದೇವಸ್ಯ ತತ್=ಸವಿತೃದೇವನ ಆ; ವರೇಣ್ಯಮ್=ಶ್ರೇಷ್ಠವಾದ; ಭರ್ಗಃ=ತೇಜಸ್ಸನ್ನು; ಧೀಮಹಿ=ಧ್ಯಾನಿಸುತ್ತೇವೆ.

---

ಅಗ್ನಿಯೇ! ಯಾವ ಹಿಂಸಾರಹಿತವಾದ ಯಜ್ಞವನ್ನು ನೀನು ಹೊಂದುತ್ತೀಯೋ ಆ ಯಜ್ಞವೇ ದೇವತೆಗಳನ್ನು ಹೊಂದುತ್ತದೆ.

ಸೋಮನೇ! ನೀನು ಹವಿಸ್ಸನ್ನು ಕೊಡುವ ಯಜಮಾನನಿಗೆ ಕ್ಷೇಮವನ್ನು ಬಯಸುವವನು. ನಿನ್ನ ಆರಕ್ಷಣೆಯ ಪ್ರಕಾರಗಳಿಂದ ನಮ್ಮ ರಕ್ಷಕನಾಗು.

ಅಗ್ನಿಯು ಸೂರ್ಯರೂಪದಿಂದ ದ್ಯುಲೋಕಕ್ಕೆ ತಲೆಯಂತಿರುತ್ತಾನೆ. ಅಗ್ನಿರೂಪದಿಂದ ದಾಹ-ಪಾಕಾದಿಗಳಿಂದ ಭೂಮಿಯ ಪಾಲಕನಾಗಿದ್ದಾನೆ. ಜಠರಾಗ್ನಿರೂಪದಿಂದ ನೀರಿನ ಕಾರ್ಯಗಳಾದ ಜಂಗಮಪ್ರಪಂಚವನ್ನು ತೃಪ್ತಿಪಡಿಸುವವನಾಗಿದ್ದಾನೆ.

ಅಗ್ನಿಯೇ! ನೀನು ಭೂಲೋಕದಲ್ಲಿ ನಡೆಯುವ ಯಜ್ಞಗಳಿಗೂ ಅದಕ್ಕೆ ಕಾರಣವಾದ ರಜೋಗುಣಕ್ಕೂ ಪ್ರವರ್ತಕನು. ಸೂರ್ಯರೂಪದಿಂದ ದ್ಯುಲೋಕದಲ್ಲಿ ಸರ್ವದಾ ಇರುವವನು. ಉತ್ತಮವಾದ ಅಶ್ವಗಳಿಂದ ಯುಕ್ತವಾದ ರಥದಲ್ಲಿ ಸಂಚರಿಸುವವನು. ದೇವತೆಗಳಿಗೆ ನಿನ್ನ ಜ್ವಾಲೆಗಳಿಂದ ಹವ್ಯಗಳನ್ನು ಕೊಡುವವನೂ ಆಗಿದ್ದೀಯೆ. ನೀನು ಪ್ರಸನ್ನನಾಗು.

ಅಚಿತ್ತೀ ಯಚ್ಚಕೃಮಾ ದೈವ್ಯೇ ಜನೇ ದೀನೈರ್ದಕ್ಷೈಃ ಪ್ರಭೂತೀ ಪೂರುಷತ್ವತಾ ॥ (೪೩) ॥ ದೇವೇಷು ಚ ಸವಿತ ರ್ಮಾನುಷೇಷು ಚ ತ್ವಂ ನೋ ಅತ್ರ ಸುವತಾದನಾಗಸಃ ॥

---

ಅಚಿತ್ತೀ । ಯತ್ । ಚಕೃಮ । ದೈವ್ಯೇ । ಜನೇ । ದೀನೈಃ । ದಕ್ಷೈಃ । ಪ್ರಭೂತೀತಿ ಪ್ರ-ಭೂತೀ । ಪೂರುಷತ್ವತೇತಿ ಪೂರುಷ-ತ್ವತಾ ॥ [(೪೩)] ದೇವೇಷು । ಚ । ಸವಿತಃ । ಮಾನುಷೇಷು । ಚ । ತ್ವಮ್ । ನಃ । ಅತ್ರ । ಸುವತಾತ್ । ಅನಾಗಸಃ ॥

---

| ಮಂತ್ರ | ವಿನಿಯೋಗ |
| --- | --- |
| ಅಚಿತ್ತೀ...ಅನಾಗಸಃ ॥ | ಸಾವಿತ್ರಯಾಗದ ಯಾಜ್ಯಾನುವಾಕ್ಯೆ. |

---

✦ಸವಿತಃ=ಸವಿತೃದೇವನೇ! ಪೂರುಷತ್ವತಾ=ದೇಹೇಂದ್ರಿಯಗಳೇ ನಾನೆಂಬ ಭ್ರಾಂತಿಯು; ಪ್ರಭೂತೀ=ದೃಢವಾಗಿದೆ; ಅಚಿತ್ತೀ=ಕರ್ತವ್ಯಾಕರ್ತವ್ಯಗಳ ಅಜ್ಞಾನ ದಿಂದ; ದೀನೈಃ=ದೈನ್ಯವನ್ನು ಹೊಂದಿರುವ; ದಕ್ಷೈಃ=ತಮ್ಮ ಕಾರ್ಯಗಳಲ್ಲಿ ಸಮರ್ಥ ವಾದ [ಇಂದ್ರಿಯಗಳಿಂದ]; ದೈವ್ಯೇ ಜನೇ=ದೇವತೆಗಳಿಗೆ ಸಂಬಂಧಿಸಿದ ಶರೀರದಲ್ಲಿ; ಯತ್=ಯಾವ ಪಾಪಗಳನ್ನು; ಚಕೃಮ=ಮಾಡಿರುತ್ತೇವೆಯೋ; ತ್ವಮ್=ನೀನು; ಅತ್ರ=ಈ ಯಾಗದಲ್ಲಿಯೂ; ದೇವೇಷು=ದೇವತೆಗಳ ವಿಷಯದಲ್ಲಿಯೂ; ಚ= ಮತ್ತು; ಮಾನುಷೇಷು ಚ=ಮನುಷ್ಯರ ವಿಷಯದಲ್ಲಿಯೂ; ನಃ=ನಮ್ಮನ್ನು; ಅನಾಗಸಃ =ಪಾಪರಹಿತರನ್ನಾಗಿ/ಪಾಪರಹಿತರಾಗುವಂತೆ; ಸುವತಾತ್=ಮಾಡು/ಪ್ರೇರಿಸು.

---

**ತ್ವಂ ನಃ**=ಸೋಮನೇ! ನಮ್ಮನ್ನು ಹಿಂಸಿಸುವವರಿಂದ ನಮಗೆ ಸರ್ವತ್ರ ರಕ್ಷಣೆಯನ್ನು ಕೊಡು. ರಾಜನಾದ ನಿನ್ನಂತಹವರ ಸ್ನೇಹಿತನಾದ ಯಾವನೂ ಹಿಂಸೆಗೆ ಒಳಗಾಗು ವುದಿಲ್ಲ. ಯಾರೂ ಅವನನ್ನು ಹಿಂಸಿಸಲಾರರು.

**ಯಾ ತೇ ಧಾಮಾನಿ**=ರಾಜನಾದ ಸೋಮನೇ! ನೀನು ದ್ಯುಲೋಕ-ಭೂಲೋಕಾದಿ ಗಳಲ್ಲಿ ಯಾವ ಪ್ರದೇಶದಲ್ಲಿ ಇದ್ದರೂ ಬಂದು ನಮ್ಮ ಹವಿಸ್ಸುಗಳನ್ನು ಸ್ವೀಕರಿಸು. ನಮ್ಮ ವಿಷಯದಲ್ಲಿ ಒಳ್ಳೆಯ ಮನಸ್ಸುಳ್ಳವನಾಗು. ನಮ್ಮನ್ನು ಹಿಂಸಿಸಬೇಡ.

ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಮ್ ।
ಯಜ್ಞಂ ದಧೇ ಸರಸ್ವತೀ ॥

---

ಚೋದಯಿತ್ರೀ । ಸೂನೃತಾನಾಮ್ । ಚೇತಂತೀ । ಸುಮತೀನಾಮಿತಿ ಸು-ಮತೀನಾಮ್ ॥ ಯಜ್ಞಮ್ । ದಧೇ । ಸರಸ್ವತೀ ॥

---

| ಮಂತ್ರ | ವಿನಿಯೋಗ |
|---|---|
| ಚೋದಯಿತ್ರೀ...ಸರಸ್ವತೀ ॥ | ಸಾರಸ್ವತಚರುಯಾಗದ ಪುರೋನುವಾಕ್ಯೆ. |

---

✦ಸೂನೃತಾನಾಮ್=ಪ್ರಿಯವಾಕ್ಯಗಳನ್ನು; ಚೋದಯಿತ್ರೀ=ಪ್ರೇರಿಸುವ; ಸುಮತೀನಾಮ್ =ಒಳ್ಳೆಯ ಬುದ್ಧಿಯುಳ್ಳ ನಮ್ಮ ಕರ್ತವ್ಯಗಳನ್ನು; ಚೇತಂತೀ=ತಿಳಿದಿರುವ; ಸರಸ್ವತೀ =ಸರಸ್ವತೀದೇವಿಯು; ಯಜ್ಞಮ್=ಯಜ್ಞವನ್ನು; ದಧೇ= ಧರಿಸುತ್ತಾಳೆ.

---

ಸವಿತೃದೇವನು ನಮ್ಮ ಬುದ್ಧಿಯನ್ನು ಪ್ರೇರಿಸುವವನು. ನಾವು ಆತನ ಶ್ರೇಷ್ಠವಾದ ತೇಜಸ್ಸನ್ನು ಧ್ಯಾನಿಸುತ್ತೇವೆ. ಆತನು ನಮಗೆ ಬುದ್ಧಿಯನ್ನು ಕೊಡಲಿ.

ಹೇ! ಸವಿತೃದೇವನೇ! ನಮ್ಮಲ್ಲಿ ದೇಹೇಂದ್ರಿಯಗಳೇ ನಾನೆಂಬ ಭ್ರಾಂತಿಯು ಪ್ರಬಲವಾಗಿದೆ. ನಾವು ಕರ್ತವ್ಯಾಕರ್ತವ್ಯಗಳನ್ನು ತಿಳಿಯದವರು. ಇದರಿಂದ ನಮ್ಮ ಇಂದ್ರಿಯಗಳು ದೀನವಾಗಿವೆ. ಆದರೆ ನಮ್ಮ ಇಂದ್ರಿಯಗಳು ತಮ್ಮ ಕಾರ್ಯದಲ್ಲಿ ಸಮರ್ಥವಾಗಿವೆ. ನಾವು ದೇವತೆಗಳ ಮತ್ತು ಮಾನವರ ವಿಷಯದಲ್ಲಿ ಅಪರಾಧಗಳನ್ನು ಎಸಗಿರುತ್ತೇವೆ. ನೀನು ನಮ್ಮ ತಪ್ಪುಗಳನ್ನು ಕ್ಷಮಿಸು. ನಾವು ಮತ್ತೆ ತಪ್ಪುಗಳನ್ನು ಮಾಡದಂತೆ ಪ್ರೇರಿಸು.

ಸರಸ್ವತೀದೇವಿಯು ಪ್ರಿಯವಾಕ್ಯಗಳನ್ನು ಹೇಳುವಂತೆ ಪ್ರೇರಿಸುವವಳು. ನಮ್ಮ ಒಳ್ಳೆಯ ಬುದ್ಧಿಯ ಕರ್ತವ್ಯಗಳನ್ನು ತಿಳಿದವಳು. ತಿಳಿಸುವವಳು. ಆ ದೇವಿಯು ಯಜ್ಞವನ್ನು ಧರಿಸಿರುತ್ತಾಳೆ. ಯಜ್ಞವು ಸರಿಯಾಗಿ ನಡೆಯುವಂತೆ ಮಾಡುತ್ತಾಳೆ. ಅವಳು ಹಾಗೆ ಮಾಡಲಿ.

**ಪಾವೀರವೀ ಕನ್ಯಾ ಚಿತ್ರಾಯುಃ ಸರಸ್ವತೀ ವೀರಪತ್ನೀ ಧಿಯಂ ಧಾತ್ । ಗ್ನಾಭಿರಚ್ಛಿದ್ರಗ್ಂ ಶರಣಗ್ಂ ಸಜೋಷಾ ದುರಾಧರ್ಷಂ ಗೃಣತೇ ಶರ್ಮ ಯಗ್ಂಸತ್ ॥**

---

ಪಾವೀರವೀ । ಕನ್ಯಾ । ಚಿತ್ರಾಯುರಿತಿ ಚಿತ್ರ-ಆಯುಃ । ಸರಸ್ವತೀ । ವೀರಪತ್ನೀತಿ ವೀರ-ಪತ್ನೀ । ಧಿಯಮ್ । ಧಾತ್ ॥ ಗ್ನಾಭಿಃ । ಅಚ್ಛಿದ್ರಮ್ । ಶರಣಮ್ । ಸಜೋಷಾ ಇತಿ ಸ-ಜೋಷಾಃ । ದುರಾಧರ್ಷಮಿತಿ ದುಃ-ಆಧರ್ಷಮ್ । ಗೃಣತೇ । ಶರ್ಮ । ಯಗ್ಂಸತ್ ॥

---

| ಮಂತ್ರ | ವಿನಿಯೋಗ |
|---|---|
| ಪಾವೀರವೀ...ಯಗ್ಂಸತ್ ॥ | ಸಾರಸ್ವತಚರುಯಾಗದ ಯಾಜ್ಯಾನುವಾಕ್ಯೆ. |

---

✦ಪಾವೀರವೀ=ರಕ್ಷಕರನ್ನೂ ವೀರರನ್ನೂ ಅನುಗ್ರಹಿಸುವ; ಕನ್ಯಾ=ಮನೋಹರಳಾದ; ಚಿತ್ರಾಯುಃ=ವಿಚಿತ್ರವಾದ ಜೀವನವುಳ್ಳ; ವೀರಪತ್ನೀ= ವೀರರನ್ನು ರಕ್ಷಿಸುವ; ಸರಸ್ವತೀ=ಸರಸ್ವತೀದೇವಿಯು; ಗ್ನಾಭಿಃ=ಛಂದಸ್ಸುಗಳಿಂದ ಕೂಡಿದವಳಾಗಿ; ಧಿಯಮ್=ಯಜ್ಞದಲ್ಲಿಯೇ ಸಾವಧಾನವಾಗಿರುವ ಮನಸ್ಸನ್ನು; ಧಾತ್=ಉಂಟುಮಾಡಲಿ; ಸಜೋಷಾಃ=ಯಜಮಾನನೊಡನೆ ಸಮಾನಪ್ರೀತಿಯುಳ್ಳವಳಾಗಿ; ಗೃಣತೇ=ಸ್ತುತಿಸುವ ಯಜಮಾನನಿಗೆ; ಅಚ್ಛಿದ್ರಮ್=ಅವಿಚ್ಛಿನ್ನವಾದ; ಶರಣಮ್=ರಕ್ಷಕವಾದ; ದುರಾಧರ್ಷಮ್=ಯಾರಿಂದಲೂ ತಡೆಯಲು ಸಾಧ್ಯವಿಲ್ಲದ; ಶರ್ಮ=ಸುಖವನ್ನು; ಯಗ್ಂಸತ್=ಕೊಡಲಿ.

---

ಸರಸ್ವತಿಯ ಪ್ರಭಾವವು ಅಸಾಧಾರಣವಾಗಿದೆ. ಆಕೆಯು ಛಂದಸ್ಸಿನಿಂದ ಕೂಡಿದವಳು. ರಕ್ಷಕರನ್ನೂ ವೀರರನ್ನೂ ಸೃಷ್ಟಿಸಬಲ್ಲವಳು. ಮನೋಹರಳು. ವೀರರನ್ನು ರಕ್ಷಿಸತಕ್ಕವಳು.

ಪೂಷಾ ಗಾ ಅನ್ವೇತು ನಃ ಪೂಷಾ ರಕ್ಷತ್ವರ್ವತಃ । ಪೂಷಾ ವಾಜಗ್‌ಂ ಸನೋತು ನಃ ॥ ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿ[ಅನ್ಯತ್(೪೪)ವಿಷುರೂಪೇ]ಷುರೂಪೇ ಅಹನೀ ದ್ಯೌರಿವಾಸಿ ।

---

ಪೂಷಾ । ಗಾಃ । ಅನ್ವಿತಿ । ಏತು । ನಃ । ಪೂಷಾ । ರಕ್ಷತು । ಅರ್ವತಃ ॥ ಪೂಷಾ । ವಾಜಮ್ । ಸನೋತು । ನಃ ॥ ಶುಕ್ರಮ್ । ತೇ । ಅನ್ಯತ್ । ಯಜತಮ್ । ತೇ । ಅನ್ಯತ್ । (೪೪) । ವಿಷುರೂಪೇ ಇತಿ ವಿಷು-ರೂಪೇ । ಅಹನೀ ಇತಿ । ದ್ಯೌಃ । ಇವ । ಅಸಿ ॥

---

| ಮಂತ್ರ | ವಿನಿಯೋಗ |
|---|---|
| ಪೂಷಾ ಗಾಃ...ನಃ ॥ | ಪೌಷ್ಣಚರುಯಾಗದ ಪುರೋನುವಾಕ್ಯೆ. |
| ಶುಕ್ರಂ ತೇ...ರಾತಿರಸ್ತು ॥ | ಪೌಷ್ಣಚರುಯಾಗದ ಯಾಜ್ಯಾನುವಾಕ್ಯೆ. |

---

✦ಪೂಷಾ=ಪೂಷದೇವನು; ನಃ=ನಮ್ಮ; ಗಾಃ=ಗೋವುಗಳನ್ನು; ಅನ್ವೇತು= ಹಿಂಬಾಲಿಸಿ ರಕ್ಷಿಸಲಿ; ಪೂಷಾ=ಆ ಪೂಷನು; ನಃ=ನಮ್ಮ; ಅರ್ವತಃ=ಕುದುರೆಗಳನ್ನು; ರಕ್ಷತು=ರಕ್ಷಿಸಲಿ; ಪೂಷಾ=ಪೂಷದೇವನು; ನಃ=ನಮಗೆ; ವಾಜಮ್=ಅನ್ನವನ್ನು; ಸನೋತು=ಸಂಪಾದಿಸಲಿ/ಕೊಡಲಿ. ✦ಪೂಷನ್=ಹೇ! ಸೂರ್ಯದೇವನೇ! ತೇ= ನಿನ್ನ; ಶುಕ್ರಮ್=ಶುದ್ಧಸ್ವರೂಪವು; ಅನ್ಯತ್=ಬೇರೆ ಬೇರೆಯ ರೂಪವಾಗಿದೆ; ತೇ ಯಜತಮ್=ನಿನ್ನ ಪೂಜೆಯೂ; ಅನ್ಯತ್=ಬಗೆಬಗೆಯಾಗಿದೆ; ಅಹನೀ=[ನಿನ್ನಿಂದ ಆಗುವ] ರಾತ್ರಿಹಗಲುಗಳೂ; ವಿಷುರೂಪೇ=ವಿಭಿನ್ನರೂಪಗಳಿಂದ ಕೂಡಿದ್ದಾಗಿವೆ; ದ್ಯೌಃ ಇವ ಅಸಿ=[ಹೀಗಿದ್ದರೂ ನೀನು] [ಪಕ್ಷಪಾತರಹಿತನಾಗಿ] ಆಕಾಶದಂತೆ ಇರುವೆ;

ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥ ತೇಽವರ್ಧಂತ ಸ್ವತವಸೋ ಮಹಿತ್ವನಾಽಽ ನಾಕಂ ತಸ್ಥುರುರು ಚಕ್ರಿರೇ ಸದಃ ।

ವಿಶ್ವಾಃ । ಹಿ । ಮಾಯಾಃ । ಅವಸಿ । ಸ್ವಧಾವ ಇತಿ ಸ್ವಧಾ-ವಃ । ಭದ್ರಾ । ತೇ । ಪೂಷನ್ನ್ । ಇಹ । ರಾತಿಃ । ಅಸ್ತು ॥ ತೇ । ಅವರ್ಧಂತ । ಸ್ವತವಸ ಇತಿ ಸ್ವ-ತವಸಃ । ಮಹಿತ್ವನೇತಿ ಮಹಿ-ತ್ವನಾ । ಏತಿ । ನಾಕಮ್ । ತಸ್ಥುಃ । ಉರು । ಚಕ್ರಿರೇ । ಸದಃ ॥

| ಮಂತ್ರ | ವಿನಿಯೋಗ |
|---|---|
| ತೇಽವರ್ಧಂತ...ಪ್ರಿಯೇ ॥ | ಮಾರುತಸಪ್ತಕಪಾಲಪುರೋಡಾಶಯಾಗದ ಪುರೋನುವಾಕ್ಯೆ. |

ಸ್ವಧಾವಃ=ಅನ್ನವುಳ್ಳ ಪೂಷದೇವನೇ! ವಿಶ್ವಾಃ ಮಾಯಾಃ=ಎಲ್ಲ ಚಿತ್ತವೃತ್ತಿಗಳನ್ನೂ; ಅವಸಿ ಹಿ=[ನೀನು] ರಕ್ಷಿಸುತ್ತೀಯಷ್ಟೆ; ತೇ=ನಿನ್ನ; ಇಹ=ಈ ಕರ್ಮದಲ್ಲಿ ರಾತಿಃ=ಫಲವನ್ನು ಕೊಡುವಿಕೆಯು; ಭದ್ರಾ ಅಸ್ತು=ಸಮೀಚೀನವಾದುದಾಗಲಿ/ಒಳ್ಳೆಯದಾಗಲಿ. +ತೇ=ಆ ಪ್ರಸಿದ್ಧರಾದ ಮರುದ್ದೇವತೆಗಳು; ಸ್ವತವಸಃ=ಸ್ವಾಧೀನವಾದ ಬಲವುಳ್ಳವರು. ಮಹಿತ್ವನಾ=[ಅವರು] ತಮ್ಮ ಮಹಿಮೆಯಿಂದ; ಅವರ್ಧಂತ=ವೃದ್ಧಿ ಹೊಂದಿದರು; ನಾಕಮ್ ಆ ತಸ್ಥುಃ=ಸ್ವರ್ಗವನ್ನು ಹೊಂದಿದರು. ಉರು ಸದಃ ಚಕ್ರಿರೇ=ಯಜಮಾನನಿಗೆ ಸ್ವರ್ಗದಲ್ಲಿ ಉನ್ನತಸ್ಥಾನವನ್ನು ಮಾಡಿದರು.

ಅವಳ ಜೀವನವು ಆಶ್ಚರ್ಯಕರವಾದುದು. ಆಕೆಯು ನಮ್ಮ ಮನಸ್ಸು ಯಜ್ಞದಲ್ಲಿ ಸಾವಧಾನವಾಗಿರುವಂತೆ ಮಾಡಲಿ. ಯಜಮಾನನೊಡನೆ ಪ್ರೀತಿಯುಳ್ಳವಳಾಗಿ ಸ್ತುತಿಸುವ ಯಜಮಾನನಿಗೆ ಅವಿಚ್ಛಿನ್ನವಾದ ಬೇರೆಯವರು ಕೆಡಿಸಲಾಗದ ಸುಖವನ್ನು ನೀಡಲಿ.

ವಿಷ್ಣುರ್ಯದ್ಧಾಽಽವದ್ವೃಷಣಂ ಮದಚ್ಯುತಂ ವಯೋ ನ

ಸೀದನ್ನಧಿ ಬರ್ಹಿಷಿ ಪ್ರಿಯೇ ॥

ವಿಷ್ಣುಃ। ಯತ್। ಹ। ಆವತ್। ವೃಷಣಮ್। ಮದಚ್ಯುತಮಿತಿ ಮದ-ಚ್ಯುತಮ್।

ವಯಃ। ನ। ಸೀದನ್ನ್। ಅಧೀತಿ। ಬರ್ಹಿಷಿ। ಪ್ರಿಯೇ॥

ಯತ್=ಯಾವ; ವೃಷಣಮ್=ಫಲವನ್ನು ಸುರಿಸುವ; ಮದಚ್ಯುತಮ್ =ಸಂತೋಷವನ್ನು ಹೆಚ್ಚಾಗಿ ಉಂಟು ಮಾಡುವ; ಬರ್ಹಿಃ=ಯಾಗವನ್ನು; ವಿಷ್ಣುಃ= ಸರ್ವಯಜ್ಞಸ್ವರೂಪನಾದ ವಿಷ್ಣುವು; ಆವತ್ ಹ=ರಕ್ಷಿಸಿದನೋ; ಪ್ರಿಯೇ ಬರ್ಹಿಷಿ=ಆ ಪ್ರಿಯವಾದ ಯಜ್ಞದಲ್ಲಿ; ವಯಃ ನ=[ಮರವನ್ನು] ಪಕ್ಷಿಗಳು ಆಶ್ರಯಿಸುವಂತೆ; ಅಧಿ ಸೀದನ್=ಆ ಮರುದ್ದೇವತೆಗಳು ಆಶ್ರಯವನ್ನು ಪಡೆದಿರುತ್ತಾರೆ.

ಪೂಷದೇವನು ನಮ್ಮ ಗೋವುಗಳನ್ನೂ ಅಶ್ವಗಳನ್ನೂ ಬೆಂಬಿಡದೆ ಕಾಪಾಡಲಿ. ನಮಗೆ ಅನ್ನವನ್ನು ಈಯಲಿ.

ಪೂಷನಾಮಕನಾದ ಸೂರ್ಯನು ಬೆಳಗಿನ ಹೊತ್ತು ಕೆಂಪು, ಮಧ್ಯಾಹ್ನದಲ್ಲಿ ಬಿಳುಪು ಹೀಗೆ ಬಗೆ ಬಗೆಯ ಪ್ರಕಾಶವುಳ್ಳವನು. ಅವನಿಗೆ ಸಲ್ಲುವ ಪೂಜೆಯು ಪ್ರಾತಃಕಾಲದಲ್ಲಿ 'ಮಿತ್ರಸ್ಯ' ಎಂಬ ಮಂತ್ರದಿಂದ ಉಪಸ್ಥಾನರೂಪವಾಗಿಯೂ, ಮಧ್ಯಾಹ್ನದಲ್ಲಿ 'ಆ ಸತ್ಯೇನ' ಎಂಬ ಮಂತ್ರದಿಂದ ಉಪಸ್ಥಾನರೂಪವಾಗಿಯೂ ಬಗೆಬಗೆಯಾಗಿದೆ. ಆ ಪೂಷದೇವನಿಂದಾಗುವ ಹಗಲು-ರಾತ್ರಿಗಳಲ್ಲಿ ಹಗಲು ಪ್ರಕಾಶಯುಕ್ತವಾಗಿಯೂ, ರಾತ್ರಿಯು ಕತ್ತಲೆಯಿಂದ ಕೂಡಿ ಬಗೆ ಬಗೆಯಾಗಿದೆ. ಹೀಗಿದ್ದರೂ ಸೂರ್ಯನು ಪಕ್ಷಪಾತರಹಿತನಾಗಿ ಆಕಾಶದಂತಿರುವನು. ಮಾನವರ ಚಿತ್ತವೃತ್ತಿಗಳನ್ನು ತಿಳಿದು ರಕ್ಷಿಸುವವನು. ಅನ್ನವಂತನು. ಇಂತಹ ಪೂಷದೇವನು ಕೊಡುವ ಫಲವು ಮಂಗಳ ಪ್ರದವಾಗಲಿ.

ಮರುದ್ದೇವತೆಗಳು ಸ್ವಾಧೀನವಾದ ಬಲವುಳ್ಳವರು. ತಮ್ಮ ಮಹಿಮೆಯಿಂದಲೇ ವೃದ್ಧಿ ಹೊಂದಿದವರು. ದೇವಲೋಕವನ್ನೂ ಹೊಂದಿದವರು. ಅವರು ಯಜಮಾನನಿಗೆ ಸ್ವರ್ಗದಲ್ಲಿ ಉತ್ತಮಸ್ಥಾನವನ್ನು ಸಂಪಾದಿಸಿ ಕೊಡಲಿ. ಎಲ್ಲ ಕಾಮನೆಗಳನ್ನೂ ಸಂಪಾದಿಸಿ ಕೊಡುವ ಯಜ್ಞವನ್ನು ಸರ್ವಯಜ್ಞಸ್ವರೂಪನಾದ ವಿಷ್ಣುವು ರಕ್ಷಿಸಲಿ. ಪಕ್ಷಿಗಳು

ಪ್ರ ಚಿತ್ರಮರ್ಕಂ ಗೃಣತೇ ತುರಾಯ ಮಾರುತಾಯ ಸ್ವತವಸೇ ಭರಧ್ವಮ್ । ಯೇ ಸಹಾಗ್ಂಸಿ ಸಹಸಾ ಸಹಂತೇ [ಸಹಂತೇ (೪೫)] ರೇಜತೇ ಅಗ್ನೇ ಪೃಥಿವೀ ಮಖೇಭ್ಯಃ ॥

---

ಪ್ರೇತಿ । ಚಿತ್ರಮ್ । ಅರ್ಕಮ್ । ಗೃಣತೇ । ತುರಾಯ । ಮಾರುತಾಯ । ಸ್ವತವಸ ಇತಿ ಸ್ವ-ತವಸೇ । ಭರಧ್ವಮ್ ॥ ಯೇ । ಸಹಾಗ್ಂಸಿ । ಸಹಸಾ । ಸಹಂತೇ ।(೪೫)। ರೇಜತೇ । ಅಗ್ನೇ । ಪೃಥಿವೀ । ಮಖೇಭ್ಯಃ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಚಿತ್ರಮ್...ಮಖೇಭ್ಯಃ ॥ | ಮಾರುತಯಾಗದ ಯಾಜ್ಯಾನುವಾಕ್ಯೆ. |

---

✦[ಹೇ! ಋತ್ವಿಗ್ಯಜಮಾನರೇ!]ಯೇ=ಯಾವ ನೀವು; ಸಹಾಗ್ಂಸಿ=ವೈರಿಬಲಗಳನ್ನು; ಸಹಸಾ=ಮರುತರ ಬಲದಿಂದ; ಸಹಂತೇ=ಸೋಲಿಸುತ್ತೀರೋ; ಗೃಣತೇ=ಹವಿಸ್ಸನ್ನು ಅಪೇಕ್ಷಿಸುವ; ತುರಾಯ=ಶೀಘ್ರಗಾಮಿಯಾದ; ಸ್ವತವಸೇ=ಸ್ವಾಧೀನವಾದ ಬಲವುಳ್ಳ; ಮಾರುತಾಯ=ಮರುತ್ಸಂಘಕ್ಕೆ; ಚಿತ್ರಮ್ ಅರ್ಕಮ್=ವಿವಿಧವಾದ ಅರ್ಚನೆಯನ್ನು; ಪ್ರ ಭರಧ್ವಮ್=ಚೆನ್ನಾಗಿ ಮಾಡಿರಿ; ಅಗ್ನೇ=ಅಗ್ನಿದೇವನೇ!; [ನೀನು] ಪೃಥಿವೀ=ಈ ಭೂಮಿಯು; ಮಖೇಭ್ಯಃ=ಮಾರುತಯಾಗಗಳ ನಿಮಿತ್ತದಿಂದ; ರೇಜತೇ=ಕಂಪಿಸುತ್ತದೆ/ಯತ್ನಿಸುತ್ತದೆ; [ಎಂಬ ಆಶ್ಚರ್ಯವನ್ನು ನೋಡು]

---

ವೃಕ್ಷಗಳನ್ನು ಆಶ್ರಯಿಸುವಂತೆ ಮರುದ್ದೇವತೆಗಳು ನಮ್ಮ ಯಜ್ಞದಲ್ಲಿ ಸನ್ನಿಹಿತರಾಗಿ ನಮ್ಮನ್ನು ಅನುಗ್ರಹಿಸಲಿ.

ಮರುದ್ದೇವತೆಗಳು ಹವಿಸ್ಸನ್ನು ಅಪೇಕ್ಷಿಸುವವರು. ಅವರು ಶೀಘ್ರಗಾಮಿಗಳು. ಬಲಶಾಲಿಗಳು.

# *ವಿಶ್ವೇ ದೇವಾ *ವಿಶ್ವೇ ದೇವಾಃ ।

ವಿಶ್ವೇ । ದೇವಾಃ । ವಿಶ್ವೇ । ದೇವಾಃ ॥

*ವಿಶ್ವೇ ದೇವಾ ಋತಾವೃಧ ಋತುಭಿರ್ ಹವನಶ್ರುತಃ । ಜುಷಂತಾಂ ಯುಜ್ಯಂ ಪಯಃ ॥

*ವಿಶ್ವೇ ದೇವಾಃ ಶೃಣುತೇಮಗ್ಂ ಹವಂ ಮೇ ಯೇ ಅಂತರಿಕ್ಷೇ ಯ ಉಪ ದ್ಯವಿಷ್ಠ । ಯೇ ಅಗ್ನಿಜಿಹ್ವಾ ಉತ ವಾ ಯಜತ್ರಾ ಆಸದ್ಯಾಸ್ಮಿನ್ಬರ್ಹಿಷಿ ಮಾದಯಧ್ವಮ್ ॥

| ಮಂತ್ರ | ವಿನಿಯೋಗ |
| --- | --- |
| ವಿಶ್ವೇ ದೇವಾಃ...ದೇವಾಃ ॥ | ವೈಶ್ವದೇವೀ ಆಮಿಕ್ಷಾಯಾಗದ ಯಾಜ್ಯಾ-ಪುರೋನುವಾಕ್ಯೆಗಳ ಪ್ರತೀಕಗ್ರಹಣ |

ಮಾರುತರ ಬಲದಿಂದಲೇ ಶತ್ರುಜಯವೂ ಆಗುತ್ತದೆ. ಹೇ! ಋತ್ವಿಗ್ಯಜಮಾನರೇ! ಇಂತಹ ಮರುತರ ಸಂಘಕ್ಕೆ ನೀವು ವಿವಿಧವಾದ ಅರ್ಚನೆಯನ್ನು ಮಾಡಿರಿ. ಹೇ! ಅಗ್ನಿದೇವನೇ! ಮಾರುತಯಜ್ಞಗಳ ಸಮಾಪ್ತಿಗಾಗಿ ಭೂಮಿಯೂ ಪ್ರಯತ್ನಿಸುವುದನ್ನು /ಕಂಪಿಸುವುದನ್ನು ನೀನು ನೋಡು.

ಪ್ರತೀಕಮಂತ್ರಗಳ ತಾತ್ಪರ್ಯ:-

ವಿಶ್ವೇ ದೇವಾಃ...ದೇವಾಃ :-ವಿಶ್ವೇದೇವರು ಯಜ್ಞವನ್ನು ವೃದ್ಧಿಗೊಳಿಸತಕ್ಕವರು. ಆಯಾ ಋತುಕಾಲದಲ್ಲಿ ಮಾಡುವ ಯಜ್ಞಗಳಲ್ಲಿ ಆಹ್ವಾನವನ್ನು ಕೇಳತಕ್ಕವರು. ಅವರು ಹಾಲಿನಂತೆ ಮಧುರವಾದ ಹವಿಸ್ಸನ್ನು ಸೇವಿಸಲಿ.

ಅಂತರಿಕ್ಷ-ದ್ಯುಲೋಕಗಳಲ್ಲಿರುವ ಅಗ್ನಿಯ ಮೂಲಕ ಹವಿಸ್ಸನ್ನು ಹೊಂದುವ ಅಥವಾ ಬೇರೆ ವಿಧವಾದ ಪೂಜೆಗಳನ್ನು ಸ್ವೀಕರಿಸುವ ವಿಶ್ವೇದೇವರೇ! ನೀವು ನಮ್ಮ ಆಹ್ವಾನವನ್ನು

*ಈ ಪ್ರತೀಕದಿಂದ ಕೂಡಿರುವ ಮಂತ್ರಗಳು ತೈ. ಸಂ. 2. 4. 14. ರಲ್ಲಿವೆ. ಅಲ್ಲಿ ಅವುಗಳ ಪದಶಃ ಅರ್ಥವು ತಿಳಿಸಲ್ಪಟ್ಟಿದೆ. ಇಲ್ಲಿ ಅವುಗಳ ತಾತ್ಪರ್ಯವನ್ನು ನೀಡಲಾಗಿದೆ.

ದ್ಯಾವಾ ನಃ ಪೃಥಿವೀ ಇಮಗ್ಂ ಸಿಧ್ರಮದ್ಯ ದಿವಿಸ್ಪೃಶಮ್ ।
ಯಜ್ಞಂ ದೇವೇಷು ಯಚ್ಛತಾಮ್ ॥ ಪ್ರ ಪೂರ್ವಜೇ ಪಿತರಾ
ನವ್ಯಸೀಭಿರ್ಗೀರ್ಭಿಃ ಕೃಣುಧ್ವಗ್ಂ ಸದನೇ ಋತಸ್ಯ ।

---

ದ್ಯಾವಾ । ನಃ । ಪೃಥಿವೀ ಇತಿ । ಇಮಮ್ । ಸಿಧ್ರಮ್ । ಅದ್ಯ । ದಿವಿಸ್ಪೃಶಮಿತಿ ದಿವಿ-ಸ್ಪೃಶಮ್ ॥ ಯಜ್ಞಮ್ । ದೇವೇಷು । ಯಚ್ಛತಾಮ್ ॥ ಪ್ರೇತಿ । ಪೂರ್ವಜೇ ಇತಿ ಪೂರ್ವ-ಜೇ । ಪಿತರಾ । ನವ್ಯಸೀಭಿಃ । ಗೀರ್ಭಿಃ । ಕೃಣುಧ್ವಮ್ । ಸದನೇ ಇತಿ । ಋತಸ್ಯ ॥

---

| ಮಂತ್ರ | ವಿನಿಯೋಗ |
|---|---|
| ದ್ಯಾವಾ ನಃ...ಯಚ್ಛತಾಮ್ ॥ | ದ್ಯಾವಾಪೃಥಿವ್ಯಯಾಗದ ಪುರೋನುವಾಕ್ಯೆ. |
| ಪ್ರ ಪೂರ್ವಜೇ...ವರೂಥಮ್ ॥ | ದ್ಯಾವಾಪೃಥಿವ್ಯಯಾಗದ ಯಾಜ್ಯಾನುವಾಕ್ಯೆ. |

---

✦ದ್ಯಾವಾಪೃಥಿವೀ=ದ್ಯುಲೋಕಭೂಲೋಕದೇವತೆಗಳು; ಸಿಧ್ರಮ್=ಫಲಸಾಧಕವಾದ; ದಿವಿಸ್ಪೃಶಮ್=ಸ್ವರ್ಗವನ್ನು ಮುಟ್ಟುವ; ನಃ=ನಮ್ಮ; ಇಮಮ್ ಯಜ್ಞಮ್=ಈ ಯಜ್ಞವನ್ನು; ಅದ್ಯ=ಈ ದಿನವೇ; ದೇವೇಷು=ದೇವತೆಗಳಲ್ಲಿ; ಯಚ್ಛತಾಮ್=ಸಮರ್ಪಿಸಲಿ. ✦[ಹೇ! ಋತ್ವಿಗ್ಯಜಮಾನರೇ!] ಪ್ರ=ಪ್ರಕೃಷ್ಟ/ಶ್ರೇಷ್ಠವಾಗಿರುವ; ಪೂರ್ವಜೇ=ಮೊದಲು ಹುಟ್ಟಿರುವ; ಪಿತರಾ=ಮಾತಾಪಿತೃಗಳಂತಿರುವ; ಋತಸ್ಯ ಸದನೇ=ಯಜ್ಞದ ಸ್ಥಾನಗಳಾಗಿರುವ;[ದ್ಯಾವಾಪೃಥಿವಿಗಳನ್ನು] ನವ್ಯಸೀಭಿಃ=ಹೊಚ್ಚ ಹೊಸದಾದ; ಗೀರ್ಭಿಃ=ಮಂತ್ರರೂಪವಾದ ವಾಕ್ಯಗಳಿಂದ; ಕೃಣುಧ್ವಮ್=ಸ್ತುತಿಸಿರಿ.

---

**ಕೇಳಿ ನಮ್ಮ ಯಾಗಕ್ಕೆ ಬನ್ನಿರಿ.**

'ಅಗ್ನೌ ಪ್ರಾಸ್ತಾಹುತಿಃ ಸಮ್ಯಕ್ ಆದಿತ್ಯಮುಪತಿಷ್ಠತೇ' ಎಂಬ ವಚನದಂತೆ ಯಜ್ಞವು ಸ್ವರ್ಗಸ್ಪರ್ಶಿಯೂ ಫಲಸಾಧಕವೂ ಆಗಿದೆ. ಇಂತಹ ಯಜ್ಞವನ್ನು ದ್ಯಾವಾಪೃಥಿವಿಗಳು

ಆ ನೋ ದ್ಯಾವಾಪೃಥಿವೀ ದೈವ್ಯೇನ ಜನೇನ ಯಾತಂ ಮಹಿ ವಾಂ ವರೂಥಮ್ ॥ ಅಗ್ನಿಗ್ಂ ಸ್ತೋಮೇನ ಬೋಧಯ ಸಮಿಧಾನೋ ಅಮರ್ತ್ಯಮ್ । ಹವ್ಯಾ ದೇವೇಷು ನೋ ದಧತ್ ॥

---

ಏತಿ । ನಃ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ದೈವ್ಯೇನ । ಜನೇನ । ಯಾತಮ್ । ಮಹಿ । ವಾಮ್ । ವರೂಥಮ್ ॥ ಅಗ್ನಿಮ್ । ಸ್ತೋಮೇನ । ಬೋಧಯ । ಸಮಿಧಾನ ಇತಿ ಸಮ್-ಇಧಾನಃ । ಅಮರ್ತ್ಯಮ್ ॥ ಹವ್ಯಾ । ದೇವೇಷು । ನಃ । ದಧತ್ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿಗ್ಂ...ದಧತ್ ॥ | ದ್ಯಾವಾಪೃಥಿವ್ಯಯಾಗದಲ್ಲಿ ಸ್ವಿಷ್ಟಕೃದ್ಯಾಗದ ಪುರೋನುವಾಕ್ಯೆ. |

---

**ದ್ಯಾವಾಪೃಥಿವೀ**=ದ್ಯಾವಾಪೃಥಿವಿಗಳೇ! [ನೀವು] **ದೈವ್ಯೇನ ಜನೇನ**=ದೇವ ಸಂಬಂಧಿಯಾದ ಜನಸಮೂಹದೊಡನೆ; **ಮಹಿ**=ಪೂಜ್ಯವಾದ; **ವಾಮ್**=ನಿಮ್ಮಿಬ್ಬರ; **ವರೂಥಮ್**=ಸ್ಥಾನವಾದ ಯಾಗಭೂಮಿಯನ್ನು [ಕುರಿತು] **ಆ ಯಾತಮ್**= ಆಗಮಿಸಿರಿ. **ನಃ**=ನಮ್ಮನ್ನು [ಅನುಗ್ರಹಿಸಿರಿ] ✦**ಸಮಿಧಾನಃ**= [ನೀನು] ಅಗ್ನಿಯನ್ನು ದೀಪ್ತಿಗೊಳಿಸುವವನಾಗಿ [ಯಜಮಾನನೇ!] **ಅಮರ್ತ್ಯಮ್**=ಮರಣರಹಿತನಾದ; **ಅಗ್ನಿಮ್**=ಸ್ವಿಷ್ಟಕೃದಗ್ನಿಯನ್ನು; **ಸ್ತೋಮೇನ**=ಸ್ತೋತ್ರಗಳಿಂದ [ಸಂತೋಷಪಡಿಸಿ]; **ನಃ ಹವ್ಯಾ**= ನಮ್ಮ ಹವ್ಯಗಳನ್ನು; **ದೇವೇಷು**=ದೇವತೆಗಳಲ್ಲಿ; **ದಧತ್**=ಸ್ಥಾಪಿಸಲಿ [ಎಂದು] **ಬೋಧಯ**=[ಅಗ್ನಿಯನ್ನು] ಪ್ರಾರ್ಥಿಸು.

# ಸ ಹವ್ಯವಾಡಮರ್ತ್ಯ ಉಶಿಗ್ದೂತಶ್ಚನೋಹಿತಃ ।

# ಅಗ್ನಿರ್ಧಿಯಾ ಸಮೃಣ್ವತಿ ॥

---

ಸಃ । ಹವ್ಯವಾಡಿತಿ ಹವ್ಯ-ವಾಟ್ । ಅಮರ್ತ್ಯಃ । ಉಶಿಕ್ । ದೂತಃ । ಚನೋಹಿತಃ ॥

ಅಗ್ನಿಃ । ಧಿಯಾ । ಸಮಿತಿ । ಋಣ್ವತಿ ॥

---

| ಮಂತ್ರ | ವಿನಿಯೋಗ |
| --- | --- |
| ಸ ಹವ್ಯವಾಟ್...ಸಮೃಣ್ವತಿ ॥ | ಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆ. |

---

+ಹವ್ಯವಾಟ್=ದೇವತೆಗಳಿಗೆ ಹವ್ಯಗಳನ್ನು ಒಯ್ಯುವ; ಅಮರ್ತ್ಯಃ=ಮರಣರಹಿತನಾದ; ಉಶಿಕ್=ಅನುಗ್ರಹಪೂರ್ವಕವಾಗಿ ಯಜಮಾನಾದಿಗಳನ್ನು ನೋಡುವ; ದೂತಃ =ದೇವತೆಗಳ ದೂತನಾದ; ಚನೋಹಿತಃ=ಮನುಷ್ಯರಿಗೆ ಹಿತಕಾರಿಯಾದ; ಸಃ ಅಗ್ನಿಃ =ಆ ಅಗ್ನಿಯು; ಧಿಯಾ=ಕರುಣೆಯಿಂದ ಕೂಡಿದ ಬುದ್ಧಿಯಿಂದ; ಸಮೃಣ್ವತಿ= [ನಮ್ಮ ಈ ಯಾಗಕ್ಕೆ] ಬರಲಿ. ನಮ್ಮನ್ನು ಅನುಗ್ರಹಿಸಲಿ.

---

ಹೇ! ಋತ್ವಿಗ್ಯಜಮಾನರೇ! ನೀವು ಮಾತಾಪಿತೃಗಳಂತಿರುವ ಯಜ್ಞದ ಸ್ಥಾನಗಳಾಗಿರುವ ದ್ಯಾವಾಪೃಥಿವಿಗಳನ್ನು ಮಂತ್ರರೂಪವಾಕ್ಯಗಳಿಂದ ಸ್ತುತಿಸಿರಿ. ಆ ದ್ಯಾವಾಪೃಥಿವಿಗಳು ನಮ್ಮ ಯಜ್ಞಕ್ಕೆ ಬಂದು ನಮ್ಮನ್ನು ಅನುಗ್ರಹಿಸಲಿ.

'ದ್ಯೌಃ ಪಿತಾ' 'ಪೃಥಿವೀ ಮಾತಾ' ಎಂಬುದಾಗಿ ಶ್ರುತಿಯಲ್ಲಿದೆ. ಹೀಗಾಗಿ ದ್ಯಾವಾಪೃಥಿವಿಗಳು ಮಾತಾಪಿತೃಗಳು.

ಹೇ! ಯಜಮಾನನೇ! ದೇವತೆಗಳಿಗೆ ಹವ್ಯವನ್ನು ಒಯ್ಯುವುದರಿಂದ ಅಗ್ನಿಯು ಹವ್ಯವಾಹನಾಗಿರುತ್ತಾನೆ. ಅವನು ದೇವತೆಗಳಲ್ಲಿ ನಮ್ಮ ಹವ್ಯಗಳನ್ನು ಸ್ಥಾಪಿಸುವಂತೆ ಪ್ರಾರ್ಥಿಸು.

ದೇವತೆಗಳಿಗೆ ಹವ್ಯವನ್ನು ಒಯ್ಯುವ, ಅನುಗ್ರಹದೃಷ್ಟಿಯಿಂದ ಯಜಮಾನಾದಿಗಳನ್ನು ನೋಡುವ ದೇವತೆಗಳ ದೂತನಾದ ಅಗ್ನಿಯು ಕರುಣಾಪೂರ್ಣಬುದ್ಧಿಯಿಂದ ಈ ಯಾಗಕ್ಕೆ ಬಂದು ನಮ್ಮನ್ನು ಹರಸಲಿ.

# *ಶಂ ನೋ ಭವಂತು *ವಾಜೇವಾಜೇ ॥ ೪೬–11 ॥

[ಪುರುಷತ್ವತಾ ಯಜತಂ ತೇ ಅನ್ಯಘ್ಞಹಂತೇ ಚನೋಹಿತೋಽಷ್ಟೌ ಚ ॥]

ಶಮ್ । ನಃ । ಭವಂತು । ವಾಜೇವಾಜ ಇತಿ ವಾಜೇ–ವಾಜೇ ॥ (೪೬) ॥

*ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ।
ಜಂಭಯಂತೋಽಹಿಂವೃಕಗ್ಂ ರಕ್ಷಾಗ್ಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ ॥
*ವಾಜೇವಾಜೇಽವತ ವಾಜಿನೋ ನೋ ಧನೇಷು ವಿಪ್ರಾ ಅಮೃತಾ ಋತಜ್ಞಾಃ ।
ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿರ್ದೇವಯಾನೈಃ ॥

| ಮಂತ್ರ | ವಿನಿಯೋಗ |
|---|---|
| ಶಂ ನೋ...ವಾಜೇವಾಜೇ ॥ | ವಾಜಿನಯಾಗದ ಯಾಜ್ಯಾ–ಪುರೋನುವಾಕ್ಯೆಗಳ ಪ್ರತೀಕಗ್ರಹಣ. |

ದೇವತೆಗಳಿಗೆ ಸಮರ್ಪಿಸಲಿ.
'ಸ್ವಿಷ್ಟಂ ವೈನ ಇದಂ ಭವಿಷ್ಯತಿ ಯದಿಮಗ್ಂ ರಾಧಯಿಷ್ಯಾಮ ಇತಿ' ಎಂಬುದಾಗಿ ಸ್ವಿಷ್ಟಕೃದಗ್ನಿಯನ್ನು ತೃಪ್ತಿಪಡಿಸುವುದರಿಂದ ಯಾಗವು ಚೆನ್ನಾಗಿ ಮಾಡಿದಂತಾಗುತ್ತದೆ ಎಂಬುದಾಗಿ ಸ್ವಿಷ್ಟಕೃತ್ ಶಬ್ದದ ನಿರ್ವಚನವಿದೆ.

ಪ್ರತೀಕಮಂತ್ರಗಳ ತಾತ್ಪರ್ಯ:–

ಶಂ ನೋ ಭವಂತು=ವಾಜಿನದೇವತೆಗಳು ನಮಗೆ ಸುಖಕರರಾಗಲಿ. ಅವರು ಯಜ್ಞದಲ್ಲಿ ಶೀಘ್ರವಾಗಿ ಬರತಕ್ಕವರು. ಪೂಜಾರ್ಹರಾದವರು. ಅವರು ನಮ್ಮನ್ನು ಹಿಂಸಕರಿಂದಲೂ, ರೋಗಗಳಿಂದಲೂ ಬೇರ್ಪಡಿಸಲಿ. ಅವೆಲ್ಲವನ್ನೂ ನಾಶಪಡಿಸಲಿ.

*ತೈ.ಸಂ.1.7.8. ಈ ಮಂತ್ರಗಳ ಪದಶಃ ಅರ್ಥವನ್ನು ಸಂಪುಟ ೪ ರಲ್ಲಿ ನೀಡಲಾಗಿದೆ. ಇಲ್ಲಿ ಮಂತ್ರಗಳ ತಾತ್ಪರ್ಯವನ್ನು ಮಾತ್ರ ನೀಡಲಾಗಿದೆ.

**ವಾಜೇವಾಜೇ=ಹೇ! ವಾಜಿನದೇವತೆಗಳೇ! ಅನ್ನಸಾಧನಗಳಲ್ಲಿಯೂ, ಧನಗಳ ಲ್ಲಿಯೂ ನಮ್ಮನ್ನು ರಕ್ಷಿಸಿರಿ. ನೀವು ಅಭಿಜ್ಞರು. ಮರಣರಹಿತರು. ಯಜ್ಞವನ್ನು ಚೆನ್ನಾಗಿ ತಿಳಿದವರು. ಮಧುರವಾದ ವಾಜಿನಹವಿಸ್ಸನ್ನು ಸ್ವೀಕರಿಸಿ. ಸಂತೋಷಿಸಿ, ತೃಪ್ತರಾಗಿ ದೇವಮಾರ್ಗಗಳಿಂದ ಹಿಂದಿರುಗಿರಿ. ಈ ಮಂತ್ರದಲ್ಲಿ ವಾಜಿನರೆಂದರೆ ಅಗ್ನಿ, ವಾಯು, ಹಾಗೂ ಸೂರ್ಯರು, ಅಥವಾ ಛಂದೋದೇವತೆಗಳು.**

---

## ವಿನಿಯೋಗಸಂಗ್ರಹ

**ಅಥ ಯಾಜ್ಯಾ ವೈಶ್ವದೇವೇ ಚಾತುರ್ಮಾಸ್ಯಾದಿಪರ್ವಣಿ ।**
**1ಅಗ್ನೇ 2ಸೋ ಅನುವಾಕ್ಯೇ ತೇ ಅಗ್ನೀಷೋಮಾಜ್ಯಭಾಗಯೋಃ ॥**
**3ಅಗ್ನಿರ್ಭುವ4ಸ್ತಥಾऽऽಗ್ನೇಯೇ 5ತ್ವಂ ನೋ 6ಯಾ ತೇ ಚ ಸೌಮಿಕೇ ।**
**7-8ತತ್ಸೇತಿ [ತದಚಿತೀ]ಯುಗ್ಮಂ ಸಾವಿತ್ರೇ 9-10ಚೋದ ಸಾರಸ್ವತೇ ತಥಾ ॥**
**11-12ಪೂಷಾ ಪೌಷ್ಣೇ ಮಾರುತೇ ತೇ 13-14ವಿಶ್ವೇ ದ್ವೇ 15-16ವೈಶ್ವದೇವಿಕೇ ।**
**17-18ದ್ಯಾವಾ ದ್ಯಾವಾಪೃಥಿವ್ಯೇ ಸ್ಯಾದಗ್ನಿಂ 19-20ಸ್ವಿಷ್ಟಕೃತೋ ಯಜೇಃ ॥**
**21-22ಶಂ ವಾಜೇ ವಾಜಿನೇ ಮಂತ್ರಾ ದ್ವಾವಿಂಶತಿರುದೀರಿತಾಃ ॥**

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–22**

---

# ಪ್ರಪಾಠಕದ ವಿಶೇಷ ವಿಷಯಗಳು

## ಅ) ಛಂದಸ್ಸು

| ಮಂತ್ರ | ಛಂದಸ್ಸಿನ ಹೆಸರು |
|---|---|
| **ಪ್ರಥಮೋಽನುವಾಕಃ** | |
| ಯುಂಜಾನಃ...ಆ ಭರತ್ ॥ | ಅನುಷ್ಟುಪ್ |
| ಯುಕ್ತ್ವಾಯ...ಸುವಾತಿ ತಾನ್ ॥ | ಅನುಷ್ಟುಪ್ |
| ಯುಕ್ತೇನ...ಶಕ್ತ್ಯೈ ॥ | ಗಾಯತ್ರೀ |
| ಯುಂಜತೇ...ಪರಿಷ್ಟುತಿಃ ॥ | ಜಗತೀ |
| ಯುಜೇ ವಾಂ...ತಸ್ಥುಃ ॥ | ತ್ರಿಷ್ಟುಪ್ |
| ಯಸ್ಯ ಪ್ರಯಾಣಂ...ಮಹಿತ್ವನಾ ॥ | ಜಗತೀ |
| ದೇವ ಸವಿತಃ...ನಃ ॥ | ಮಹಾಸತೋಬೃಹತೀ |
| ಇಮಂ ನಃ...ಸುವರ್ಜಿತಮ್ ॥ | ಯಜುಃ |
| ಋಚಾ...ಗಾಯತ್ರವರ್ತನಿ ॥ | ಗಾಯತ್ರೀ |
| ದೇವಸ್ಯ...ಅಂಗಿರಸ್ವತ್ ॥ | ಯಜುಃ |
| ಅಭ್ರಿರಸಿ...ಅಂಗಿರಸ್ವತ್ ॥ | ಯಜುಃ |

ಬಭ್ರಿರಸಿ...ಅಂಗಿರಸ್ವತ್ ॥ ಯಜುಃ

ಹಸ್ತ...ಅಂಗಿರಸ್ವತ್ ॥ ಯಜುಃ

## ದ್ವಿತೀಯೋಽನುವಾಕಃ

ಇಮಾಮ್...ಆರಪಂತೀ ॥ ತ್ರಿಷ್ಟುಪ್

ಪ್ರತೂರ್ತಂ...ಯೋನಿಃ ॥ ಉಪರಿಷ್ಟಾದ್ಬೃಹತೀ

ಯಂಜಾಥಾಗ್ಂ...ಅಸ್ಮಯುಮ್ ॥ ಗಾಯತ್ರೀ

ಯೋಗೇಯೋಗೇ...ಊತಯೇ ॥ ಗಾಯತ್ರೀ

ಪ್ರತೂರ್ವನ್...ಕೃಣ್ವನ್ ॥ ತ್ರಿಷ್ಟುಪ್

ಪೂಷ್ಣಾ...ಅಚ್ಛೇಹಿ ॥ ಯಜುಃ

ಅಗ್ನಿಂ...ಅಚ್ಛೇಮಃ ॥ ಯಜುಃ

ಅಗ್ನಿಂ...ಭರಿಷ್ಯಾಮಃ ॥ ಯಜುಃ

ಅಗ್ನಿಂ...ಭರಾಮಃ ॥ ಯಜುಃ

ಅನ್ವಗ್ನಿಃ...ಆತತಾನ ॥ ತ್ರಿಷ್ಟುಪ್

ಆಗತ್ಯ...ವಿಚಿಕೀಷತೇ ॥ ಅನುಷ್ಟುಪ್

ಆಕ್ರಮ್ಯ...ವಯಮ್ ॥ ಅನುಷ್ಟುಪ್

ದ್ಯೌಸ್ತೇ...ಪೃತನ್ಯತಃ ॥ ಪುರಸ್ತಾದ್ಬೃಹತೀ

| | |
|---|---|
| ಉತ್ಕ್ರಾಮ...ಅಸ್ಯಾಃ ॥ | ತ್ರಿಷ್ಟುಪ್ |
| ಉದಕ್ರಮೀತ್...ಉತ್ತಮೇ ॥ | ತ್ರಿಷ್ಟುಪ್ |
| ಅಪೋ ದೇವೀಃ...ಸುಪಿಪ್ಪಲಾಃ ॥ | ಅನುಷ್ಟುಪ್ |
| ಜಿಘರ್ಮ್ಯಗ್ನಿಂ...ವಿದಾನಮ್ ॥ | ಮಧ್ಯೇಜ್ಯೋತಿಸ್ತ್ರಿಷ್ಟುಪ್ |
| ಆ ತ್ವಾ ಜಿಘರ್ಮಿ...ಜರ್ಹೃಷಾಣಃ ॥ | ಮಧ್ಯೇಜ್ಯೋತಿಸ್ತ್ರಿಷ್ಟುಪ್ |
| ಪರಿ...ದಾಶುಷೇ ॥ | ಗಾಯತ್ರೀ |
| ಪರಿತ್ವಾಗ್ನೇ...ಭಂಗುರಾವತಃ ॥ | ಅನುಷ್ಟುಪ್ |
| ತ್ವಮಗ್ನೇ...ಶುಚಿಃ ॥ | ತ್ರಿಷ್ಟುಪ್ |

## ತೃತೀಯೋಽನುವಾಕಃ

| | |
|---|---|
| ದೇವಸ್ಯ...ಖನಾಮಿ ॥ | ಯಜುಃ |
| ಜ್ಯೋತಿಷ್ಮಂತಂ ತ್ವಾ...ಖನಾಮಿ ॥ | ವಿರಾಡಭಿಸಾರಿಣೀ |
| ಅಪಾಂ ಪೃಷ್ಠಂ...ಪ್ರಥಸ್ವ ॥ | ತ್ರಿಷ್ಟುಪ್ |
| ಶರ್ಮ ಚ ಸ್ಥೋ...ಪುರೀಷ್ಯಮ್ ॥ | ಅನುಷ್ಟುಪ್ |
| ಸಂವಸಾಥಾಂ...ಇತ್ ॥ | ಅನುಷ್ಟುಪ್ |
| ಪುರೀಷ್ಯೋಽಸಿ...ಅಗ್ನೇ ॥ | ಗಾಯತ್ರೀ |
| ತ್ವಾಮಗ್ನೇ...ವಾಘತಃ ॥ | ಗಾಯತ್ರೀ |

| | |
|---|---|
| ತಮು ತ್ವಾ...ಪುರಂದರಮ್ ॥ | ಗಾಯತ್ರೀ |
| ತಮು ತ್ವಾ...ರಣೇರಣೇ ॥ | ಗಾಯತ್ರೀ |
| ಸೀದ ಹೋತಃ...ವಯೋಧಾಃ ॥ | ತ್ರಿಷ್ಟುಪ್ |
| ನಿ ಹೋತಾ...ಅಗ್ನಿಃ ॥ | ತ್ರಿಷ್ಟುಪ್ |
| ಸಗ್ಂಸೀದಸ್ವ...ದರ್ಶತಮ್ ॥ | ಅನುಷ್ಟುಪ್ |
| ಜನಿಷ್ವಾ...ಯಜೀಯಾನ್ ॥ | ತ್ರಿಷ್ಟುಪ್ |

## ಚತುರ್ಥೋಽನುವಾಕಃ

| | |
|---|---|
| ಸಂ ತೇ...ತುಭ್ಯಮ್ ॥ | ತ್ರಿಷ್ಟುಪ್ |
| ಸುಜಾತೋ...ವಸೋ ॥ | ಅನುಷ್ಟುಪ್ |
| ಉದುತಿಷ್ಠ...ಸುಶಸ್ತಿಭಿಃ ॥ | ಬೃಹತೀ |
| ಊರ್ಧ್ವಃ...ವಿಹ್ವಯಾಮಹೇ ॥ | ಉಪರಿಷ್ಟಾದ್ಬೃಹತೀ |
| ಸ ಜಾತಃ...ಗಾಃ ॥ | ತ್ರಿಷ್ಟುಪ್ |
| ಸ್ಥಿರೋ ಭವ...ಪುರೀಷವಾಹನಃ ॥ | ಅನುಷ್ಟುಪ್ |
| ಶಿವೋ ಭವ...ವನಸ್ಪತೀನ್ ॥ | ಬೃಹತೀ |
| ಪ್ರೈತು...ಪುರಾ ॥ | ಅನುಷ್ಟುಪ್ |
| ರಾಸಭೋ ವಾಂ...ಇತಃ ॥ | ಅನುಷ್ಟುಪ್ |

ವೃಷಾಗ್ನಿಂ...ಸತ್ಯಮ್ ॥ ಯಜುರಂತಾ ಜಗತೀ

ಓಷಧಯಃ...ಹನತ್ ॥ ತ್ರಿಷ್ಟುಪ್

ಓಷಧಯಃ...ಅಸದತ್ ॥ ಅನುಷ್ಟುಪ್

## ಪಂಚಮೋಽನುವಾಕಃ

ವಿಷಾಡಸಾ...ಪ್ರಣೀತೌ ॥ ತ್ರಿಷ್ಟುಪ್

ಆಪೋ ಹಿ...ಚಕ್ಷಸೇ ॥ ಗಾಯತ್ರೀ

ಯೋ ವಃ...ಮಾತರಃ ॥ ಗಾಯತ್ರೀ

ತಸ್ಮಾ...ಚ ನಃ ॥ ಗಾಯತ್ರೀ

ಮಿತ್ರಃ...ವಿಭುಮ್ ॥ ಅನುಷ್ಟುಪ್

ಅಯಕ್ಷ್ಮಾಯ...ಅಂಗಿರಸ್ವತ್ ॥ ಮಹಾಬೃಹತೀ

ರುದ್ರಾಃ...ರೋಚತೇ ॥ ಅನುಷ್ಟುಪ್

ಸಗ್ಂಸೃಷ್ಟಾಂ...ತಾಮ್ ॥ ಅನುಷ್ಟುಪ್

ಸಿನೀವಾಲೀ...ಹಸ್ತಯೋಃ ॥ ಅನುಷ್ಟುಪ್

ಉಖಾಂ...ಗರ್ಭ ಆ ॥ ಅನುಷ್ಟುಪ್

ಮಖಸ್ಯ ಶಿರೋಽಸಿ ॥ ಯಜುಃ

ಯಜ್ಞಸ್ಯ...ಸ್ಥಃ ॥ ಯಜುಃ

| | |
|---|---|
| ವಸವಸ್ತ್ವಾ...ಯಜಮಾನಾಯ ॥ | ಯಜುಃ |
| ರುದ್ರಾಸ್ತ್ವಾ...ಯಜಮಾನಾಯ ॥ | ಯಜುಃ |
| ಆದಿತ್ಯಾಸ್ತ್ವಾ...ಯಜಮಾನಾಯ ॥ | ಯಜುಃ |
| ವಿಶ್ವೇ ತ್ವಾ...ಯಜಮಾನಾಯ ॥ | ಯಜುಃ |
| ಅದಿತ್ಯೈ ರಾಸ್ನಾಸಿ ॥ | ಯಜುಃ |
| ಅದಿತಿಸ್ತೇ...ಅಂಗಿರಸ್ವತ್ ॥ | ಯಜುಃ |
| ಕೃತ್ವಾಯ...ಶ್ರಪಯಾನಿತಿ ॥ | ಅನುಷ್ಟುಪ್ |

## ಷಷ್ಠೋಽನುವಾಕಃ

| | |
|---|---|
| ವಸವಸ್ತ್ವಾ...ಅಂಗಿರಸ್ವತ್ ॥ | ಯಜುಃ |
| ರುದ್ರಾಸ್ತ್ವಾ...ಅಂಗಿರಸ್ವತ್ ॥ | ಯಜುಃ |
| ಆದಿತ್ಯಾಸ್ತ್ವಾ...ಅಂಗಿರಸ್ವತ್ ॥ | ಯಜುಃ |
| ವಿಶ್ವೇ ತ್ವಾ...ಅಂಗಿರಸ್ವತ್ ॥ | ಯಜುಃ |
| ಇಂದ್ರಸ್ತ್ವಾ...ಅಂಗಿರಸ್ವತ್ ॥ | ಯಜುಃ |
| ವಿಷ್ಣುಸ್ತ್ವಾ...ಅಂಗಿರಸ್ವತ್ ॥ | ಯಜುಃ |
| ವರುಣಸ್ತ್ವಾ...ಅಂಗಿರಸ್ವತ್ ॥ | ಯಜುಃ |
| ಅದಿತಿಸ್ತ್ವಾ...ಅವಟ ॥ | ಯಜುಃ |

| | |
|---|---|
| ದೇವಾನಾಂ ತ್ವಾ...ದಧತೂಖೇ ॥ | ಯಜುಃ |
| ಧಿಷಣಾಸ್ತ್ವಾ...ಅಭೀಂಧತಾಮುಖೇ ॥ | ಯಜುಃ |
| ಗ್ನಾಸ್ತ್ವಾ...ಶ್ರಪಂತೂಖೇ ॥ | ಯಜುಃ |
| ವರೂತ್ರಯೋ...ಪಚಂತೂಖೇ ॥ | ಯಜುಃ |
| ಜನಯಸ್ತ್ವಾ...ಪಚಂತೂಖೇ ॥ | ಯಜುಃ |
| ಮಿತ್ರೈತಾ...ಅಭಿತ್ತ್ಯೈ ॥ | ಶಂಕುಮತೀ ಉಷ್ಣಿಕ್ |
| ಅಭೀಮಾಂ...ಪೃಥಿವೀಮ್ ॥ | ಗಾಯತ್ರೀ |
| ಮಿತ್ರಸ್ಯ...ಶ್ರವಸ್ತಮಮ್ ॥ | ಗಾಯತ್ರೀ |
| ದೇವಸ್ತ್ವಾ...ಶಕ್ತ್ಯಾ ॥ | ಗಾಯತ್ರೀ |
| ಅಪದ್ಯಮಾನಾ...ತ್ವಮ್ ॥ | ಅನುಷ್ಟುಪ್ |
| ವಸವಸ್ತ್ವಾಽಽಚ್ಛೃಂದಂತು...ಅಂಗಿರಸ್ವತ್ ॥ | ಯಜುಃ |
| ರುದ್ರಾಸ್ತ್ವಾಽಽಚ್ಛೃಂದಂತು...ಅಂಗಿರಸ್ವತ್॥ | ಯಜುಃ |
| ಆದಿತ್ಯಾಸ್ತ್ವಾಽಽಚ್ಛೃಂದಂತು...ಅಂಗಿರಸ್ವತ್ ॥ | ಯಜುಃ |
| ವಿಶ್ವೇ ತ್ವಾ ದೇವಾಃ...ಅಂಗಿರಸ್ವತ್ ॥ | ಯಜುಃ |

## ಸಪ್ತಮೋಽನುವಾಕಃ

| | |
|---|---|
| ಸಮಾಸ್ತ್ವಾ...ಪೃಥಿವ್ಯಾಃ ॥ | ತ್ರಿಷ್ಟುಪ್ |

| | |
|---|---|
| ಸಂ ಚೇಧ್ಯಸ್ವ...ಅಗ್ನೇ ॥ | ತ್ರಿಷ್ಟುಪ್ |
| ತ್ವಾಮಗ್ನೇ...ಅಪ್ರಯುಚ್ಛನ್ ॥ | ತ್ರಿಷ್ಟುಪ್ |
| ಇಹೈವ...ಅನಿಷ್ಟೃತಃ ॥ | ತ್ರಿಷ್ಟುಪ್ |
| ಕ್ಷತ್ರೇಣಾಗ್ನೇ...ದಿದಿಹೀಹ ॥ | ತ್ರಿಷ್ಟುಪ್ |
| ಅತಿ ನಿಹೋ...ದಾಃ ॥ | ತ್ರಿಷ್ಟುಪ್ |
| ಅನಾಧೃಷ್ಯೋ...ವೃಧೇ ॥ | ತ್ರಿಷ್ಟುಪ್ |
| ಬೃಹಸ್ಪತೇ...ದೇವಾಃ ॥ | ತ್ರಿಷ್ಟುಪ್ |
| ಅಮುತ್ರಭೂಯಾತ್...ಶಚೀಭಿಃ ॥ | ತ್ರಿಷ್ಟುಪ್ |
| ಉದ್ವಯಂ...ಉತ್ತಮಮ್ ॥ | ಅನುಷ್ಟುಪ್ |

## ಅಷ್ಟಮೋಽನುವಾಕಃ

| | |
|---|---|
| ಊರ್ಧ್ವಾಃ...ಸೂನೋಃ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ತನೂನಪಾ...ಘೃತೇನ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ಮಧ್ವಾ...ವಿಶ್ವವಾರಃ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ಆಚ್ಛಾಯಂ...ಪ್ರಯತ್ಸು ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ಮಧ್ವಾ...ವಿಶ್ವವಾರಃ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ಆಚ್ಛಾಯ...ಪ್ರಯತ್ಸು ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |

| | |
|---|---|
| ಸ ಯಕ್ಷದಸ್ಯ...ಚ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ದ್ವಾರೋ...ಪತ್ಯಮಾನಾಃ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ತೇ ಅಸ್ಯ...ನಃ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ದೈವ್ಯಾ ಹೋತಾರೌ...ಸ್ವಿಷ್ಟಿಮ್ ॥ | ಪುರ ಉಷ್ಣಿಕ್ |
| ತಿಸ್ರೋ...ಗೃಣಾನಾ ॥ | ಶಂಕುಮತೀ ಗಾಯತ್ರೀ |
| ತನ್ನಸ್ತುರೀಪಂ...ಅಸ್ಮೇ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ವನಸ್ಪತೇ...ಸೂದಯಾತಿ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ಅಗ್ನೇ ಸ್ವಾಹಾ...ಜುಷಂತಾಮ್ ॥ | ಪಿಪೀಲಿಕಾಮಧ್ಯಾ ಅನುಷ್ಟುಪ್ |
| ಹಿರಣ್ಯಗರ್ಭಃ...ವಿಧೇಮ ॥ | ತ್ರಿಷ್ಟುಪ್ |
| ಯಃ ಪ್ರಾಣತಃ...ವಿಧೇಮ ॥ | ತ್ರಿಷ್ಟುಪ್ |
| ಯಃ ಆತ್ಮದಾಃ...ವಿಧೇಮ ॥ | ತ್ರಿಷ್ಟುಪ್ |
| ಯಸ್ಯೇಮೇ...ವಿಧೇಮ ॥ | ತ್ರಿಷ್ಟುಪ್ |
| ಯಂ ಕ್ರಂದಸೀ...ವಿಧೇಮ ॥ | ತ್ರಿಷ್ಟುಪ್ |
| ಯೇನ ದ್ಯೌಃ...ವಿಧೇಮ ॥ | ತ್ರಿಷ್ಟುಪ್ |
| ಆಪೋ ಹ...ವಿಧೇಮ ॥ | ತ್ರಿಷ್ಟುಪ್ |
| ಯಶ್ಚಿದಾಪೋ...ವಿಧೇಮ ॥ | ತ್ರಿಷ್ಟುಪ್ |

## ನವಮೋಽನುವಾಕಃ

| | |
|---|---|
| ಆಕೂತಿಮಗ್ನಿಂ...ಸ್ವಾಹಾ ॥ | ಯಜುಃ |
| ಮನೋ ಮೇಧಾಂ...ಸ್ವಾಹಾ ॥ | ಯಜುಃ |
| ಚಿತ್ತಂ ವಿಜ್ಞಾತಂ...ಸ್ವಾಹಾ ॥ | ಯಜುಃ |
| ವಾಚೋ ವಿಧೃತಿಂ...ಸ್ವಾಹಾ ॥ | ಯಜುಃ |
| ಪ್ರಜಾಪತಯೇ...ಸ್ವಾಹಾ ॥ | ಯಜುಃ |
| ಅಗ್ನಯೇ...ಸ್ವಾಹಾ ॥ | ಯಜುಃ |
| ವಿಶ್ವೇ ದೇವಸ್ಯ....ಪುಷ್ಯಸೇ ಸ್ವಾಹಾ ॥ | ಅನುಷ್ಟುಪ್ |
| ಮಾ ಸು ಭಿತ್ಥಾ...ಕರಿಷ್ಯಥಃ ॥ | ಅನುಷ್ಟುಪ್ |
| ದೃಗ್ಂಹಸ್ವ...ಅಸ್ಮಿನ್ನ್ ॥ | ತ್ರಿಷ್ಟುಪ್ |
| ಮಿತ್ರೈಲತಾ...ಅಭಿತ್ತ್ಯೈಃ ॥ | ಪಿಪೀಲಿಕಾಮಧ್ಯಾ ಉಷ್ಣಿಕ್ |
| ದೃನ್ಹಃ..ಅದ್ಭುತಃ ॥ | ಗಾಯತ್ರೀ |
| ಪರಸ್ಯಾಃ...ಅವ ॥ | ಗಾಯತ್ರೀ |
| ಪರಮಸ್ಯಾಃ...ಮೃಧಃ ॥ | ಗಾಯತ್ರೀ |
| ಸೀದ...ಭಾಹಿ ॥ | ತ್ರಿಷ್ಟುಪ್ |
| ಅಂತರಗ್ನೇ...ಭವ ॥ | ಅನುಷ್ಟುಪ್ |

| | |
|---|---|
| ಶಿವೋ ಭೂತ್ವಾ...ಆಸದಃ ॥ | ಅನುಷ್ಟುಪ್ |

## ॥ ದಶಮೋಽನುವಾಕಃ ॥

| | |
|---|---|
| ಯದಗ್ನೇ...ಯವಿಷ್ಠ್ಯ ॥ | ಅನುಷ್ಟುಪ್ |
| ಯದತ್ಯುಪ...ಯವಿಷ್ಠ್ಯ ॥ | ಅನುಷ್ಟುಪ್ |
| ರಾತ್ರಿಗ್ಂ...ರಿಷಾಮ ॥ | ತ್ರಿಷ್ಟುಪ್ |
| ನಾಭಾ...ಸಾಸಹಿಮ್ ॥ | ತ್ರಿಷ್ಟುಪ್ |
| ಯಾಸ್ಸೇನಾ...ದಧಾಮ್ಯಾಸ್ಯೇ ॥ | ಅನುಷ್ಟುಪ್ |
| ದಗ್ಗ್ಂಷ್ಟ್ರಾಭ್ಯಾಂ...ಸುಖಾದಿತಾನ್ ॥ | ಅನುಷ್ಟುಪ್ |
| ಯೇ ಜನೇಷು...ಜಂಭಯೋಃ ॥ | ಅನುಷ್ಟುಪ್ |
| ಯೋ ಅಸ್ಮಭ್ಯಂ...ಕುರು ॥ | ಅನುಷ್ಟುಪ್ |
| ಸಗ್ಂಶಿತಂ...ಪುರೋಹಿತಃ ॥ | ಅನುಷ್ಟುಪ್ |
| ಉದೇಷಾಂ...ಅಹಮ್ ॥ | ಅನುಷ್ಟುಪ್ |
| ದೃಶಾನೋ...ಸುರೇತಾಃ ॥ | ತ್ರಿಷ್ಟುಪ್ |
| ವಿಶ್ವಾ ರೂಪಾಣಿ...ವಿರಾಜತಿ ॥ | ಜಗತೀ |
| ನಕ್ತೋಷಾಸಾ...ದ್ರವಿಣೋದಾಃ ॥ | ತ್ರಿಷ್ಟುಪ್ |
| ಸುಪರ್ಣೋಽಸಿ...ನಾಮ ॥ | ಯಜುಃ |

| | |
|---|---|
| ಸುಪರ್ಣೋಽಸಿ...ಪತ ॥ | ಯಜುಃ |

॥ ಏಕಾದಶೋಽನುವಾಕಃ ॥

| | |
|---|---|
| ಅಗ್ನೇ ಯಂ...ಗಚ್ಛತಿ ॥ | ಗಾಯತ್ರೀ |
| ಸೋಮ...ಭವ ॥ | ಗಾಯತ್ರೀ |
| ಅಗ್ನಿರ್ಮೂರ್ಧಾ.. ಜಿನ್ವತಿ ॥ | ಗಾಯತ್ರೀ |
| ಭುವಃ...ಹವ್ಯವಾಹಮ್ ॥ | ತ್ರಿಷ್ಟುಪ್ |
| ತ್ವಂ ನಃ ಸೋಮ...ಸಖಾ॥ | ಗಾಯತ್ರೀ |
| ಯಾ ತೇ ಧಾಮಾನಿ...ಗೃಭಾಯ॥ | ತ್ರಿಷ್ಟುಪ್ |
| ತತ್ಸವಿತುಃ...ಪ್ರಚೋದಯಾತ್ ॥ | ಗಾಯತ್ರೀ |
| ಅಚಿತ್ತೀ...ಅನಾಗಸಃ ॥ | ತ್ರಿಷ್ಟುಪ್ |
| ಚೋದಯಿತ್ರೀ...ಸರಸ್ವತೀ ॥ | ಗಾಯತ್ರೀ |
| ಪಾವೀರವೀ...ಯಗ್ಂಸತ್ ॥ | ತ್ರಿಷ್ಟುಪ್ |
| ಪೂಷಾ ಗಾ...ನಃ ॥ | ಗಾಯತ್ರೀ |
| ಶುಕ್ರಂ ತೇ...ರಾತಿರಸ್ತು ॥ | ತ್ರಿಷ್ಟುಪ್ |
| ತೇಽವರ್ಧಂತ...ಪ್ರಿಯೇ ॥ | ಜಗತೀ |
| ಪ್ರ ಚಿತ್ರಮ್...ಮಘೇಭ್ಯಃ ॥ | ತ್ರಿಷ್ಟುಪ್ |

ವಿಶ್ವೇ ದೇವಾಃ...ಷಯಃ ॥ ಗಾಯತ್ರೀ

ವಿಶ್ವೇ ದೇವಾಃ...ಮಾದಯಧ್ವಮ್ ॥ ತ್ರಿಷ್ಟುಪ್

ದ್ಯಾವಾ ನಃ...ಯಚ್ಛತಾಮ್ ॥ ಗಾಯತ್ರೀ

ಪ್ರ ಪೂರ್ವಜೇ...ವರೂಥಮ್ ॥ ತ್ರಿಷ್ಟುಪ್

ಅಗ್ನಿಗ್ಂ...ದಧತ್ ॥ ಗಾಯತ್ರೀ

ಸ ಹವ್ಯವಾಟ್...ಮ್ಯೃಣ್ವತಿ ॥ ಗಾಯತ್ರೀ

ಶಂ ನೋ...ಅಮೀವಾಃ ॥ ತ್ರಿಷ್ಟುಪ್

ವಾಜೇವಾಜೇ...ಯಾನ್ಯೈಃ ॥ ತ್ರಿಷ್ಟುಪ್

ಯುಂಜಾನ ಇಮಾಮಗೃಭ್ಣನ್ದೇವಸ್ಯ ಸಂ ತೇ ವಿ ಪಾಜಸಾ ವಸವಸ್ತ್ವಾ ಸಮಾಸ್ತ್ವೋರ್ಧ್ವಾ ಅಸ್ಯಾಽಽಕೂತಿಂ ಯದಗ್ನೇ ಯಾನ್ಯಗ್ನೇ ಯಂ ಯಜ್ಞಮೇಕಾದಶ ॥ 11 ॥

ಯುಂಜಾನೋ ವರ್ಮ ಚ ಸ್ಥ ಆದಿತ್ಯಾಸ್ತ್ವಾ ಭಾರತೀ ಸ್ವಾಗ್ಂ ಅಹಗ್ಂ ಷಟ್ಚತ್ವಾರಿಗ್ಂಶತ್ ॥ 46 ॥

ಯುಂಜಾನೋ ವಾಜೇ ವಾಜೇ ॥

# ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ – 1**

(ವೇದಗಳ ಪರಿಚಯ, ಕೃಷ್ಣ ಯಜುರ್ವೇದ ಪರಿಚಯ, ಯಜ್ಞಗಳ ಪರಿಚಯ)

**ಸಂಪುಟ – 2**

ತೈತ್ತಿರೀಯ ಸಂಹಿತಾ (ಪ್ರಥಮ ಕಾಂಡ 1–2 ಪ್ರಪಾಠಕಗಳು)

**ಸಂಪುಟ – 3**

ತೈತ್ತಿರೀಯ ಸಂಹಿತಾ (ಪ್ರಥಮ ಕಾಂಡ 3–4–5 ಪ್ರಪಾಠಕಗಳು)

**ಸಂಪುಟ – 4**

ತೈತ್ತಿರೀಯ ಸಂಹಿತಾ (ಪ್ರಥಮ ಕಾಂಡ 6–7–8 ಪ್ರಪಾಠಕಗಳು)

**ಸಂಪುಟ – 5**

ತೈತ್ತಿರೀಯ ಸಂಹಿತಾ (ದ್ವಿತೀಯ ಕಾಂಡ 1–2 ಪ್ರಪಾಠಕಗಳು)

**ಸಂಪುಟ – 6**

ತೈತ್ತಿರೀಯ ಸಂಹಿತಾ (ದ್ವಿತೀಯ ಕಾಂಡ 3–4 ಪ್ರಪಾಠಕಗಳು)

**ಸಂಪುಟ – 7**

ತೈತ್ತಿರೀಯ ಸಂಹಿತಾ (ದ್ವಿತೀಯ ಕಾಂಡ 5–6 ಪ್ರಪಾಠಕಗಳು)

**ಸಂಪುಟ – 8**

ತೈತ್ತಿರೀಯ ಸಂಹಿತಾ (ತೃತೀಯ ಕಾಂಡ 1–2–3 ಪ್ರಪಾಠಕಗಳು)

**ಸಂಪುಟ – 9**

ತೈತ್ತಿರೀಯ ಸಂಹಿತಾ (ತೃತೀಯ ಕಾಂಡ 4–5 ಪ್ರಪಾಠಕಗಳು)
(ಚತುರ್ಥ ಕಾಂಡ 1ನೆಯ ಪ್ರಪಾಠಕ)

ಪ್ರತಿಗಳಿಗೆ :
**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ.)**
31, ಪಂಪಮಹಾಕವಿರಸ್ತೆ, ಬೆಂಗಳೂರು–560 004
ದೂರವಾಣಿ : 26677852

ಮುದ್ರಕರು : ಪರಿಮಳ ಮುದ್ರಣಾಲಯ, ಬ್ಯಾಟರಾಯನಪುರ, ಮೈಸೂರು ರಸ್ತೆ, ಬೆಂಗಳೂರು–26. ದೂ : 26758058